# ಕಸ್ತೂರಿ

## ಕನ್ನಡ ಡೈಜೆಸ್ಟ್




ವ್ಯವಸ್ಥಾಪಕ ಸಂಪಾದಕ
ಕೆ. ಶಾಮರಾವ್

ಸಂಪಾದಕ
ಆರ್.ಎ. ಉಪಾಧ್ಯ

ಸಹಸಂಪಾದಕ
ಮಾಧವ ನಾ. ಮಹಿಷಿ

ಸಹಾಯಕ ಸಂಪಾದಕ
ಎಸ್.ಕೆ. ಶಾಮಸುಂದರ

ಮುಖಪುಟ:
ಡ್ಯಾನಿಶ್ ತೈಲಚಿತ್ರ
ಕಲಾವಿದ: ಕ್ರಿಸ್ಟೋಫರ್ ವಿಲ್‌ಹೆಲ್ಮ್ ಇಕರ್ಸ್‌ಬರ್ಗ್


## ಬೆಳಕಿಂಡಿ

● ಡಾಂಭಿಕ ಭಕ್ತರಾಗುವುದಕ್ಕಿಂತ ನಾಸ್ತಿಕರಾಗಿರುವುದೇ ಲೇಸು.

- ವಿವೇಕಾನಂದ

● ದುರ್ಗುಣಿಗಳ ದುರ್ಗುಣಗಳನ್ನು ನೀವು ದೂಷಿಸಬಹುದೇ ವಿನಾ ಆ ವ್ಯಕ್ತಿಯನ್ನಲ್ಲ.

- ಬ್ರೆನಾರ್ಡ್

● ತಿಳಿದೆಲ್ಲ ಉಪದೇಶಗಳನ್ನು ಇತರರಿಗೆ ಬೋಧಿಸಿ ಕಳೆದುಕೊಳ್ಳಬೇಡ. ನಿನಗಾಗಿ ಕೆಲವನ್ನಾದರೂ ಇರಿಸಿಕೊಳ್ಳು.

- ಎಮರ್ಸನ್

● ಕಾರ್ಯ ಮಾಡುವಾಗ ದಕ್ಷನಾಗಿರು. ಮಾತನಾಡುವಾಗ ಎಚ್ಚರದಿಂದಿರು. ಯೋಚಿಸುವಾಗ ದೂರದೃಷ್ಟಿಯಿಂದಿರು.

- ಮಾರ್ಕ್ಸ್

● ತನ್ನ ಕುಟುಂಬವನ್ನು ತೂಗಿಸಿಕೊಂಡು ಹೋಗಲಾರದ ವ್ಯಕ್ತಿ ಎಷ್ಟೇ ವಿದ್ಯಾವಂತನಾಗಿದ್ದರೂ ಸುಶಿಕ್ಷಿತನೆನಿಸುವುದಿಲ್ಲ.

- ಬರ್ನ್ಸ್

● ಸತ್ಪುರುಷನು ಯಾವುದನ್ನೂ ತನ್ನಲ್ಲಿ ಬಚ್ಚಿಟ್ಟುಕೊಳ್ಳನಾರನು. ತನ್ನ ಬಗ್ಗೆ ತಾನಾಗಿ ಏನೂ ಹೇಳಿಕೊಳ್ಳಲಾರನು.

- ನಾರ್ಮನ್ ಪೀಲ್

● ಮಡದಿ ನುಡಿಯ ಕೇಳಿ ಜಗಳಕೊಬ್ಬರ ಕೂಡ ಹೋಗಬಾರದು. ಕೋಪಿಗಳಿದ್ದಲ್ಲಿ ಅನುಭವ ಗೋಷ್ಠಿಯ ಮಾಡಬಾರದು.

- ಕನಕದಾಸರು

ಹೊಸ ಚಂದಾ ದರಗಳು:

| | | |
|---|---|---|
| ಬಿಡಿ ಸಂಚಿಕೆ | ... | 3=00 |
| 1 ವರ್ಷಕ್ಕೆ | ಅಂಚೆಸೇರಿ | 34=00 |
| 2 ವರ್ಷಕ್ಕೆ | ... | 65=00 |
| 3 ವರ್ಷಕ್ಕೆ | ... | 100=00 |

**KASTURI, AUGUST 1988**

### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



## ಮರಣೋತ್ತರ ದೇಹದಾನ

ನೀವು ಕಳಿಸಿದ ಜುಲೈ 'ಕಸ್ತೂರಿ' ಸಿಕ್ಕಿತು. ನನಗೆ ಕನ್ನಡ ಬರುವುದಿಲ್ಲವಾದ್ದರಿಂದ ನಾನು ಮಿತ್ರರೊಬ್ಬರಿಂದ ಇಂಗ್ಲೀಷಿಗೆ ಭಾಷಾಂತರ ಮಾಡಿಸಿಕೊಂಡು ಓದಿದೆ. ತುಂಬ ಮಾರ್ಮಿಕವಾಗಿ ಬರೆದಿದ್ದೀರಿ. 'ಕಸ್ತೂರಿ'ಯನ್ನು ಓದಿ ಪ್ರಭಾವಿತರಾದ ಕೆಲವರು ಆಗಲೇ ನನ್ನನ್ನು ಕಂಡು ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದ್ದಾರೆ.

ದೇಹದಾನಕ್ಕಾಗಿ ಅನುಸರಿಸಬೇಕಾದ ಕ್ರಮವನ್ನು ಇನ್ನಷ್ಟು ಸುಲಭಗೊಳಿಸಲು ನಾನು ಪ್ರಯತ್ನಿಸಿ ಸಫಲನಾಗಿದ್ದೇನೆ. ಆಗಲೇ 15 ಜನರು ಅದರ ಪ್ರಯೋಜನ ಪಡೆದಿದ್ದಾರೆ. ದೇಹದಾನ ಮಾಡುವ ಇಚ್ಛೆಯುಳ್ಳವರು ಅದಕ್ಕಾಗಿ ಅಗತ್ಯವಿರುವ ಫಾರ್ಮು ತುಂಬಿದ ನಂತರ ಅವರು ಸದಾ ತಮ್ಮ ಜೇಬಿನಲ್ಲಿರಿಸಿಕೊಳ್ಳಬಹುದಾದಂತೆ ಅವರಿಗೆ 'ದಾನಿಯ ಪಾಸ್' ಒಂದನ್ನು ನೀಡುವ ವ್ಯವಸ್ಥೆಯನ್ನು ನಮ್ಮ 'ದೇಹದಾನ ಸಹಾಯಕ ಮಂಡಳಿ'ಯ ವತಿಯಿಂದ ಮಾಡಿದ್ದೇನೆ. ಪಾಶ್ಚಾತ್ಯ ದೇಶಗಳಲ್ಲಿಂಥ ಕ್ರಮ ಈಗಾಗಲೇ ಜಾರಿಯಲ್ಲಿದೆ. ಅಂಥವರು ಮಹಾರಾಷ್ಟ್ರದ ಹೊರಗಡೆ ನಿಧನ ಹೊಂದಿದರೂ ಈ ಪಾಸಿನಿಂದಾಗಿ ಅವರ ಇಚ್ಛೆ ಬಹಿರಂಗಪಡುವುದರಿಂದ ಸಾಂಪ್ರದಾಯಿಕ ರೀತಿಯಲ್ಲಿ ಅವರ ಶವ ಸಂಸ್ಕಾರವಾಗದೇ ಮೃತ ಶರೀರವನ್ನು ವೈದ್ಯ ವಿದ್ಯಾಲಯಕ್ಕೆ ಕೊಡಲು ಅನುಕೂಲವಾಗುತ್ತದೆ. ಯಾವುದೇ ಕಾನೂನಿನ ಅಡೆತಡೆಯೂ ಉಳಿಯುವುದಿಲ್ಲ.

ಕರ್ನಾಟಕದ ಜನತೆಯೂ ತಮ್ಮ ನೆರೆರಾಜ್ಯದಲ್ಲಿ ನಡೆದಿರುವ ಆಂದೋಲನದಿಂದ ಸ್ಫೂರ್ತರಾಗುತ್ತಾರೆಂದು ಹಾರೈಯಿಸುತ್ತೇನೆ.

**ಪುಣೆ** — **ಜೆ.ಎಂ. ಸೊಹೊನಿ**

'ದೇಹದಾನ' ಕುರಿತ ಲೇಖನ ಕರ್ನಾಟಕದ ವಿಚಾರವೇತ್ತರ ಕಣ್ಣು ತೆರೆಯಿಸಬೇಕು. ಕರ್ನಾಟಕದಲ್ಲಿ ಈ ಕುರಿತು ಕಾನೂನಿನಲ್ಲಿ ಸರಿಯಾದ ಅವಕಾಶಗಳೇ ಇಲ್ಲದಿದ್ದುದು ಶೋಚನೀಯ. ಮಹಾರಾಷ್ಟ್ರದಿಂದ ಪಾಠ ಕಲಿತು ನಮ್ಮ ಸರಕಾರ ಶರೀರದ ಬೇರೆ ಬೇರೆ ಅಂಗಗಳ ದಾನ ಹಾಗೂ ಅಂತಿಮವಾಗಿ ದೇಹದಾನ ಮಾಡಬಯಸುವವರ ದಾರಿಯನ್ನು ಸುಲಭಗೊಳಿಸಬೇಕು.

ಕಾನೂನು ಏನೇ ಮಾಡಿದರೂ ಜನಗಳಲ್ಲಿ ಜಾಗ್ರತಿಯಾಗದಿದ್ದರೆ ಅದೆಲ್ಲ ವ್ಯರ್ಥ. ಮಹಾರಾಷ್ಟ್ರದ ಮಾದರಿಯ ಆಂದೋಲನ ಇಲ್ಲಿಯೂ ಆರಂಭವಾಗಬೇಕು. ನಾವು ಮಡಿವಂತಿಕೆಯನ್ನು ತೊರೆದು ವಾಸ್ತವ ಜಗತ್ತಿಗೆ ಇಳಿಯಬೇಕು.

**ಧಾರವಾಡ** — **ಸುರೇಶ ದೇಶಪಾಂಡೆ**

## ರಾಜ ಕಪೂರ್

ಆ ಮಹಾನ್ 'ಕನಸುಗಳ ವ್ಯಾಪಾರಿ'ಗೆ ಅರ್ಪಿಸಿದ ವಿಭಿನ್ನ ಬಗೆಯ ಶ್ರದ್ಧಾಂಜಲಿ " 'ನನ್ನ' ರಾಜ ಕಪೂರ್."

**ಸಿದ್ದಾಪುರ** — **ಹೊನ್ನೇಗುಂಡಿ ರಾಮಕೃಷ್ಣ**

'ತೊರೆದು ಜೀವಿಸಬಹುದೆ?' ಬರೆದ ಖಜಾನೆ ಕೃಷ್ಣಮೂರ್ತಿಗಳ ಲೇಖನಿಯಿಂದ ಮೂಡಿದ " 'ನನ್ನ' ರಾಜ ಕಪೂರ್" ಹೆಚ್ಚಿಗೆ ಸಮಾಧಾನ ಕೊಡದಿದ್ದರೂ ನೀರಸವೆನಿಸಲಿಲ್ಲ.

**ತುಮಕೂರು** — **ಎನ್. ಸುಮತಿ**

ಇದು ದಿ. ರಾಜಕಪೂರ್‌ಗೆ ಅರ್ಪಿಸಿದ ಶ್ರದ್ಧಾಂಜಲಿಯಾಗದೆ ಖಜಾನೆ ಕೃಷ್ಣಮೂರ್ತಿಗಳು ತಮ್ಮ ಗತ ಬಾಳಿನ ಘಟನೆಗಳಿಗೆ ಅರ್ಪಿಸಿಕೊಂಡ ಶ್ರದ್ಧಾಂಜಲಿಯಾಯಿತು.

**ದೇವದುರ್ಗ** — **ವಿಜಯಭಾಸ್ಕರ**

## ಇದು ಜೀವನ!

ಜುಲೈ ಸಂಚಿಕೆಯ 'ಇದುವೆ ಜೀವ..'ದಲ್ಲಿ ಚಿಂತಾಮಣಿ ಸ್ವಾಹತರ ಪ್ರಸಂಗದಲ್ಲಿ ಸಮಾರೋಪಕ್ಕೆ ಬಂದ ಅಧ್ಯಕ್ಷರು ಎಸೆದ ಗಂಭೀರ ಪ್ರಶ್ನೆಯ ಕುರಿತು...

ಆ ಸಭೆ ಅಧ್ಯಕ್ಷರ ಪ್ರಶ್ನೆಯ ಗಾಂಭೀರ್ಯವನ್ನು ಗ್ರಹಿಸಲು ಅಸಮರ್ಥವಾಗಿತ್ತು. ಪ್ರಶ್ನೆಯ ಹಿಂದಿನ ವೈಚಾರಿಕ ಸವಾಲನ್ನು ಎದುರಿಸಲಾರೆವೆಂಬುದೂ ದೀಕ್ಷಿತರಿಗೆ ಬಹುಶಃ ಗೊತ್ತಿರಲಿಲ್ಲ. ಅಷ್ಟೇ ಅಲ್ಲ, ಪ್ರಶ್ನೆಯ ದೃಷ್ಟಿಯಿಂದ ತೀರಾ ಅಸಂಬದ್ಧವಾದ ಒಂದು ಮಿಥ್ಯಾಧಾರಿತ ಉಪಮಾನವನ್ನು ಸಭೆಯ ಮುಂದಿಟ್ಟರು. ಸಭೆ ಈ ಮಿಥ್ಯಾ ಉಪಮಾನವನ್ನು ಅಳೆಯಲಾರದವರಿಂದ ತುಂಬಿತ್ತು. ತಮ್ಮ ನಗು ಹೆಡ್ಡತನದ್ದು ಎಂದು ಗೊತ್ತೇ ಇಲ್ಲದ ಸಭೆ ಕರತಾಡನ ಮಾಡಿತ್ತು. ದೀಕ್ಷಿತರ ಸಮಯ ಸ್ಫೂರ್ತಿ!

ಬೆಂಕಿಯ ಪ್ರಭಾವ ಭೌತಿಕ. ಮಂತ್ರದ ಪ್ರಭಾವವೂ ಬೆಂಕಿಯ ಹಾಗೆ ಭೌತಿಕವೆ? ಇದು ಸಭಾಧ್ಯಕ್ಷರ ಪ್ರಶ್ನೆಯ ಸಾರ. ದೀಕ್ಷಿತರಿಗೆ ಪ್ರಶ್ನೆ ಅರ್ಥವಾಗಿದ್ದರೂ ಉತ್ತರ ಕೊಡಲು ಸಾಧ್ಯವಿಲ್ಲದ್ದರಿಂದ ಸಭೆಯ ಬಹುಮತವನ್ನರಿತು, ಅದನ್ನು ಸುಲಭವಾಗಿ ಬೆರಗು ಮಾಡುವ ಒಂದು ಮಿಥ್ಯಾ ಉಪಮಾನವನ್ನು ಸತ್ಯದ ಆಗ್ರಹವನ್ನು ಧ್ವನಿಸುತ್ತ ಎದುರು ಪ್ರಶ್ನೆಯ ರೂಪದಲ್ಲಿ ಇಟ್ಟರು ಸ್ಫೂರ್ತಿಯಿಂದ.

ದೀಕ್ಷಿತರು, ಅವರ ಸಿಬ್ಬಂದಿ ಮಂತ್ರಪಠಣದ ಆಧ್ಯಾತ್ಮಿಕ-ಮೌಲ್ಯವನ್ನು ಗ್ರಹಿಸಿರಲಿಲ್ಲ ಎನ್ನುವುದಕ್ಕೆ ಅವರು ಸವಾಲಾಗಿ ಎಸೆದ ಮಿಥ್ಯಾ ಉಪಮಾನವೇ ಸಾಕ್ಷಿ.

ಧರ್ಮಾಚರಣೆಯಲ್ಲಿ ಬೌದ್ಧಿಕ-ವಂಚನೆ ಸೇರದಂತೆ ಕಾವಲು ಕಾಯುವವರೇ ನಿಜವಾದ ದೀಕ್ಷಿತರು.

ಜಯಪುರ — ಕೆ.ವಿ. ಬಾಲಕೃಷ್ಣ

## ಉದ್ಬೋಧಕ

ಸಂಪತ್ತಿನಿಂದಲೇ ಏನೆಲ್ಲವನ್ನು ಸಾಧಿಸಬಹುದು ಎಂದುಕೊಂಡವರಿಗೆ ಜುಲೈ ಸಂಚಿಕೆಯಲ್ಲಿ ಮೂಡಿ ಬಂದ ನೀತಿ ಕಥೆ 'ಶ್ರಮದ ಫಲ' ಸತ್ಯವನ್ನು ಮನಗಾಣಿಸಿದೆ.

ಹಮ್ಮಿಗಿ — ಡಾ.ಎಚ್.ಎಂ. ಚನ್ನಬಸಯ್ಯ
— ಅಂದಾನಯ್ಯಸ್ವಾಮಿ ಕಣ್ವಿಮಠ

## ಒಂದು ಅನುಮಾನ

"ಸ್ವಧರ್ಮೇ ನಿಧನಂ ಶ್ರೇಯಃ" (ಜುಲೈ ಸಂಚಿಕೆ) ಓದಿದೆ. ಆದರೆ ಅದರ ಆಂಗ್ಲ ಅನುವಾದವನ್ನು It is glory to die doing one's own duty ಎಂದು ಲೇಖಕರು ಮಾಡಿದ್ದಾರೆ. ಮೇಲಿನ ಗೀತಾ ವಾಕ್ಯದ ಮುಂದಿನ ಸಾಲು "ಪರಧರ್ಮೋ ಭಯಾವಹಃ" ಎಂದಿದೆ. ಅಂದಮೇಲೆ ಇಲ್ಲಿ ಧರ್ಮವೆಂದರೆ 'ಕರ್ತವ್ಯ' ಅಥವಾ 'ಕರ್ಮ' ಹೇಗಾದೀತು?

ತುಮಕೂರು — 'ತರಂಗಿಣಿ'

## ಸ್ವಾರಸ್ಯವಿದೆ

ಜುಲೈ ಸಂಚಿಕೆಯಲ್ಲಿ ಪುನರ್‌ಪ್ರಕಟಿತ ವಿಲ್ ಡ್ಯೂರಾಂಟರ ವಿಚಾರಸಾರ 'ವೈರಾಗ್ಯಕ್ಕೆ ಮದ್ದು ವೇದಾಂತವಲ್ಲ'ವನ್ನೋದಿ ನನಗೆ ಅದರ ಉಪಶೀರ್ಷಿಕೆ 'ಜೀವಿತದಲ್ಲಿ ಸ್ವಾರಸ್ಯವಿದೆ' ಎಂಬುದು ಮನದಟ್ಟಾಯಿತು. ಹಲವಾರು ಕಷ್ಟನಷ್ಟಗಳಿಂದ ಬೇಸತ್ತಿದ್ದ ನನಗೆ ಈ ಲೇಖನ ಬಾಳಿಗೊಂದು ಹೊಸ ಬೆಳಕು ನೀಡಿದೆ.

ಬೆಂಗಳೂರು — ಅ. ಅಶ್ವತ್ಥನಾರಾಯಣ

## ಫ್ರಾಂಕೀನ್‌ಸ್ಟೀನ್

ಜುಲೈ ಸಂಚಿಕೆಯ ಪುಸ್ತಕ ವಿಭಾಗದಲ್ಲಿ ಪ್ರಕಟವಾದ 'ವಿಜ್ಞಾನಿಯ ವಿಕಟ ಸೃಷ್ಟಿ'ಯನ್ನು ಓದಿದಾಗ 'ಫ್ರಾಂಕೀನ್‌ಸ್ಟೀನ್' ಚಲನಚಿತ್ರವನ್ನು ಮತ್ತೆ ನೋಡಿದ ಅನುಭವವಾಯಿತು.

ಹತ್ತಿಮತ್ತೂರು — ಜಗದೀಶ ಮಠಪತಿ

## ನೆನೆಯುವ ಹಾಗೆ

ಇಷ್ಟು ದಿನ ಇಲ್ಲಿದ್ದರೂ ನಾನು ಅನುಭವಿಸಿರಲಿಲ್ಲ ಈ ಮಳೆಯನ್ನು 'ಕಸ್ತೂರಿ'ಯ ಜುಲೈ ಸಂಚಿಕೆಯ ಮೂಲಕ ಆ ಅನುಭವವನ್ನು ಆಸ್ವಾದಿಸಿ ಈ ಮಳೆಗಾಲದಲ್ಲಿ ನಿತ್ಯ ನೆನೆಯುವ ಹಾಗೆ ಮಾಡಿರುವ ಕೆ. ಚಂದ್ರಮೌಳಿಯವರಿಗೆ ತುಂ...ಬಾ ಥ್ಯಾಂಕ್ಸ್.

ಘಾಟಕೋಪರ್ — ಕೆ.ಪಿ.(ಶ್ರೀ). ಪ್ರಭು

## ಹೊಸ ಅನುಭವ

ಕಥೆಗಾತಿ ಶಶಿ ದೇಶಪಾಂಡೆಯವರ 'ಒಂದು ಹೊಸ ಅನುಭವ' ನಮಗೂ ಅದ್ಭುತ ಅನುಭವ ನೀಡಿತು. ಹಾಗೆಯೇ ನಮ್ಮ ಪ್ರಕಾಶರಿಗೂ ಆ ದೇಶದ ಪ್ರಕಾಶಕರಿಗೂ ಇರುವ ಅಂತರ ಗೊತ್ತಾಯಿತು. ಅವರಿಗೆ ನಿಜವಾಗಿಯೂ ಮರ್ಯಾದೆ ಮತ್ತು ವ್ಯವಹಾರಜ್ಞಾನ ಇದೆ.

ಬೆಂಗಳೂರು — ನ.ಕೃ. ಮೂರ್ತಿ

---

ಶಶಿ ದೇಶಪಾಂಡೆ ಕುರಿತ ಲೇಖನದಲ್ಲಿ (ಜುಲೈ 88) ಕೊನೆಗೆ ಅಡಿಟಿಪ್ಪಣಿಯಲ್ಲಿ '(ಶ್ರೀರಂಗ: ಮಗಳು ಕಂಡಂತೆ' ಕಸ್ತೂರಿ ಮೇ (1978 (ವಸಂತ ಸಂಚಿಕೆ)' ಎಂದಾಗಬೇಕಿತ್ತು. ಪ್ರಮಾದಕ್ಕಾಗಿ ವಿಷಾದಿಸುತ್ತೇವೆ.

— ಸಂಪಾದಕ

# ಕಸ್ತೂರಿ

ವರ್ಷ ೩೨ ಆಗಸ್ಟ್ ೧೯೮೮ ಸಂಚಿಕೆ ೧೨

## ದೊರೆಗೆ ತಕ್ಕ ಪಾಠ

ಒಂದಾನೊಂದು ಕಾಲದಲ್ಲಿ ಕಾಶಿಯನ್ನಾಳುತ್ತಿದ್ದ ಅರಸು ಬ್ರಹ್ಮದತ್ತ ಧರ್ಮವನ್ನೂ ನ್ಯಾಯವನ್ನೂ ಚಾಚೂ ತಪ್ಪದಂತೆ ಪಾಲಿಸಿಕೊಂಡು ಬಂದವನು. ಅವನ ರಾಜ್ಯದ ಪ್ರಜೆಗಳೆಲ್ಲ ಅವನನ್ನು ಸದಾ ಕಾಲವೂ ಕೊಂಡಾಡುತ್ತಲೇ ಇದ್ದರು. ಆದರೂ ಸ್ವತಃ ಅವನು ಮಾತ್ರ ಸಮಾಧಾನಚಿತ್ತನಾಗಿರಲಿಲ್ಲ. ತನ್ನಲ್ಲಿದ್ದಿರಬಹುದಾದ ಕೊರತೆಗಳನ್ನು ಯಾರೂ ಎತ್ತಿ ತೋರಿಸುತ್ತಿಲ್ಲವಲ್ಲವೆಂಬುದೇ ಅವನ ಚಿಂತೆಗೆ ಕಾರಣ.

ತನ್ನ ಆಸ್ಥಾನದಲ್ಲಿ ಯಾರೂ ತನ್ನ ವಿಷಯದಲ್ಲಿ ಕೆಟ್ಟ ಮಾತು ಆಡಲಾರರು ಎಂಬುದು ಗೊತ್ತಿದ್ದುದರಿಂದ ಆತ ಅರಮನೆಯ ಹೊರಗೆ ಹೋಗಿ ಅನೇಕರನ್ನು ವಿಚಾರಿಸಿದ; ಯಾರೂ ಅವನ ಬಗ್ಗೆ ಚಕಾರ ಸಹ ಕೆಟ್ಟ ಮಾತಾಡಲಿಲ್ಲ. ನಗರದ ಹೊರಗೆ ಹೋಗಿ ಪರೀಕ್ಷಿಸಿದಾಗಲೂ ಇದಕ್ಕಿಂತ ಭಿನ್ನವಾದ ಅನುಭವ ಅವನಿಗೆ ಬರಲಿಲ್ಲ. ಆಗ ಅವನಿಗೆ ತಾನು ಈ ರಾಜ್ಯದ ದೊರೆಯಾದ್ದರಿಂದ ಇವರಾರಿಗೂ ತನ್ನ ಬಗ್ಗೆ ಸ್ಪಷ್ಟ ಅಭಿಪ್ರಾಯ ಹೇಳಲು ಧೈರ್ಯ ಸಾಲುತ್ತಿಲ್ಲವೆಂದೆನಿಸಿತು.

ವೇಷ ಮರೆಸಿಕೊಂಡು ತನ್ನ ರಾಜ್ಯದಿಂದ ಹೊರಗೆ ಹೋದರೆ ತನ್ನ ಬಗ್ಗೆ ಆ ಜನ ವಾಸ್ತವವಾದ ಅಭಿಪ್ರಾಯವನ್ನು ಹೇಳಬಹುದು ಎಂದು ನಿರ್ಧರಿಸಿ, ಮಂತ್ರಿಗಳಿಗೆ ತಾತ್ಪೂರ್ತಿಕ ರಾಜ್ಯಭಾರವನ್ನು ಒಪ್ಪಿಸಿ ದೂರದ ರಾಜ್ಯಗಳತ್ತ ಸಾಗಿದ. ಆದರೆ ಎಲ್ಲೂ ಅವನಿಗೆ ತನ್ನ ಬಗ್ಗೆ ಸಲ್ಲದ ಮಾತಾಡುವವರು ಸಿಕ್ಕಲಿಲ್ಲ.

ಕೋಸಲ ದೇಶದ ಮಾಲಿಕನೆಂಬುವವನು ಬ್ರಹ್ಮದತ್ತನ ಸಮಕಾಲೀನ ದೊರೆ. ಬ್ರಹ್ಮದತ್ತನಿಗೆ ಎದುರಾದಂತಹ ಸಮಸ್ಯೆಯೇ ಅವನನ್ನೂ ಕಾಡುತ್ತಿತ್ತು. ಅವನೂ ವೇಷ ಮರೆಸಿಕೊಂಡು ಹೊರಗಿನ ಜನರ ಅಭಿಪ್ರಾಯಾರ್ಥವಾಗಿ ನಡೆದಿದ್ದ. ಬ್ರಹ್ಮದತ್ತ ಮರಳುತ್ತಿದ್ದಾಗ ಮಾಲಿಕನ ರಥ ದಾರಿಯಲ್ಲಿ ಎದುರುರಾಯಿತು. ಇಬ್ಬರೂ ತಮ್ಮ ತಮ್ಮ ರಥದಲ್ಲಿಯೇ ಪಯಣಿಸಿದ್ದರು. ಆದರೆ ರಥಗಳು ಸಂಧಿಸಿದಲ್ಲಿ ದಾರಿ ಎಷ್ಟು ಇಕ್ಕಟ್ಟಿನದಾಗಿತ್ತೆಂದರೆ, ಯಾವುದಾದರೂ ಒಂದು ರಥ ಹಿಂದೆಸರಿದು ಇನ್ನೊಂದಕ್ಕೆ ಮುಂದುವರಿಯಲು ದಾರಿ ಮಾಡಿ ಕೊಡಬೇಕಿತ್ತು.

ಕೋಸಲದ ದೊರೆಯ ಸಾರಥಿ, "ನೀನು ಸ್ವಲ್ಪ ಹಿಂದಕ್ಕೆ ಸರಿದೆಯಾದರೆ ನನ್ನ ರಥ ಮುಂದೊಯ್ಯುತ್ತೇನೆ" ಎಂದ ಬ್ರಹ್ಮದತ್ತನ ಸಾರಥಿಗೆ.

"ಇದು ಬ್ರಹ್ಮದತ್ತ ಮಹಾಪ್ರಭುಗಳ ರಥ. ನೀನೇ ಹಿಂದಕ್ಕೆ ಸರಿ," ಎಂದ ಬ್ರಹ್ಮದತ್ತನ ಸಾರಥಿ.

ಇಬ್ಬರೂ ಅರಸರಾದ್ದರಿಂದ ಸಂದಿಗ್ಧವುಂಟಾಯಿತು. ಅವರಲ್ಲಿ ಯಾರು ಹೆಚ್ಚಿನವರು ಎಂಬುದು ನಿರ್ಧಾರವಾದರೆ ಯಾರು ದಾರಿ ಬಿಡಬೇಕೆಂಬುದು ತಾನೇ ಸ್ಪಷ್ಟವಾಗುತ್ತಿತ್ತು. ತುಸು ವಿಚಾರ ಮಾಡಿ ಬ್ರಹ್ಮದತ್ತನು ಕೋಸಲದ ಅರಸನ ವಯಸ್ಸೆಷ್ಟೆಂದು ಕೇಳಿದ. ಇಬ್ಬರೂ ಒಂದೇ ವಯಸ್ಸಿನವರೆಂದಾದಾಗ ಸಮಸ್ಯೆ ಹಾಗೆಯೇ ಉಳಿಯಿತು.

ಕೋಸಲ ರಾಜನ ಸಂಪತ್ತೆಷ್ಟು, ಸೈನ್ಯವೆಷ್ಟು ದೊಡ್ಡದು, ಕುಲ ಯಾವುದು ಇತ್ಯಾದಿಯಾಗಿ ವಿಚಾರಿಸಿದಾಗಲೂ ಸಮಸ್ಯೆ ಇನ್ನು ಸಮಸ್ಯೆಯಾಗಿಯೇ ಉಳಿಯಿತು. ಇಬ್ಬರೂ ಸಕಲ ದೃಷ್ಟಿಗಳಿಂದಲೂ ಸಮಾನರೇ ಆಗಿದ್ದರು.

ಕೊನೆಗೆ ಬ್ರಹ್ಮದತ್ತ, "ನಿನ್ನ ಪ್ರಭು ಅನುಸರಿಸುವ ಧರ್ಮ ಯಾವುದು?" ಎಂದು ಕೋಸಲ ರಾಜನ ಸಾರಥಿಯನ್ನು ಕೇಳಿದ.

"ನನ್ನೊಡೆಯ ಬಲಿಷ್ಠರನ್ನು ಮಹಾಬಲದಿಂದಲೂ, ನಮ್ರರನ್ನು ವಿನಯದಿಂದಲೂ, ಒಳ್ಳೆಯವರನ್ನು ಒಳ್ಳೆಯತನದಿಂದಲೂ, ದುಷ್ಟರನ್ನು ದುಷ್ಟತನದಿಂದಲೂ ಬಗ್ಗಿಸುತ್ತಾರೆ. ಇದು ಅವರು ಚಾಚೂ ತಪ್ಪದೆ ಅನುಸರಿಸಿಕೊಂಡು ಬಂದ ಧರ್ಮ."

"ನನ್ನ ಒಡೆಯ ಕೋಪವನ್ನು ಶಾಂತಿಯಿಂದಲೂ, ಕೆಡುಕನ್ನು ಒಳಿತಿನಿಂದಲೂ, ಲೋಭವನ್ನು ಔದಾರ್ಯದಿಂದಲೂ, ಅಸತ್ಯವನ್ನು ಸತ್ಯದಿಂದಲೂ ಜಯಿಸುತ್ತಾರೆ" ಬ್ರಹ್ಮದತ್ತನ ಸಾರಥಿ ತಟ್ಟನೆ ಉತ್ತರಿಸಿದ.

ಅವರ ಮಾತು ಮುಗಿಯುವಷ್ಟರಲ್ಲಿಯೇ ಕೋಸಲದ ದೊರೆಯೂ ಅವನ ಸಾರಥಿಯೂ ರಥ ದಿಂದ ಕೆಳಗಿಳಿದು ಬಂದು ಬ್ರಹ್ಮದತ್ತನಿಗೆ ಗೌರವ ಸಲ್ಲಿಸಿ ಅವನ ರಥ ಮುಂದೆ ಹೋಗುವುದಕ್ಕೆ ದಾರಿ ಮಾಡಿ ಕೊಟ್ಟರು.

• ಜೆ. ಜೈನ್ •



# ಬುದ್ಧಿವಂತರು ಯಾರು?

ದುರ್ಗಾಪುರದ ರಾಜನು ತಾನು ಬಹಳ ಬುದ್ಧಿವಂತನೆಂದು ತಿಳಿದುಕೊಂಡಿದ್ದನು. ಆದುದರಿಂದ ಅವನು ಆಗಾಗ ಸಭಿಕರ ಮುಂದೆ ಅರ್ಥವೇನಿಲ್ಲದ ಪ್ರಶ್ನೆಗಳನ್ನು ಕೇಳುತ್ತಿದ್ದನು. ಎಲ್ಲರನ್ನೂ ಮಂಕುಗೊಳಿಸಿ ತಾನೇ ಏನೋ ಒಂದು ಹೇಳಿ ಗೆದ್ದಂತೆ ನಗುವನು.

ಒಂದು ಸಾರಿ ಅವನು ಸಭಿಕರ ಮುಂದೆ, "ಈ ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಿನ ಬುದ್ಧಿವಂತ ನಾರೆಂದು ಹೇಳಿದವರಿಗೆ ಸಾವಿರ ವರಹ ಬಹುಮಾನ ಕೊಡುತ್ತೇನೆ" ಎಂದನು.

ಅನೇಕರು ರಾಜನ ಹೆಸರನ್ನೇ ಹೇಳಿದರು. "ಸುಮ್ಮನೆ ಹೇಳಿದರಾಗದು, ಉದಾಹರಣೆ ಬೇಕು" ಎಂದನು ರಾಜ.

"ಚಿಕ್ಕಂದಿನಲ್ಲೊಮ್ಮೆ ನನ್ನ ತಂದೆ, ಒಂದು ಪ್ರಶ್ನೆಗೆ ಉತ್ತರ ಕೊಡುವವನೇ ಪ್ರಪಂಚದಲ್ಲಿರುವ ಎಲ್ಲರಿಗಿಂತಲೂ ಹೆಚ್ಚಿನ ಬುದ್ಧಿವಂತ ಎಂದು ಹೇಳಿದರು" ಎಂದ ವಿದೂಷಕ.

"ಏನು ಆ ಪ್ರಶ್ನೆ?" ಎಂದು ರಾಜ ಕೇಳಿದ.

"ಮನುಷ್ಯನ ಶರೀರಕ್ಕೆ ಸಾವೇ ಹೊರತು ಆತ್ಮಕ್ಕೆ ಇಲ್ಲವಷ್ಟೆ? ನಾವು ಬಟ್ಟೆ ಬದಲಾಯಿಸಿ ಕೊಳ್ಳುವ ಹಾಗೆ ಆತ್ಮವು ಶರೀರವನ್ನು ಬದಲಾಯಿಸಿ ಕೊಳ್ಳುತ್ತದೆ. ಆದರೆ ಒಂದು ಶರೀರವನ್ನು ಬಿಟ್ಟ ಆತ್ಮ ಮತ್ತೊಂದು ಶರೀರವನ್ನು ಪ್ರವೇಶಿಸುವ ಮೊದಲು ಎಷ್ಟು ಕಾಲ ವಿಶ್ರಾಂತಿ ತೆಗೆದು ಕೊಳ್ಳುತ್ತದೆ? ಎಂಬುದು ನನ್ನ ತಂದೆಯ ಪ್ರಶ್ನೆ" ಎಂದ ವಿದೂಷಕ.

ಈ ಪ್ರಶ್ನೆಗೆ ಯಾರೂ ಉತ್ತರ ಹೇಳಲಾರದೆ ಹೋದರು. ರಾಜನು ವಿದೂಷಕನನ್ನೇ ಉತ್ತರ ಹೇಳುವಂತೆ ಕೇಳಿದನು. ವಿದೂಷಕ ಮುಖಬಾಡಿಸಿ. "ನನ್ನ ತಂದೆ ನನಗೊಬ್ಬನಿಗೇ ಉತ್ತರ ಹೇಳಿದರು. ಆ ಉತ್ತರ ನನ್ನ ವಂಶದವರಿಗೆ ಹೊರತು ಬೇರೆ ಯಾರಿಗೂ ಹೇಳಕೂಡದೆಂಬ ಶಾಪವಿದೆ. ತಂದೆ ಈಗ ಜೀವದಿಂದಿಲ್ಲ. ಈಗ ಆ ಪ್ರಶ್ನೆಗೆ ಉತ್ತರ ತಿಳಿದವನು ನಾನೊಬ್ಬನೇ. ಆದ್ದರಿಂದ ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಿನ ಬುದ್ಧಿವಂತನು ನಾನೇ!" ಎಂದ.

ರಾಜನು ಕೋಪದಿಂದ "ನಿನಗಿಂತ ಹೆಚ್ಚಿನ ಬುದ್ಧಿವಂತರೇ ಇಲ್ಲವೇನು?" ಎಂದ

"ಅದೇನು ಹೀಗೆ ಕೇಳುವಿರಿ? ನನ್ನಂಥ ಬುದ್ಧಿವಂತನನ್ನು ವಿದೂಷಕನೆಂಬ ಹೆಸರಿನಲ್ಲಿ ಸೇವಕ ನನ್ನಾಗಿ ಇಟ್ಟುಕೊಂಡಿದ್ದೀರೆಂದರೆ, ನನಗಿಂತ ನೀವೇ ಹೆಚ್ಚಿನ ಬುದ್ಧಿವಂತರೆಂದೇ ಅರ್ಥವಲ್ಲವೇ?" ವಿದೂಷಕ ವಿನಯದಿಂದ ಹೇಳಿದ.

ವಿದೂಷಕನ ಬುದ್ಧಿವಂತಿಕೆಗೆ ಮೆಚ್ಚಿ ರಾಜ ಬಹುಮಾನ ನೀಡಿದ.

ಎನ್. ರಾಜಶೇಖರ ನಾಯಕ

**ಶಿಕ್ಷಕರ ತೀವ್ರ ಚಳವಳಿಯ ಈ ಕಾಲದಲ್ಲಿ ಶಿಕ್ಷಕರಿಗೂ ಸಮಾಜಕ್ಕೂ ಸರಕಾರಕ್ಕೂ ಶಿಕ್ಷಣದಲ್ಲಿ ಉತ್ತರದಾಯಿತ್ವದ ಪ್ರಶ್ನೆ ಮಥನೀಯವಾಗಿದೆ. ಸ್ವತಃ ಶಿಕ್ಷಕರಾಗಿ ಹಲವು ದಶಕಗಳ ಕಾಲ ದುಡಿದು, ಶಿಕ್ಷಣದ ಬಗ್ಗೆ ಚಿಂತಿಸಿ, ಚಿಂತನೆಗಳನ್ನು ವ್ಯವಹಾರದಲ್ಲಿ ಅಳವಡಿಸಲು ಯತ್ನಿಸಿದ ಲೇಖಕರು% 1973ರ ಫೆಬ್ರವರಿ 'ಕಸ್ತೂರಿ'ಯಲ್ಲಿ ಪ್ರಕಟಿಸಿದ ಲೇಖನವಿದು. ಭವಿತವ್ಯದಲ್ಲಿ ಆಸ್ಥೆಯುಳ್ಳವರೆಲ್ಲ ಪುನಃ ಪುನಃ ಮಥಿಸಬೇಕಾದ ವಿಚಾರಗಳಿಲ್ಲಿವೆ.**

# ಶಿಕ್ಷಣವನ್ನು ಶಿಕ್ಷಕನಿಗೇ ಬಿಡಿ!

● ನರಸಿಂಹ ಗುಡಿ ಬಿ.ಎಸ್.ಸಿ., ಎಮ್.ಎಡ್. ●

**ಶಿ**ಕ್ಷಣ ಮಟ್ಟ ಇಳಿದಿದೆ ಎಂದು ಎಲ್ಲರೂ ಹೇಳುತ್ತಾರೆ. ಈ ಮಾತಿಗೆ ಸಾಧಾರಣ ಸರ್ವಸಮ್ಮತ ಅರ್ಥ ಹೀಗಿದೆ: ಸುಶಿಕ್ಷಿತನೆನ್ನಿಸಿಕೊಳ್ಳುವ ಇಂದಿನ ವ್ಯಕ್ತಿ ವಿಚಾರಶಕ್ತಿಯಲ್ಲಿ, ಜ್ಞಾನ ಬಲದಲ್ಲಿ ಮತ್ತು ನೈತಿಕ ಸಾಮರ್ಥ್ಯದಲ್ಲಿ ಅದೇ ಲಾಂಛನದ ಹಿಂದಿನ ವ್ಯಕ್ತಿಗಿಂತ ಕೀಳಾಗಿದ್ದಾನೆ. ಇದನ್ನು ಎತ್ತರಿಸುವ ಸುಸ್ಪಷ್ಟ ಉಪಾಯವೂ ಸುಪರಿಚಿತವಿದೆ. ಪ್ರತಿ ವ್ಯಕ್ತಿಯ ಶಿಕ್ಷಣದಲ್ಲಿ ವಿವೇಕ, ಜ್ಞಾನ ಮತ್ತು ಶೀಲಗಳ ಬಲಸಂವರ್ಧನೆಗೆ ಸಾಕಷ್ಟು ಲಕ್ಷ್ಯ ಕೊಡುವುದು. ಶಿಕ್ಷಣದ ಮಟ್ಟಕ್ಕೆ ಕಾರಣವಾದ ಸಾಮಾಜಿಕ ಪರಿಸರವು ಒಂದು ಶನಿ-ಮಂದವಾಗಿ ಬದಲಾಗುವಂತಹುದು.

%ಲೇಖಕರ ವಿಳಾಸ:
**ನರಸಿಂಹ ಗುಡಿ,**
**98, ಮಿರ್ಜೆ ಗಲ್ಲಿ,**
**ವಿಜಾಪುರ-586 101.**

ವಿವೇಕ-ಜ್ಞಾನ-ಶೀಲ ಸಂವರ್ಧನೆಗೆ ಸದಾ ದೊರೆಯುತ್ತಿರುವುದಕ್ಕಿಂತ ಹೆಚ್ಚು ವೈಯಕ್ತಿಕ ಲಕ್ಷ್ಯ ಸಿಗುವಂತೆ ಗುರು (ಶಿಕ್ಷಕ) ಕೇಂದ್ರಸ್ಥನಾಗಿರುವಂತೆ ಶಾಲೆಗಳು ಮತ್ತು ವರ್ಗ (ಕಕ್ಷ್ಯ)ಗಳ ಪುನರ್ಘಟನೆಯ ಒಂದು ಯೋಜನೆಯನ್ನು ಇಲ್ಲಿ ರೂಪಿಸಲಾಗಿದೆ.

**ಯೋಜನೆ:**

ಅರ್ಹತೆ ಇದ್ದವರಿಗೆ ಮಾತ್ರ ಗುರು ಎಂದು ವೃತ್ತಿ ನಿರತರಾಗಲು ಸನದುಗಳನ್ನು ಕೊಡಬೇಕು. ಇಂಥ ಒಬ್ಬ ಗುರುವಿನ ಶಿಷ್ಯರ ಸಂಖ್ಯೆಗೆ ಒಂದು ಗರಿಷ್ಠ ಮಿತಿ ಇರಬೇಕು. (ಇಪ್ಪತ್ತು ಇರಲಿ).

ಇದರಂತೆಯೇ ಶಾಲೆಗಳಲ್ಲಿಯೂ ಪ್ರತಿಯೊಬ್ಬ ಗುರುವಿಗೆ ಇಪ್ಪತ್ತು ಶಿಷ್ಯರಿರಬೇಕು. ಹೀಗೆ ಮಾಡುವಾಗ್ಗ ಈಗಿನಂತೆ ಇಯತ್ತಾ-ಆಧಾರಿತವಾದ ಕಕ್ಷ್ಯಗಳನ್ನು ಇಟ್ಟುಕೊಳ್ಳಬಹುದು. ಅಥವಾ ಬಿಟ್ಟು ಬಿಡಬಹುದು.

ಗುರು ಈ ಇಪ್ಪತ್ತು ಶಿಷ್ಯರ ಪೂರ್ಣ ಶಿಕ್ಷಣದ ಹೊಣೆ ಹೊರಬೇಕು. ಸಾಮಾನ್ಯವಾಗಿ ಒಬ್ಬ ಶಿಷ್ಯನು ಒಬ್ಬ ಗುರುವಿನ ಪ್ರಭಾವದಲ್ಲಿ ಮೂರು ಅಥವಾ ಹೆಚ್ಚು ವರ್ಷ ಇರಬೇಕು. ಈ ಶಿಷ್ಯದಶೆಯು ಪ್ರೌಢಶಾಲಾಂತ್ಯಕ್ಕೆ ಮುಗಿಯಬೇಕು. ಈ ಇಪ್ಪತ್ತು ಶಿಷ್ಯರು ಒಂದೇ ಇಯತ್ತೆಯವರಾಗಲೀ ಒಂದೇ ವಯಸ್ಸಿನವರಾಗಲೀ ಇರದೆ ಎರಡು ಅಥವಾ ಮೂರು ಮಟ್ಟದವರಿರಬೇಕು. ಶಾಲೆಯ ಗುರುಗಳ ಶಿಷ್ಯರು ಮತ್ತು ಸ್ವತಂತ್ರ ಗುರುಗಳ ಶಿಷ್ಯರು ಒಂದೇ ಬಗೆಯ ಮೌಲ್ಯ ಮಾಪನಕ್ಕೆ ಒಳಪಡಬೇಕು. ಅದು ಒಂದೇ ಸಲ ಪ್ರೌಢಶಾಲಾಂತವಾಗಿಯಾಗಲೀ ಅಥವಾ ಎರಡು ಸಲವಾಗಲೀ -ಒಮ್ಮೆ ಪ್ರಾಥಮಿಕ ಶಾಲಾಂತಕ್ಕೆ ಮತ್ತೊಮ್ಮೆ ಪ್ರೌಢಶಾಲಾಂತಕ್ಕೆ - ನಡೆಯಬಹುದು. ಸ್ವತಂತ್ರ ಗುರುಗಳು ತಮ್ಮ ಶಿಷ್ಯರ ಅಧ್ಯಾಪನದ ಎಲ್ಲ ಅಂಗಗಳ ನಿರ್ವಹಣೆಯಲ್ಲಿ ಸ್ವತಂತ್ರರು.

**ಪ್ರಯೋಜನಗಳು:**

ಶಿಷ್ಯದಶೆಯು ದೀರ್ಘವಿದ್ದು, ಶಿಕ್ಷಕರು ಅರ್ಹರಿರುವುದರಿಂದ ಮತ್ತು ಅಧ್ಯಾಪನ ಸ್ವಾತಂತ್ರ್ಯವೂ ಹೆಚ್ಚಿಗೆ ಇರುವುದರಿಂದ ಗುರು-ಶಿಷ್ಯ ಸಂಬಂಧವು ಘನತರವಾಗುವುದು. ಶಿಷ್ಯನ ವಿಷಯ ಜ್ಞಾನವು ಅವನ ಯೋಗ್ಯತಾನುಸಾರವಾಗಿ ಹರವನ್ನೂ ಆಳವನ್ನೂ ಪಡೆಯುವುದು. ಇಷ್ಟು ಅವಧಿಯಲ್ಲಿ ಇಷ್ಟು ಕಲಿಸಬೇಕೆಂಬ ಕಾಲಮಿತಿ ಇಲ್ಲದ್ದರಿಂದ ಅಧ್ಯಯನವು ನಿರಾತಂಕವಾಗುವುದು ಪಾಸು ನಪಾಸುಗಳು ಇಲ್ಲದ್ದರಿಂದ ಅನಾವಶ್ಯಕ ಮಾನಸಿಕ ಪೀಡೆಗಳು ಇಲ್ಲದಂತಾಗುವವು.

ಮಂಡಲಿಯು ಚಿಕ್ಕದಿರುವುದರಿಂದ ಪ್ರತಿಯೊಬ್ಬನಿಗೂ ತನ್ನ ಅಭಿವ್ಯಕ್ತಿಗೆ ಹೆಚ್ಚು ಅವಕಾಶ ಸಿಗುವುದು. ಅವನ ಗುಣಗಳಿಗೆ ಸನ್ಮಾನ ಸಿಗುವುದು ಮತ್ತು ಅವುಗಳ ಮರ್ಯಾದೆಗಳೂ ತಿಳಿಯುವವು. ಇದರಿಂದ ಅವು ನಶಿಸದೆ ವಿಕಾಸವಾಗಿ ಫಲಿಸುವವು. ಆತ್ಮಾಭಿವ್ಯಕ್ತಿಗೆ ಸಿಗುವ ವಿಪುಲಾವಕಾಶದ ಫಲವಾಗಿ ಕಲಿಯುವವನಿಗೆ ದಿನೇ ದಿನೇ ತನ್ನರಿವು ಹೆಚ್ಚುತ್ತಾ ಹೋಗುವುದು.

ವಿಚಾರ ಸಾಮರ್ಥ್ಯವು ಅಧ್ಯಾಪನ ವಿಧಾನದ ದಕ್ಷತೆಯನ್ನು ಅನುಸರಿಸಿ ಅಭಿವೃದ್ಧವಾಗುವುದು. ಮಂಡಳಿಯು ಸಣ್ಣದಿದ್ದಾಗ್ಗೆ ಶಿಷ್ಯನ ಚಟುವಟಿಕೆಗಳು ಹೆಚ್ಚಾಗುವುದರಿಂದ ಅವನ ಬುದ್ಧಿ ಬಲ ಬೆಳೆಯುವುದು.

ಶೀಲ ಮತ್ತು ಸ್ವಭಾವಗಳು ಅವರವರ ವಿಚಾರ ಹಾಗೂ ಅಭ್ಯಾಸಗಳ ಸಂಯುಕ್ತ ಫಲ. ತನ್ನ ಕ್ರಿಯೆಯ ದೂರದೂರದ ಪರಿಣಾಮಗಳನ್ನು ಕಾಣುವವನು ತನ್ನ ಸದ್ಯದ ನಡವಳಿಕೆಯನ್ನು ಹೆಚ್ಚು ಸಮೋಚಿತವಾಗಿಟ್ಟುಕೊಳ್ಳುವನು. ಆದರೂ ಒಮ್ಮೊಮ್ಮೆ ಜಾನಾಮಿ ಧರ್ಮಂ ನಚಮೇ ಪ್ರವೃತ್ತಿಃ ಜಾನಾಮಿ ಅಧರ್ಮಂ ನಚಮೇ ನಿವೃತ್ತಿಃ ಎಂದಾಗುವುದುಂಟು. ತನಗೆ ಸರಿ ಎನಿಸಿದ್ದನ್ನು ಮಾಡಲು ಬಲ ಸಾಲದೇ ಹೋಗಬಹುದು. ಅದ್ದರಿಂದ ಆಚಾರ ಮತ್ತು ವಿಚಾರಗಳ ಕೆಲವು ಒಳ್ಳೆಯ ರೂಢಿಗಳು ಪ್ರತಿಯೊಬ್ಬರಿಗೂ ಇರಬೇಕಾದದ್ದು ಅವಶ್ಯ. ದೀರ್ಘವಾದ ಶಿಷ್ಯದಶೆ, ಅರ್ಹ ಶಿಕ್ಷಕರು ಮತ್ತು ಚಿಕ್ಕ ಶಿಷ್ಯ ಮಂಡಲಿ ಇರುವುದರಿಂದ ಸದಾಚಾರ ಸದ್ವಿಚಾರಗಳ ಪ್ರವೃತ್ತಿಗಳು ಬಲಗೊಳ್ಳುವವು.

ಈ ಯೋಜನೆಯ ಅನುಷ್ಠಾನದಿಂದಾಗುವ ಇತರ ಆನುಷಂಗಿಕ ಪರಿಣಾಮಗಳನ್ನು ಹೀಗೆ ಹೇಳಬಹುದು.

ಶಾಲಾ ಬಾಲಕರೂ ಸ್ವತಂತ್ರ ಗುರುಗಳ ಶಿಷ್ಯರಂತೆಯೇ ಸಂಘಟಿತರಾಗಿರುವುದರಿಂದ ಎರಡೂ ತರದ ಗುರುಗಳ ಪ್ರಭಾವಗಳು ತೂಕಕ್ಕೆ ಸಿಗುವವು. ಇದರಿಂದ ಈ ಎರಡೂ ಪ್ರಕಾರದ ಶಿಕ್ಷಕರಲ್ಲಿ ಸ್ಪರ್ಧೆ ಏರ್ಪಡುವುದು. ಶಾಲಾ ಗುರುಗಳು ಒಂದಿಲ್ಲೊಂದು ದಿನ (ನಿವೃತ್ತಿಯ ನಂತರವಾದರೂ) ಸ್ವತಂತ್ರ ಅಧ್ಯಾಪಕರಾಗುವುದನ್ನು ಎದುರು ನೋಡುತ್ತಿರುವರು. ಇದರಿಂದ ಸಾರ್ವಜನಿಕ ಶಾಲೆಯಲ್ಲಿಯ ಶಿಕ್ಷಣದ ಗುಣಮಟ್ಟವು ಹೆಚ್ಚುವುದು.

ಸ್ವತಂತ್ರ ಉಪಾಧ್ಯಾಯರು ತಮ್ಮ ಕಾರ್ಯಕ್ಷಮತೆಯನ್ನು ಹೆಚ್ಚಿಸಿಕೊಳ್ಳುವ ಅಪೇಕ್ಷೆಯಿಂದ ಇಬ್ಬರೋ ಮೂವ್ವರೋ ಕೂಡಿಕೊಂಡು ಪೂರಕವಾಗಿ ಕಾರ್ಯ ಮಾಡಬಹುದು. ಆರ್ಥಿಕವಾಗಿ ಯಾವ ಕಷ್ಟ ನಷ್ಟಗಳೂ ಇಲ್ಲದಂತೆ ತಮ್ಮ ಪಾಲುಗಾರರನ್ನು ಬದಲು ಮಾಡಬಹುದು.

ಯಾಕೆಂದರೆ ಈ ಬಗೆಯ ಸ್ವಾತಂತ್ರ್ಯಕ್ಕೆ ಬುನಾದಿಯಾಗಿರುವುದು ಅವರ ವೈಯಕ್ತಿಕ ಯೋಗ್ಯತೆ ಮಾತ್ರ.

ಈಗ ಹೊಸದಾಗಿ ಶಾಲೆಗಳನ್ನು ಆರಂಭಿಸುವುದು ಸುಲಭವಿಲ್ಲ. ಆದರೆ ಸಹಾಯ ಧನ ಕೊಟ್ಟು ಸ್ವತಂತ್ರ ಗುರುಗಳನ್ನು ಶಾಲೆಗಳ ಬೇಡಿಕೆ ಇರುವ ಸ್ಥಳಗಳಿಗೆ ಹೋಗಿ ನೆಲೆಸಲು ಪ್ರೋತ್ಸಾಹಿಸಬಹುದು.

ಖಾಸಗೀ ಪಾಠ ಹೇಳುವ ಪದ್ಧತಿಯು ಅಪಾಯಕಾರಿ ಎಂದು ತಿಳಿಯಲಾಗುತ್ತದೆ. ಯಾಕೆಂದರೆ, ಅವುಗಳ ಗುರಿಯು ಪರೀಕ್ಷೆ ಪಾಸು ಮಾಡಿಸುವುದು ಮಾತ್ರವಾಗಿದ್ದು ಕಲಿಸುವ ಪದ್ಧತಿಯು ಅದೇ ಗುರಿಗೆ ಅನುಗುಣ ಸಿದ್ಧವಾಗಿರುತ್ತದೆ. ಇಂಥ ಸ್ವತಂತ್ರ ಗುರುಗಳು ಹೆಚ್ಚಿದಂತೆ ಖಾಸಗೀ ಪಾಠಗಳ ಆಕರ್ಷಣೆ ಇಳಿಮುಖವಾಗುತ್ತದಲ್ಲದೇ, ಇಲ್ಲದಂತೆಯೇ ಆಗುತ್ತದೆ.

**ಯೋಜನೆಯ ಯಶಸ್ಸಿಗೆ ಇಷ್ಟವಾದ ಸನ್ನಿವೇಶ:**

ಶಿಷ್ಯರ ವಿದ್ಯಾರ್ಜನೆಯ ಮೌಲ್ಯಮಾಪನದ ವಿಧಾನಗಳನ್ನು ಮೇಲಿಂದ ಮೇಲೆ ಪರಿಶೀಲಿಸಬೇಕು. ಪಾಠೇತರ ಸಾಧನೆಗಳಿಗಾಗಿ ಗುರುಗಳಿಗೆ ಮಾನ್ಯತೆ ನೀಡಬೇಕು. ಶಿಕ್ಷಣದ ಧ್ಯೇಯಗಳತ್ತ ಲಕ್ಷ್ಯವು ಮತ್ತೆ ಮತ್ತೆ ಕೇಂದ್ರೀಕೃತವಾಗುವಂತೆ ಮೌಲ್ಯಮಾಪನದ ವಿಧಾನಗಳು ಇಲ್ಲದಿದ್ದರೆ ಈ ಯೋಜನೆಯೇಕೆ, ಯಾವ ಯೋಜನೆಯೂ ಯಶಸ್ವಿಯಾಗಲಾರದು.

ಶಿಕ್ಷಕರ ತರಬೇತಿ ಕಾಲೇಜುಗಳಲ್ಲಿರುವ ಶೈಕ್ಷಣಿಕ ವಿಸ್ತರಣ ಸೇವೆಯ ಸೌಕರ್ಯಗಳು ಈ ಸ್ವತಂತ್ರ ಗುರುಗಳಿಗೂ ಲಭ್ಯವಾಗಬೇಕು. ಇದರ ಫಲವಾಗಿ ಇವರ ಜ್ಞಾನವು ಸತತ ವೃದ್ಧಿಯಾಗುವುದು ಮತ್ತು ಇವರೂ ಪ್ರಯೋಗಶೀಲರಾಗುವರು. ಇವರು ಸ್ವತಂತ್ರರಿರುವುದರಿಂದ ವಿಸ್ತರಣ ಸೇವೆಯ ಅವನತಿಯನ್ನು ತಡೆಯುವರು; ಇಷ್ಟೇ ಅಲ್ಲ, ಅದರ ಮಟ್ಟವು ಏರಲು ಕಾರಣರಾಗುವರು ಯಾಕೆಂದರೆ ಅದರ ಗುಣದೋಷಗಳನ್ನು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸಲು ಇವರಿಗೆ ಸಾಧ್ಯ

**ಶಿಕ್ಷಣ ಮತ್ತು ಮೂಲಭೂತ ಹಕ್ಕುಗಳು:**

ಪ್ರಜಾ ಪ್ರಭುತ್ವದಲ್ಲಿ ನ್ಯಾಯಾಂಗದ ಸ್ವಾಧೀನತೆಯು ಸ್ವಾತಂತ್ರ್ಯದ ರಕ್ಷಕ ಎಂದು ಪರಿಗಣಿಸಲಾಗುತ್ತದೆ. ಆದರೆ ಸರಕಾರದಿಂದ ನಿಯಂತ್ರಿತವಾದ ಶಿಕ್ಷಣದ ಅಪಾಯ ಮಾತ್ರ ಇನ್ನೂ ಅನೇಕರ ಲಕ್ಷ್ಯವನ್ನು ಸೆಳೆದಿಲ್ಲ.

## ಶಿಕ್ಷಣ

ನಿಶ್ಚಲ. ನಿಷ್ಕ್ರಿಯ ವಿಷಯಗಳ ರೂಪದಲ್ಲಿ ಎಷ್ಟೊಂದು ಅಜ್ಞಾನವನ್ನು ಶೇಖರಿಸಲಾಗುತ್ತಿದೆಯೆಂಬುದನ್ನು ಕಂಡಾಗ ಶಿಕ್ಷಣದಲ್ಲಿ ಇದಕ್ಕಿಂತ ಅಗಾಧವಾದುದು ಇನ್ನೇನೂ ಇಲ್ಲವೆಂಬುದು ಮನದಟ್ಟಾಗುತ್ತದೆ.

— ಹೆನ್ರಿ ಬ್ರೂಕ್ಸ್ ಆಡಾಮ್ಸ್

ಶಿಕ್ಷಣದ ಶ್ರೀಕಾರ ಆರಂಭವಾಗುವುದು ವರ್ಣ ಮಾಲೆಯಿಂದ ಎಂದು ನೀವು ನಂಬಿದ್ದರೆ ಅದು ತಪ್ಪು. ಅದು ಪ್ರಾರಂಭವಾಗುವುದು ತಾಯಿಯ ಆ ನೋಟದಲ್ಲಿ, ತಂದೆಯ ಮೆಚ್ಚಿಗೆ ಅಥವಾ ಆಕ್ಷೇಪಣೆಯಲ್ಲಿ, ಸೋದರನ ಸಹನೆಯಲ್ಲಿ, ಮೆತ್ತಗೆ ಒತ್ತಿ ಹಿಡಿಯುವ ಸೋದರಿಯ ಕೈಯಲ್ಲಿ; ಹಸಿರು ಮುರಿಯುವ ಆ ಗಿರಿ ಕಂದರಗಳಲ್ಲಿ, ಹಕ್ಕಿ ಪಕ್ಷಿಗಳು ಚಿಲಿಪಿಲಿಗುಟ್ಟುವ ಬನಗಳಲ್ಲಿ, ಕಣ್ಣಿಗೆ ಕಂಡೂ ಕಾಣದಂತಿರುವ ಇರುವೆ ಸಂಗದಲ್ಲಿ; ಝೇಂಕರಿಸುವ ಜೇನ್ನೊಣಗಳ ಮಧುಸಂಚಿತ ಗೂಡುಗಳಲ್ಲಿ; ನಿಸರ್ಗದ ಹಾಗೂ ಅದು ಸೂರೆಗೈವ ಸೌಂದರ್ಯದ ಬಗೆಗೂ ಸತ್ಕಾರ್ಯ, ಸದಾಚಾರಗಳ ಕುರಿತೂ ಇದೆಲ್ಲಕ್ಕೂ ಮೂಲ ಸ್ರೋತನಾಗಿರುವ ಆ ಭಗವಂತನ ಕುರಿತೂ ಚಿಂತಿಸುತ್ತ ಬೀದಿಯ ನೆರಳಲ್ಲಿ ಅಲೆಯುತ್ತಿರುವಲ್ಲಿ ಅದರ ಬೀಜ ಮೊಳಕೆಯೊಡೆಯುತ್ತದೆ.

— ಅನಾಮಿಕ

ಸರಕಾರವು ಶಿಕ್ಷಣವನ್ನು ತನ್ನ ಮತ ಪ್ರಚಾರದ ಸಾಧನವನ್ನಾಗಿ ಮಾಡಿಕೊಂಡು ಜನತೆಯನ್ನು ವಿಚಾರದಾಸ್ಯದಿಂದ ಪೂರ್ಣದಾಸ್ಯಕ್ಕೆ ಈಡು ಮಾಡಬಹುದು. ಈ ಯೋಜನೆಯಲ್ಲಿ ಶಿಕ್ಷಕನ ಶಿಕ್ಷಣ ಸ್ವಾತಂತ್ರ್ಯವು ಸಹಜವಾಗಿ ಅಂತರ್ಗತವಾಗಿದೆ. ಇದರಿಂದ ಸ್ವತಂತ್ರ ವಿಚಾರ ಶಕ್ತಿಯು ಪೋಷಣೆ ಪಡೆಯುತ್ತದೆ. ನಮ್ಮ ಸಂವಿಧಾನದ ಹತ್ತೊಂಬತ್ತನೆಯ ವಿಧಿಯಲ್ಲಿ ಹೇಳಲಾದ ಮೂಲಭೂತ ಹಕ್ಕುಗಳಲ್ಲಿ ಅಗ್ರಸ್ಥಾನ ಪಡೆದ ವಾಕ್ ಸ್ವಾತಂತ್ರ್ಯ ಮೊದಲಾದವು ಸ್ವತಂತ್ರ ವಿಚಾರ ಸಾಮರ್ಥ್ಯದಿಂದ ಮಾತ್ರ ಸಫಲವಾಗಬಲ್ಲವು. ●

## ಅನುಬಂಧ

ಈ ಪ್ರಬಂಧದಲ್ಲಿ ವ್ಯಕ್ತವಾದ ಕೆಲವು ಅಂಶಗಳಿಗೆ ವಿವರಣೆ ಬಯಸಿ ಸಂಪಾದಕರು ಕೇಳಿದ ಕೆಲವು ಪ್ರಶ್ನೆಗಳಿಗೆ ಲೇಖಕರು ಇಂತು ಉತ್ತರಿಸುತ್ತಾರೆ.

ಪ್ರಶ್ನೆ : ಗುರು-ಶಿಷ್ಯ ಪ್ರಮಾಣವು 1:20 ಎಂದು ಹೇಳುವುದರಿಂದ ಅರ್ಹ ಶಿಕ್ಷಕರ ಕೊರತೆಯೆನಿಸಲಿಕ್ಕಿಲ್ಲವೆ? ಸದ್ಯದ ವಿದ್ಯಾರ್ಥಿ ದಟ್ಟಣೆಗೆ ಇದೇ ಕಾರಣವಾಗಿಲ್ಲವೇ?

ಉತ್ತರ : ಗುರು-ಶಿಷ್ಯ ಪ್ರಮಾಣವು ಕಟ್ಟುನಿಟ್ಟಾಗಿ ಪಾಲಿಸಬೇಕಾದದ್ದೇನಲ್ಲ. ಸಾಮಾನ್ಯರಾದ ಅರ್ಹ ಶಿಕ್ಷಕರ ಕೊರತೆಯಿಲ್ಲ. ನಿವೃತ್ತ ಶಿಕ್ಷಕರೂ ಈ ಕಾರ್ಯಕ್ಕೆ ಲಭ್ಯರಾಗುವರು. ಸುಶಿಕ್ಷಿತ ನಿರುದ್ಯೋಗಿಗಳಂತೂ ಇದ್ದೇ ಇದ್ದಾರೆ. ವಿದ್ಯಾರ್ಥಿ ದಟ್ಟಣೆಗೆ ಕಾರಣ ಶಾಲೆಗಳಲ್ಲಿ ಸಂಬಳಕ್ಕೆ ಮತ್ತು ಇತರ ವೆಚ್ಚಕ್ಕೆ ಬೇಕಾಗುವ ಹಣದ ಕೊರತೆ.

ಪ್ರಶ್ನೆ : ಪಾಲಕರು ತಮ್ಮ ಮಕ್ಕಳ ಶಿಕ್ಷಣಕ್ಕಾಗಿ ಒಬ್ಬಿಬ್ಬರು ಶಿಕ್ಷಕರನ್ನೇ ಅವಲಂಬಿಸಬೇಕಾಗುತ್ತದೆ: ಇದರಿಂದ ಅನುಬಂಧ (Continuity) ತಪ್ಪಿಹೋಗಬಹುದಲ್ಲವೇ?

ಉತ್ತರ : ಈ ಯೋಜನೆಯಂತೆ ಶಿಷ್ಯದಶೆಯು ಕನಿಷ್ಠ ವರ್ಷದ್ದಿದೆ. ಈ ಅವಧಿ ದೀರ್ಘವಾಗಿದಷ್ಟೂ ಒಳ್ಳೆಯದು. ಹಾಗೆ ಮಾಡುವುದಕ್ಕೆ ನಿಷೇಧವೇನಿಲ್ಲ. ಪ್ರಿಸ್ಕೂಲ್ ಶಿಕ್ಷಣದ ಅವಧಿ ಮೂರು ವರ್ಷದ್ದಿದೆ. ಸಾಧಾರಣ ಓದು ಬರೆಹ ಬಂದನಂತರ ಆರಂಭಿಸಿದರೂ ಪ್ರಾಥಮಿಕ ಶಿಕ್ಷಣವನ್ನು ಅನುಬಂಧ ವಿಚ್ಛಿತ್ತಿ ಇಲ್ಲದೆ ಮುಗಿಸಬಹುದು. ಮರಣ, ರೋಗ, ಸ್ಥಾನಾಂತರ ಮೊದಲಾದ ಅನಿವಾರ್ಯ ಕಾರಣಗಳಿಂದಾಗುವ ಅನುಬಂಧ ವಿಚ್ಛೇದ ಮಾತ್ರ ಅಪರಿಹಾರ್ಯ.

ಪ್ರಶ್ನೆ : ಈ ಯೋಜನೆಯ ಯಶಸ್ಸಿಗೆ ಅವಶ್ಯವಾದ ಹಣಕಾಸಿನ ವಿಚಾರ?

ಉತ್ತರ : ಈ ಯೋಜನೆಯ ಹೃದಯವಿರುವುದು ಶಿಕ್ಷಣವನ್ನು ದಕ್ಷ ಮಾಡುವುದರಲ್ಲಿ. ಶಿಕ್ಷಕರಿಗೆ ಸಹಾಯಧನ ಕೊಡಬಹುದು ಎಂದು ಸೂಚಿಸಿದೆ. ಇದರಿಂದ ಶಾಲೆಗಳನ್ನು ಆರಂಭಿಸುವುದು ಈಗಿನಕ್ಕಿಂತ ಕಡಿಮೆ ಖರ್ಚಿನಲ್ಲಾಗುವುದು. ಈ ಸಹಾಯಧನ ಉಪಜೀವನಕ್ಕೆ ಸಾಲದಿದ್ದರೆ ಪಾಲಕರು ಫೀ ಕೊಡಬೇಕಾಗುವುದು. ಸಹಾಯಧನ ನಿಯಮಗಳು ಅಥವಾ ನಿರ್ಬಂಧಗಳು ಶಿಕ್ಷಣ ಸ್ವಾತಂತ್ರ್ಯಕ್ಕೆ ಮಾರಕವಾಗದಂತಿರುವುದು ಮುಖ್ಯ. ಹಣಕಾಸಿನ ಸಮಸ್ಯೆಯು ದೊಡ್ಡದಾಗುವ ಕಾರಣವಿಲ್ಲ. ಯಾಕೆಂದರೆ ಈ ಯೋಜನೆಯು ಸರಕಾರವಾಗಲಿ, ಸಂಘಗಳಾಗಲಿ ಶಾಲೆಗಳನ್ನು ತೆರೆಯುವುದನ್ನು ನಿಷೇಧಿಸುವುದಿಲ್ಲ. ಖಾಸಗಿ ಶಿಕ್ಷಕರು ಖಾಸಗಿ ಡಾಕ್ಟರ್‌ರಂತೆಯೆ ಸರಕಾರಿ ಸೇವಾ ವ್ಯವಸ್ಥೆ ಇದ್ದಲ್ಲಿ ಮತ್ತು ಇಲ್ಲದಲ್ಲಿ, ಎಲ್ಲಿ ಬೇಕಾದಲ್ಲಿ ಇರಹತ್ತುವರು. ಆದರೆ ಒಂದೇ ವ್ಯತ್ಯಾಸವೆಂದರೆ ಡಾಕ್ಟರರ ವಿಷಯದಲ್ಲಿ ಅವರ ಸೇವೆಯನ್ನು ಪಡೆಯುವವರ ಸಂಖ್ಯೆಗೆ ನಿರ್ಬಂಧವಿಲ್ಲ; ಇಲ್ಲಿ ಮಾತ್ರ ಶಿಕ್ಷಕ ಹೊಂದಬಹುದಾದ ಶಿಷ್ಯರ ಸಂಖ್ಯೆಗೆ ಗರಿಷ್ಠ ಮಿತಿಯೊಂದಿದೆ. ದಕ್ಷತೆಗೆ ಇದು ಅವಶ್ಯ. ●

(NCERT ಸೆಮಿನಾರ್ ರೀಡಿಂಗ್‌ಗಾಗಿ 1971ರ ಸೆಪ್ಟೆಂಬರ್ 30ರೊಳಗಾಗಿ ಬರೆದು ಸಾದರಪಡಿಸಲಾದ ಪ್ರಬಂಧವಿದು)

# ನಾ ಕಂಡ ವಿದೇಶಿ ದೇವಮಂದಿರಗಳು

ಫಿಲಿಪಿನ್ಸ್ ದೇಶದಲ್ಲಿರುವ ಒಂದು ಸುಪ್ರಸಿದ್ಧ ಅಂತಾರಾಷ್ಟ್ರೀಯ ತರಬೇತಿ ಕೇಂದ್ರಕ್ಕೆ ಪೂರ್ಣ ಶಿಷ್ಯವೇತನದೊಡನೆ ಹೊರಟಿದ್ದೆ. ತರಬೇತಿಗೆ ಹೋಗುವ ಹಾಗೂ ಅಲ್ಲಿಂದ ಮರಳುವ ಮಾರ್ಗದಲ್ಲಿ ಬೇರೆ ಬೇರೆ ದೇಶಗಳನ್ನು ನೋಡಲು ಮರೆಯಲಿಲ್ಲ. ನಾ ಕಂಡ ದೇಶಗಳ ಸಂಸ್ಕೃತಿ, ಧಾರ್ಮಿಕ ಸಂಹಿತೆ, ಸಾಮಾಜಿಕ ಕಟ್ಟುಪಾಡುಗಳನ್ನು ನಮ್ಮ ದೇಶದೊಡನೆ ಹೋಲಿಸ ನೋಡುವ ಅವಕಾಶ ನನಗೆ ಲಭ್ಯವಾಗಿತ್ತು. ಈ ಹಿನ್ನಲೆಯಲ್ಲಿ ಬೇರೆ ಬೇರೆ ದೇಶಗಳ ಮಂದಿರಗಳನ್ನು ಆಸಕ್ತಿಯಿಂದ ನೋಡುತ್ತಾ ಹೊರಟಿದ್ದೆ.

ಮೊಟ್ಟ ಮೊದಲು ನಾನು ಭೆಟ್ಟಿಯಿತ್ತಿದ್ದು ಥಾಯ್‌ಲ್ಯಾಂಡಿಗೆ. ಅಲ್ಲಿ ರಾಜಧಾನಿ ಬ್ಯಾಂಕಾಕ್‌ನಲ್ಲಿರುವ ಕೆಲ ಸುಪ್ರಸದ್ಧ ದೇವ ಮಂದಿರಗಳನ್ನು ಅವಲೋಕಿಸಿದೆ. ಥಾಯ್ ಲ್ಯಾಂಡ್ ದೇಶದ ಒಟ್ಟು ಜನಸಂಖ್ಯೆಯ ಶೇ. 80ಕ್ಕೂ ಹೆಚ್ಚಿನವರು ಬೌದ್ಧ ಮತಸ್ಥರು. ಅಂತೆಯೇ ರಾಷ್ಟ್ರದ ಆರಾಧ್ಯ ದೈವ ಭಗವಾನ್ ಬುದ್ಧ ಭಗವಾನ್ ಬುದ್ಧನ ಸೊಗಸಾದ ಮಂದಿರಗಳಲ್ಲಿ ಬ್ಯಾಂಕಾಕ್‌ನ ಸುತ್ತಮುತ್ತ ಇರುವ ನೋಡಲೇಬೇಕಾದ ಪ್ರಖ್ಯಾತ ಮಂದಿರಗಳು ನಾಲ್ಕು. ಅವೇ ವಾಟ್‌ಪೋ, ವಾಟ್ ಅರುಣ, ವಾಟ್ ಬೆಂಚಮ ಬೋರ್‌ಪಿಟ್ ಮತ್ತು ಪಚ್ಚೆ ಬುದ್ಧನ ಡೇಗುಲ.

**ವಾಟ್‌ಪೋ** (ಒರಗಿರುವ ಬುದ್ಧನ ದೇಗುಲ): ಬ್ಯಾಂಕಾಕಿನ ಭವ್ಯ ಅರಮನೆಯ ದಕ್ಷಿಣಕ್ಕೆ ಈ ದೇಗುಲ ಸಂಕೀರ್ಣವಿದೆ. ಈ ಸಂಕೀರ್ಣದಲ್ಲಿ ಎರಡು ಭಾಗಗಳಿದ್ದು, ಒಂದು ಮಾರ್ಗ ಇವುಗಳ ನಡುವೆ ಹಾದು ಹೋಗಿದೆ. ಮಾರ್ಗದ ಒಂದು ಭಾಗದಲ್ಲಿ ಬೌದ್ಧ ಭಿಕ್ಷುಗಳ ವಸತಿಗಳನ್ನು ಕಾಣಬಹುದು. ದೇಗುಲ ಸಂಕೀರ್ಣದಲ್ಲಿ ಹಲವಾರು ದೇವಾಲಯಗಳ ಗೋಪುರಗಳಿದ್ದು, ಒಂದು ಕಟ್ಟಡದಲ್ಲಿ ಬುದ್ಧನ 394 ಮೂರ್ತಿಗಳನ್ನು ಕೂಡಿಸಿದ್ದಾರೆ. ಮುಖ್ಯ ಮಂದಿರದಲ್ಲಿರುವ ಬುದ್ಧನ ಪ್ರತಿಮೆ ಒರಗಿರುವ ಭಂಗಿಯಲ್ಲಿದ್ದು 46 ಮೀಟರ್ ಉದ್ದ ಹಾಗೂ 15 ಮೀಟರ್ ಎತ್ತರವಿದೆ. ಈ ಪ್ರಸಿದ್ಧ ಬುದ್ಧ ಪ್ರತಿಮೆಯ ಪಾದಗಳಲ್ಲಿ 108 ಶುಭ ಸಂಕೇತಗಳನ್ನು ಕೆತ್ತಲಾಗಿದೆ.

**ವಾಟ್‌ಅರುಣ** (ಮುಂಜಾವಿನ ದೇಗುಲ): ಬ್ಯಾಂಕಾಕಿನ ಕವಯಪ್ರಿಯ ನದಿಯ ಇನ್ನೊಂದು ಪಾರ್ಶ್ವದಲ್ಲಿ ಈ ಪ್ರಸಿದ್ಧ ದೇಗುಲವಿದೆ. ಈ ದೇಗುಲಕ್ಕೆ ಒಂದು ಮೇರು ಗೋಪುರವಿದ್ದು. ಈ ಗೋಪುರವನ್ನು ವಿವಿಧ ಅಂತಸ್ತುಗಳಾಗಿ ವಿಭಜಿಸಲಾಗಿದೆ. ಗೋಪುರಕ್ಕೆ ಬಣ್ಣ ಬಣ್ಣದ ಪಿಂಗಾಣಿ ಚೂರುಗಳನ್ನು ಲೇಪಿಸಿರುವುದು ಅದರ ಸೌಂದರ್ಯಕ್ಕೆ ಮೆರಗು ನೀಡಿದೆ. ಮುಂಜಾನೆಯ ಸೂರ್ಯ ಕಿರಣಗಳು ಈ ಪಿಂಗಾಣಿ ಗಾಜಿನ ಚೂರುಗಳ ಮೇಲೆ ಬಿದ್ದಾಗ ಇಡೀ ಗೋಪುರದಿಂದ ಬೆಳಕು ಪ್ರತಿಫಲನಗೊಂಡು ಸುಂದರವಾದ ದೃಶ್ಯ ನಿರ್ಮಾಣವಾಗುತ್ತದೆ. ಆದ್ದರಿಂದಲೇ ಈ ಮಂದಿರವನ್ನು ಮುಂಜಾನೆಯ ದೇಗುಲವೆಂದು ಕರೆಯುತ್ತಾರೆ. ಗೋಪುರದ ಮೇಲಿಂದ ಬ್ಯಾಂಕಾಕ್ ನಗರ ಮನೋಹರವಾಗಿ ಗೋಚರಿಸುತ್ತದೆ. ಟಾಕ್ಸಿನ್ ದೊರೆಯಿಂದ ಪುನರ್ನಿರ್ಮಾಣಗೊಂಡ ಈ ದೇಗುಲ, ಮೊದಲನೆಯ ಹಾಗೂ ಎರಡನೆಯ ರಾಮರಿಂದ ವೈಭವೀಕರಿಸಲ್ಪಟ್ಟಿತು.

● ಕೃಷ್ಣ ಕೊತಾಯ ●



ಪಿಂಗಾಣಿ ಚೂರುಗಳಿಂದ ಆವೃತವಾದ ವಾಟ್ ಅರುಣ್ ದೇಗುಲದ ಸುಪ್ರಸಿದ್ಧ ಪಗೋಡ.

---

**ವಾಟ್ ಬೆಂಚಮ ಬೋರ್‌ಪಿಟ್** (ಅಮೃತ ಶಿಲಾ ದೇಗುಲ): ಬ್ಯಾಂಕಾಕಿನ ದುಸಿಟ್ ಮೃಗಾಲಯದ ಬಳಿಯಿರುವ ಈ ಬುದ್ಧ ಮಂದಿರವನ್ನು ದೊರೆ ಐದನೆಯ ರಾಮ 1899ರಲ್ಲಿ ಕಟ್ಟಿಸಿದ. ಅಮೃತ ಶಿಲಾಮಯ ವಾದ ಈ ದೇಗುಲ ಒಂದು ಸುಂದರ ತಾಣ.

**ಪಚ್ಚೆ ಬುದ್ಧನ ದೇಗುಲ:** ಥಾಯ್‌ಲ್ಯಾಂಡ್ ರಾಷ್ಟ್ರದ ಅದ್ಭುತಗಳಲ್ಲೊಂದಾದ ಭವ್ಯ ಅರ ಮನೆ ಸಂಕೀರ್ಣದ ಮಹಾ ಮಾಂಟಿಯನ್ ರಾಜಗೃಹಗಳ ತುಸು ಉತ್ತರಕ್ಕೆ ಈ ಪಚ್ಚೆ ಬುದ್ಧನ ಮಂದಿರವಿದೆ. ಈ ದೇಗುಲದಲ್ಲಿ ಭಿಕ್ಷು ಗೃಹವೊಂದನ್ನು ಹೊರತುಪಡಿಸಿ, ಬೌದ್ಧ

ಮಂದಿರದಲ್ಲಿರಬೇಕಾದ ಎಲ್ಲ ವಾಸ್ತು ವೈವಿಧ್ಯ ಗಳಿವೆ.

ಈ ಮಂದಿರದೊಳಗಿನ ಪಚ್ಚೆ ಬುದ್ಧನ ಮೂರ್ತಿಯನ್ನು ಒಂದೇ ಹರಳಿನಿಂದ ಮಾಡಲಾಗಿದ್ದು ಇದನ್ನು ರಾಷ್ಟ್ರೀಯ ಸಂಪತ್ತೆಂದು ಪರಿಗಣಿಸಲಾಗಿದೆ. ಈ ಮೂರ್ತಿಯನ್ನು ಬಂಗಾರದ ಕುಸುರಿ ಕೆಲಸ ಮಾಡಿದ ಒಂದು ಅತಿ ಎತ್ತರದ ಪೀಠದ ಮೇಲೆ ಕುಳ್ಳಿರಿಸಿದ್ದಾರೆ. ಈ ಪೀಠವನ್ನು ಹಿಂದುಗಳು ನಂಬುವ ಪುಷ್ಪಕ ವಿಮಾನಕ್ಕೆ ಹೋಲಿಸಲಾಗಿದೆ. ಆಲಯದ ಒಳಮೈಯಲ್ಲಿ ಸುಂದರ ಚಿತ್ರಗಳಿವೆ. ಕಿಟಕಿಗಳ ಮೇಲ್ಭಾಗದಲ್ಲಿ ಬುದ್ಧನ ಕಥೆಯನ್ನು ಮನೋಜ್ಞವಾಗಿ ಚಿತ್ರಿಸಲಾಗಿದೆ. ಬುದ್ಧನ ಹುಟ್ಟು, ಬಾಲ್ಯ ಕೌಮಾರ್ಯ, ವೈರಾಗ್ಯ, ಸತ್ಯ ಶೋಧನೆ ಇನ್ನಿತ್ಯಾದಿ ಘಟ್ಟಗಳ ಸುಂದರ ಚಿತ್ರಣವಿದೆ. ಆಲಯದ ಬಲಬದಿಯ ಗೋಡೆಯ ಮೇಲೆ ಬುದ್ಧ ಭಗವಾನನ ಮನಸ್ಸು ಚಾಂಚಲ್ಯಕ್ಕೊಳಗಾಗುವುದು ಹಾಗೂ ಅವನ ಜ್ಞಾನೋದಯ ಸನ್ನಿವೇಶಗಳನ್ನು ಚಿತ್ರಿಸಲಾಗಿದೆ. ಬುದ್ಧನ ಪ್ರತಿಮೆಯ ಕೆಳಭಾಗದಲ್ಲಿ ವಸುಂಧರೆ ಹಾಗೂ ಇತರ ಚಿತ್ರಗಳಿವೆ. ಹಿಂಬದಿಯಲ್ಲಿ ಮಧ್ಯಯುಗದಲ್ಲಿ ಪೃಥ್ವಿಯ ಬಗ್ಗೆ ಇದ್ದ ಕಲ್ಪನೆಯನ್ನೂ, ಕಿಟಕಿಗಳ ನಡುವೆ ವಿವಿಧ ಜಾತಕ ಕಥೆಗಳನ್ನೂ ಚಿತ್ರಿಸಲಾಗಿದೆ. ದ್ವಾರದ ಕೆಳಭಾಗದಲ್ಲಿ ರಾಮಾಯಣದ ಆಯ್ದ ಭಾಗಗಳ ಸುಂದರ ಕುಸುರಿ ಕೆಲಸ ಕಾಣಬಹುದು.

ಬುದ್ಧನ ಪತ್ರಿಮೆಗೆ ಋತುವಿನುಗುಣವಾಗಿ (ಚಳಿಗಾಲ ಮಳೆಗಾಲ ಬೇಸಿಗೆ) ದಿರುಸನ್ನು ಬದಲಿಸುತ್ತಾರೆ. ದೇಗುಲದಲ್ಲಿ ಬುದ್ಧನ ಪ್ರತಿಮೆಯ ಎದುರು ಕಾಲು ನೀಡಿ ಕೂರುವುದು ನಿಷೇಧ. ಪಚ್ಚೆ ಬುದ್ಧನ ಈ ಪ್ರಸಿದ್ಧ ಮೂರ್ತಿ ಪತ್ತೆಯಾದುದು 1464ನೇ ಇಸವಿಯಲ್ಲಿ. ಈ ಮೂರ್ತಿ ಕಾರಣಾಂತರಗಳಿಂದ ರಾಜನಿಂದ ರಾಜನಿಗೆ ಹಸ್ತಾಂತರಗೊಂಡು, ಸ್ಥಳ ಬದಲಾವಣೆಯಾಗಿ ಕೊನೆಗೆ ಡೋನ್‌ಪುರಿ ರಾಜನಿಗೆ ಲಭಿಸಿತು. ಮುಂದೆ ದೊರೆ ಒಂದನೆಯ ರಾಮ ಅರಮನೆಯ ಸಂಕೀರ್ಣ ಕಟ್ಟಿಸಿದಾಗ ಈ ಚಾರಿತ್ರಿಕ ಮೂರ್ತಿಗೆ ಪ್ರತ್ಯೇಕವಾದ ಒಂದು ಆಲಯ ಕಟ್ಟಿಸಿದ. ದೇಗುಲದ ಹೊರಭಾಗದಲ್ಲಿರುವ ಪ್ರಾಂಗಣದಲ್ಲಿ ರಾಮಾಯಣದ ಕಥಾ ಚಿತ್ರಣವಿದೆ. ಈ ದೇಗುಲ ಸಂಕೀರ್ಣ ಪ್ರವೇಶಿಸುವಾಗ ಅಂಗಿಯ ಮಡಚಿದ ತೋಳುಗಳನ್ನು ಬಿಡಿಸಿಕೊಂಡು ಬರುವುದು ಗೌರವ ಸೂಚಕ ಸಂಕೇತ.

ಒಟ್ಟಿನಲ್ಲಿ ಬ್ಯಾಂಕಾಕಿನ ಈ ದೇಗುಲಗಳು ಬೌದ್ಧ ಧರ್ಮದ ಉತ್ಕರ್ಷಕ್ಕೆ ಹಿಡಿದ ಕನ್ನಡಿಗಳೆಂದರೆ ತಪ್ಪಾಗಲಾರದು.

**ಹಾಂಕಾಂಗ್:** ಬ್ಯಾಂಕಾಕನಿಂದ ಹಾಂಗ್ ಕಾಂಗ್‌ಗೆ ತೆರಳಿದ ನಾನು ಚೀನಾದ ಸಂಸ್ಕೃತಿ ಹಾಗೂ ಧಾರ್ಮಿಕತೆಯನ್ನು ಬಿಂಬಿಸುವ ದೇಗುಲಗಳನ್ನು ನೋಡಿದೆ. ಕೆಲ ಚಿಕ್ಕಪುಟ್ಟ ದೇಗುಲಗಳಲ್ಲದೆ ಹಾಂಕಾಂಗಿನ ಒಂದು ಪ್ರಸಿದ್ಧ ದೇಗುಲಕ್ಕೆ ಭೇಟಿ ಕೊಟ್ಟೆ.

ಮುಖ್ಯ ದೇಗುಲವಲ್ಲದೆ (ಗರ್ಭಗುಡಿ) ಸಂಕೀರ್ಣದಲ್ಲಿ ಇತರ ಸಣ್ಣ ಪುಟ್ಟ ದೇಗುಲಗಳಿರುವ ಈ ಆಲಯ ಅತಿ ವಿಸ್ತಾರವಾಗಿದೆ. ಈ ದೇಗುಲಕ್ಕೆ ಬರುವ ಮಾರ್ಗಗಳು ಜನ ನಿಬಿಡ ಮಾರಕಟ್ಟೆಗಳಾಗಿದ್ದು, ಇಲ್ಲಿ ತರ ತರನಾದ ಸಾಮಗ್ರಿಗಳು, ಚೀನಿ ಲಾಂಛನಗಳು, ಕರಕುಶಲ ವಸ್ತುಗಳು, ತೂಗಾಡುವ ಕಂಚಿನ ಸೊಗಸಾದ ಗಂಟೆಗಳು, ಚೀನಿ ಭಾಷೆಯ ತೂಗಾಡುವ ಫಲಕ ಮುಂತಾದವುಗಳನ್ನು ಮಾರಾಟಕ್ಕಿಟ್ಟಿರುತ್ತಾರೆ.

ಚೀನಿ ನಂಬುಗೆಗಳನ್ನು ಬಿಂಬಿಸುವ, ಭಾರತೀಯರಿಗೆ ತುಸು ವಿಚಿತ್ರವೆನಿಸುವ, ಪ್ರತಿಮೆಗಳನ್ನು ದೇವಮಂದಿರದಲ್ಲಿ ಕಾಣುತ್ತೇವೆ. ಚೀನಿ ನಂಬುಗೆಗಳಲ್ಲಿ ಸಮುದ್ರ, ವಿಚಿತ್ರ ತಲೆಯ ಹಾವುಗಳು, ಫೀನಿಕ್ಸ್ ಹಕ್ಕಿ ಇತ್ಯಾದಿಗಳಿಗೆ ವಿಶೇಷ ಸ್ಥಾನ. ಈ ಪ್ರತಿಮೆಗಳೂ ಹಾಗೂ ಬಣ್ಣಬಣ್ಣದ ಚಿತ್ರಗಳನ್ನು ದೇವಸ್ಥಾನದಲ್ಲಿ ಕಾಣಬಹುದು. ವಿವಿಧ ಪ್ರತಿಮೆಗಳ ಈ ಸಂಕೀರ್ಣ ಒಮ್ಮೆ ದಿಗ್‌ಭ್ರಮೆ ಹುಟ್ಟಿಸುತ್ತದೆ. ಮುಖ್ಯ ದೇಗುಲಕ್ಕೆ ಹೊಂದಿಕೊಂಡ ಒಂದು ಗುಡಿಯಲ್ಲಿ ಚೀನದ ಮಹಾನ್ ದಾರ್ಶನಿಕ ಹಾಗೂ ಮುತ್ಸದ್ದಿ ಕಾನ್‌ಫ್ಯೂಶಿಯಸ್‌ನ ವಿಗ್ರಹವಿದೆ. ಕಾನ್‌ಫ್ಯೂಶಿಯಸ್‌ನಿಗೆ ದೇವಮಂದಿರದಲ್ಲಿ ಸ್ಥಾನವಿರುವುದು ಚೀನೀಯರು ಬುದ್ಧಿಮತ್ತೆಗೆ ಕೊಟ್ಟ ಗೌರವದ ಸಂಕೇತ.

ಭಕ್ತಾದಿಗಳು ದೊಡ್ಡ ಸಂಖ್ಯೆಯಲ್ಲಿ ಈ

ದೇಗುಲಕ್ಕೆ ಬರುತ್ತಾರೆ. ಮಾಂಸವಲ್ಲದೆ ವಿವಿಧ ವಿಚಿತ್ರ ತಿನಿಸುಗಳನ್ನು ದೇವರಿಗೆ ನೈವೇದ್ಯವಾಗಿ ಸಮರ್ಪಿಸುತ್ತಾರೆ. ಈ ತಿನಿಸುಗಳು ದೇಗುಲದ ಪ್ರಾಂಗಣದಲ್ಲೇ ದೊರೆಯುತ್ತವೆ. ದೈತ್ಯ ಗಾತ್ರದ ಊದುಬತ್ತಿಗಳನ್ನು ದೇವರೆದುರು ಉರಿಸುವುದು ಚೀನಿ ದೇಗುಲಗಳಲ್ಲಿ ಕಂಡು ಬರುವ ಇನ್ನೊಂದು ವೈಶಿಷ್ಟ್ಯ. ಚೀನಿಯರು ಅದೃಷ್ಟದಲ್ಲಿ ಬಹು ನಂಬುಗೆಯುಳ್ಳ ಜನ. ಅಂತೆಯೇ ಪ್ರತಿ ದೇಗುಲದಲ್ಲಿ ಅದೃಷ್ಟ ಪರೀಕ್ಷಿಸಿಕೊಳ್ಳುವ ವ್ಯವಸ್ಥೆ ಇರುತ್ತದೆ.

ಭಾರತೀಯ ಸಂಸ್ಕೃತಿ ನಂಬಿಕೆ-ನಡಾವಳಿಗಳಿಗೆ ಬ್ಯಾಂಕಾಕಿನ ಬುದ್ಧ ಮಂದಿರಗಳು ಅತ್ಯಂತ ಹೆಚ್ಚಿನ ಹೋಲಿಕೆಗಳನ್ನು, ಸಾಮ್ಯವನ್ನು ಸಾದರಪಡಿಸಿದರೆ ಹಾಂಕಾಂಗಿನ ಈ ಚೀನಿ ದೇಗುಲಗಳು ಅಷ್ಟೇ ವಿಭಿನ್ನವಾಗಿವೆ.

ಮನಿಲಾ: ಫಿಲಿಪಿನ್ಸಿನ ರಾಜಧಾನಿ ಮನಿಲಾ ಒಂದು ಬೃಹತ್ ನಗರ. ಅಧಿಕ ಸಂಖ್ಯೆಯಲ್ಲಿ ಕ್ರೈಸ್ತ ಧರ್ಮೀಯರಿರುವ ಈ ಪ್ರದೇಶದಲ್ಲಿ ಪುರಾತನ ಹಾಗೂ ಆಧುನಿಕ ಸುಂದರ ಚರ್ಚುಗಳನ್ನು ದೊಡ್ಡ ಸಂಖ್ಯೆಯಲ್ಲಿ ಕಾಣಬಹುದು. ನಗರದ ಹೊರ ಅಂಚಿನಲ್ಲಿರುವ ಕೆಲ ಪುರಾತನ ಚರ್ಚ್‌ಗಳನ್ನು ನೋಡುವುದರ ಜೊತೆಗೆ ಮನಿಲಾದ ಅಮೆರಿಕನ್ ರುದ್ರಭೂಮಿಯಲ್ಲಿರುವ ಚರ್ಚನ್ನೂ ವೀಕ್ಷಿಸಿದೆ.

ಅಮೆರಿಕನ್ ರುದ್ರಭಮಿ ಹಚ್ಚ ಹಸಿರು ಹುಲ್ಲುಗಾವಲ ಮೇಲೆ ವಿಸ್ತಾರವಾಗಿ ಹರಡಿಕೊಂಡಿರುವ ಒಂದು ಮನಮನೋಹಕ ತಾಣ. ಎರಡನೆಯ ಮಹಾಯುದ್ಧದಲ್ಲಿ ಮಡಿದ ಅಮೆರಿಕನ್ ಹಾಗೂ ಫಿಲಿಪಿನೋ ಯೋಧರ ಸಾವಿರಾರು ಗೋರಿಗಳು ಇಲ್ಲಿವೆ. ಈ ಗೋರಿಗಳ ಮೇಲಿರುವ ಶಿಲುಬೆಯ ಕಲ್ಲನ್ನು ವಿದೇಶದಿಂದ ತರಿಸಿಕೊಂಡರಂತೆ. ವಿಶೇಷವಾದ ಶಿಲೆಯಿಂದ ತಯಾರಿಸಿದ ಶಿಲುಬೆಗಳು ಸಾಲು ಸಾಲಾಗಿ ಈ ರುದ್ರಭೂಮಿಯಲ್ಲಿ ಗೋಚರಿಸುತ್ತವೆ. ಈ ಪ್ರದೇಶದ ಒಂದು ಭಾಗದಲ್ಲಿ ವೃತ್ತಾಕಾರದ ವಿಶಾಲವಾದ ಕಟ್ಟಡವಿದ್ದು ಇದನ್ನು ವಿಶೇಷ ಶಿಲೆಯಿಂದ ನಿರ್ಮಿಸಲಾಗಿದೆ. ಒಂದು ಮಾರ್ಗದಂತಿರುವ ಈ ಕಟ್ಟಡದಲ್ಲಿ ಅಲ್ಲಲ್ಲಿ ಗೋಡೆಗಳಿದ್ದು, ಈ ಗೋಡೆಗಳ ಮೇಲೆ ಯುದ್ಧದಲ್ಲಿ ಮೃತರಾದವರ ಹೆಸರುಗಳನ್ನು ಬರೆಯಲಾಗಿದೆ. ಕಟ್ಟಡದ ಮಾರ್ಗದುದ್ದಕ್ಕೂ ಅಮೆರಿಕಾದ ಬೇರೆ ಬೇರೆ ರಾಜ್ಯಗಳ ಹೆಸರುಗಳನ್ನು ಬರೆದಿದ್ದಾರೆ. ಕಟ್ಟಡದ ಎರಡು ಭಾಗಗಳಲ್ಲಿ ದೈತ್ಯಗಾತ್ರದ ಭೂಪಟ ಗಳು



ವಾಟ್ ಅರುಣ್ (ಮುಂಜಾವಿನ ದೇಗುಲ) ದೇಗುಲ ಸಂಕೀರ್ಣ-ಬ್ಯಾಂಗ್‌ಕಾಕ್

ಎರಡನೆಯ ಮಹಾಯುದ್ಧದ ಸಮಯದ ದಾಳಿಯ ವಿವರಣೆಯನ್ನು ಒದಗಿಸುತ್ತವೆ. ಇದನ್ನೆಲ್ಲಾ ನೋಡಿದಾಗ ಭೀಕರ ಯುದ್ಧದ ನೆನಪು ಮರುಕಳಿಸಿ ದೇಶಕ್ಕಾಗಿ ಮಡಿದು ಚಿರ ನಿದ್ರೆಯಲ್ಲಿ ಪವಡಿಸಿರುವವರ ಸಾಹಸ ಗಾಥೆ ಹೃದಯದಲ್ಲಿ ಹೆಪ್ಪುಗಟ್ಟಿ ನಿಲ್ಲುತ್ತದೆ.

ಯುದ್ಧದ ಭೀಕರತೆ ಹಾಗೂ ಹಾನಿಯಿಂದ ಜಾಗತಿಕ ಶಾಂತಿಗೆ ಕರೆಕೊಡುತ್ತಿರುವಂತೆ ಈ ಪ್ರದೇಶದಲ್ಲಿರುವ ಸುಂದರ ಚರ್ಚ್‌ನಿಂದ ಮಧುರವಾದ ವಾದನ ಕೇಳಿ ಬರುತ್ತಿರುತ್ತದೆ. ಈ ದೇವ ಮಂದಿರದ ಸುತ್ತ ಆವರಿಸಿರುವ ಪ್ರಶಾಂತತೆ, ಜಾಗತಿಕ ಶಾಂತಿಯ ಸಂಕೇತ. ಆದ್ದರಿಂದ ಇಲ್ಲಿರುವ ಚರ್ಚ್ ಹೊಸ ಅರ್ಥವನ್ನೇ ಪಡೆದುಕೊಳ್ಳುತ್ತದೆ.

**ಸಿಂಗಾಪುರ:** ಭಾರತದಂತೆ ವಿವಿಧ ಮತ ಧರ್ಮಗಳ ಆಗರ ಸಿಂಗಾಪುರ. ಅಂತೆಯೇ ಇಲ್ಲಿ ವಿವಿಧ ಧರ್ಮಗಳನ್ನು ಪ್ರತಿನಿಧಿಸುವ ದೇವ ಮಂದಿರಗಳಿವೆ.

ಸಿಂಗಾಪುರದ ದಕ್ಷಿಣ ಸೇತುವೆಯ ಭಾಗದಲ್ಲಿರುವ ಮಾರಿಕಾಂಬಾ ಮಂದಿರ 1827ನೆಯ ಇಸವಿಯಲ್ಲಿ ಕಟ್ಟಲ್ಪಟ್ಟಿತು. ಇದರ ಹೊರ ದ್ವಾರ ಹಾಗೂ ಗೋಪುರ ಸುಂದರವಾಗಿವೆ. ಈ ದೇಗುಲಕ್ಕೆ ಬಂದಾಗ ಒಂದು ದಕ್ಷಿಣ ಭಾರತದ ಹಿಂದೂ ದೇಗುಲದಲ್ಲಿದ್ದ ಭಾವನೆ ಬರುತ್ತದೆ.

ರೇಸ್‌ಕೋರ್ಸ್ ಮಾರ್ಗದಲ್ಲಿರುವ ಸಹಸ್ರ ದೀಪದ ದೇಗುಲದಲ್ಲಿರುವ ಆರಾಧ್ಯ ದೈವ ಬುದ್ಧ. ಹದಿನೈದು ಮೀಟರ್ ಎತ್ತರದ ಬುದ್ಧ ಪ್ರತಿಮೆ ಇಲ್ಲಿನ ಆಕರ್ಷಣೆ. ಲೆಕ್ಕವಿಲ್ಲದಷ್ಟು ದೀಪಗಳುಳ್ಳ ಈ ಮಂದಿರದಲ್ಲಿ ಸಾಕಷ್ಟು ಧಾರ್ಮಿಕ ಸಂಕೇತಗಳೂ, ಪುರಾವೆಗಳೂ ಇವೆ. ಜಾಮಿಯಾ ಮಸೀದಿ ಹಾಗೂ ಸುಲ್ತಾನ್ ಮಸೀದಿ ಸಿಂಗಾಪುರದಲ್ಲಿರುವ ಎರಡು ಪ್ರಖ್ಯಾತ ಮಹಮ್ಮದೀಯ ಪ್ರಾರ್ಥನಾ ಸ್ಥಳಗಳು.

ಥಿಯನ್ ಹಾಂಕ್‌ಕೆಂಗ್ ಸಿಂಗಾಪುರದ ಪ್ರಸಿದ್ಧ ಚೀನಿ ದೇಗುಲ. 1840ರಲ್ಲಿ ನಿರ್ಮಿಸಲ್ಪಟ್ಟ ಈ ದೇಗುಲಕ್ಕೆ ಕೆತ್ತನೆಗಳೂ, ಮೂರ್ತಿಗಳೂ ಹಾಗೂ ಕಂಬಗಳನ್ನು ಚೀನಾದಿಂದ ವಿಶೇಷವಾಗಿ ತರಿಸಿಕೊಳ್ಳಲಾಯಿತು. ಟಾನ್‌ಸಿ ಚಾಂಗ್‌ಸು ದೇಗುಲ ಗಾತ್ರದಲ್ಲಿ ಚಿಕ್ಕದಾದರೂ ಸುಂದರವಾಗಿದ್ದು ಇದನ್ನು 1876 ರಲ್ಲಿ 'ಟಾನ್' ಸಂತತಿಯವರು ಕಟ್ಟಿದರು. ಸಿಯಾಂಗಲಿಮ್ ದೇಗುಲ ಸಿಂಗಾಪುರದ ಅತಿ ದೊಡ್ಡ ಚೀನಿ ದೇಗುಲ.

ಈ ಹಿನ್ನೆಲೆಯಲ್ಲಿ 'ಸಿಂಗಾಪುರ' ಒಂದು ಸರ್ವ ಧರ್ಮ ಸಮನ್ವಯ ತಾಣವೆನಿಸುತ್ತದೆ.

**ಶ್ರೀಲಂಕಾ:** ಬೌದ್ಧ ಧರ್ಮದವರು ಅತ್ಯಧಿಕ ಸಂಖ್ಯೆಯಲ್ಲಿರುವ ಶ್ರೀಲಂಕಾದಲ್ಲಿ ಹಲವಾರು ಬೌದ್ಧ ಮಂದಿರಗಳನ್ನು ಕಾಣುತ್ತೇವೆ. ಕೊಲಂಬೋದಲ್ಲಿ ಬುದ್ಧ ದೇಗುಲಗಳನ್ನು ನೋಡಿಕೊಂಡು ಕ್ಯಾಂಡಿಗೆ ತೆರಳಿದೆ. ಕ್ಯಾಂಡಿಯಲ್ಲಿರುವ ಪ್ರಸಿದ್ಧ ಬೌದ್ಧಾಲಯದಲ್ಲಿ ಬುದ್ಧನ ಹಲ್ಲನ್ನು ಇರಿಸಿರುವುದರಿಂದ ಈ ದೇಗುಲದ ಪಾವಿತ್ರ್ಯ, ಖ್ಯಾತಿ ನೂರ್ಮಡಿಗೊಂಡಿದೆ. ಈ ದೇಗುಲದ ಕಲ್ಲಿನ ಅಡಿಪಾಯ ಅತಿ ಎತ್ತರವಿದ್ದು, ಹಲವು ಮೆಟ್ಟಿಲುಗಳನ್ನೇರಿ ದೇಗುಲವನ್ನು ತಲುಪಬೇಕು. ಸುತ್ತಲೂ ಕಲ್ಲಿನ ಆವರಣವಿರುವ ಈ ದೇಗುಲ ಕೆತ್ತನೆಯ ದೃಷ್ಟಿಯಿಂದ ಅತಿ ಸಾಮಾನ್ಯವೆನಿಸುತ್ತದೆ. ಬುದ್ಧನ ಹಲ್ಲನ್ನಿರಿಸಿರುವ ಮುಖ್ಯ ಮಂದಿರದೆದುರು ಒಂದು ಬುದ್ಧನ ಪ್ರತಿಮೆಯನ್ನು ಇಡಲಾಗಿದೆ. ಮುಖ್ಯ ಮಂದಿರ ಮುಚ್ಚಿದಾಗ ಭಕ್ತಾದಿಗಳು ಇಲ್ಲಿ ಸೇವೆ ಸಲ್ಲಿಸುತ್ತಾರೆ. ದೇಗುಲದ ಒಂದು ಪಾರ್ಶ್ವದಲ್ಲಿ ಭಿಕ್ಷುಗಳ ವಸತಿಗಳಿದ್ದು, ಎದುರುಗಡೆ ಒಂದು ಸುಂದರವಾದ ಪುರಾತನ ಸರೋವರವಿದೆ. ಸರೋವರದ ಇನ್ನೊಂದು ಪಾರ್ಶ್ವದಲ್ಲಿ ಗುಡ್ಡವೊಂದರ ಮೇಲೆ ಬೌದ್ಧ ಭಿಕ್ಷುಗಳು ವಾಸಿಸುವ ಕುಟೀರಗಳಿವೆ. ಈ ಪ್ರದೇಶ ಅತಿ ಪ್ರಶಾಂತವಾಗಿದೆ. ದೇಗುಲ, ಸರೋವರ, ಗುಡ್ಡ, ಭಿಕ್ಷುಗಳ ವಸತಿ ಇವುಗಳ ಸಂಕೀರ್ಣ ಅತ್ಯಂತ ಮನೋಹರ ದೃಶ್ಯ.

ಒಟ್ಟಿನಲ್ಲಿ ಬೇರೆ ಬೇರೆ ದೇಶಗಳ ದೇವ ಮಂದಿರಗಳ ಅವಲೋಕನ ಒಂದು ಅವಿಸ್ಮರಣೀಯ ಅನುಭವ. ವಿವಿಧ ಧಾರ್ಮಿಕ ಸಂಹಿತೆಗಳು, ಸಮಾಜದ ಮೇಲೆ ಅವುಗಳ ಪ್ರಭಾವ ಧಾರ್ಮಿಕ ವೈವಿಧ್ಯದಲ್ಲಿ ಏಕತೆ ಸಾಮರಸ್ಯ ಇನ್ನಿತರ ವಿಚಾರಗಳ ಅಧ್ಯಯನ ವ್ಯಕ್ತಿಗೆ ಹೊಸ ಆಯಾಮಗಳನ್ನು ತೋರಿಸಬಲ್ಲವು. ಈ ಹಿನ್ನೆಲೆಯಲ್ಲಿ ನಮ್ಮ ದೇಶವನ್ನು ವಿವಿಧ ದೇಶಗಳೊಡನೆ ಹೋಲಿಸಿ ನೋಡುವುದು ಸಹ ಒಂದು ಉಪಯುಕ್ತ ಅಧ್ಯಯನವೇ ಸರಿ. ●

"ಕೆಲವರಿಗೆ ಕೆಲವು ಹವ್ಯಾಸಗಳು. ಒಬ್ಬರಿಗೆ ಅಂಚೆಚೀಟಿ ಸಂಗ್ರಹ, ಇನ್ನೊಬ್ಬರಿಗೆ ಕಲಾವಿದರು-ಕ್ರೀಡಾಪಟುಗಳ ಸಹಿ ಸಂಗ್ರಹ ಇತ್ಯಾದಿ. ನಮ್ಮ ಧಣಿಗೆ ಹೆಂಡಿರನ್ನು ಸಂಗ್ರಹಿಸುವ ಹವ್ಯಾಸ."

# ಶತಪತ್ನೀವಲ್ಲಭ

● ಗೋ. ●

"ಎಪ್ಪತ್ತೈದಕ್ಕೆ ಇಪ್ಪತ್ತೈದನ್ನು ಕೂಡಿಸಿ ಬಂದ ಮೊತ್ತವನ್ನು ಎರಡರಿಂದ ಭಾಗಿಸಿದರೆ ಬರುವ ಉತ್ತರ 50...

ಆದ್ದರಿಂದ 75ರ ವೃದ್ಧನೊಬ್ಬ 25ರ ಹುಡಗಿಯನ್ನು ಮದುವೆಯಾದರೆ ಆತ 50 ವರ್ಷದವನಾಗಿ ಬಿಡುತ್ತಾನೆ. ಯಾಕೆಂದರೆ ಆಕೆ ಆತನ ಅರ್ಧಾಂಗಿ...

ಹೆಚ್ಚು ಮದುವೆಗಳನ್ನು ಮಾಡಿಕೊಳ್ಳುವುದೂ ಒಂದು ಸಮಾಜಸೇವೆಯೇ. ಯಾಕೆಂದರೆ ವರದಕ್ಷಿಣೆ-ವರೋಪಚಾರ-ಮದುವೆ ವೆಚ್ಚಕ್ಕೆ ಖರ್ಚು ಮಾಡಲಾಗದೆಯೆ, ಮದುವೆಯಾಗದೆ, ಪ್ರಕೃತಿ ಸಹಜ ಧರ್ಮವಾದ ಕಾಮವನ್ನು ತಡೆಯಲಾಗದೆ ಬದುಕನ್ನು 'ಭಾರ' ಮಾಡಿಕೊಂಡು ಹೊಳೆಪಾಲಾಗುವ ಅಬಲೆಯರಿಗೆ, ತರುಣಿಯರಿಗೆ ಹಣದಾಸೆಯಿಲ್ಲದೆಯೇ ತಾಳಿ ಕಟ್ಟಲು ಒಬ್ಬ ವ್ಯಕ್ತಿ ಮುಂದೆ ಬಂದರೆ ತಪ್ಪೇನು?

ನಾನಂತೂ ಈ ಕಾರಣದಿಂದಲೇ ಹೆಚ್ಚು ಮದುವೆಗಳನ್ನು ಮಾಡಿಕೊಂಡಿದ್ದೇನೆ...."

—ಮೇಲಿನ ಉಕ್ತಿಗಳು ವಿಚಿತ್ರವೆನಿಸುತ್ತವಲ್ಲವೆ? ಆದರೂ ತನ್ನ ಈ ವಿಚಾರಗಳನ್ನು ತನ್ನದೇ ಆದ ತರ್ಕಕ್ಕೊಳಪಡಿಸಿ "ಆದ್ದರಿಂದ ನಾನಿನ್ನೂ ತರುಣ" ಎಂದು ವಾದಿಸುತ್ತಾನೆ ಈ ವ್ಯಕ್ತಿ. ಆದರೆ 75ರ ಗಂಡು 50 ವರ್ಷದವನಾಗುವಂತೆಯೇ ಆತನನ್ನು ಮದುವೆಯಾದ 25ರ ಆ ಹುಡುಗಿ ಮಾನಸಿಕವಾಗಿ-ದೈಹಿಕವಾಗಿ 50ರವಳಾಗಿ ಬಿಡುತ್ತಾಳಲ್ಲ ಎಂಬ ಬಗ್ಗೆ ಆತನಿಗೆ ಕಾಳಜಿಯೇ ಇಲ್ಲ. ಸಮಾಜ ಸೇವೆ ಎಂದುಕೊಂಡು ಶೋಷಣೆಗೈಯುತ್ತಿದ್ದೇನೆಂದು ಗೊತ್ತಿದ್ದು ಗೊತ್ತಿಲ್ಲದಂತಿರುವ ಈತ ವಿಕೃತ ಕಾಮ ಪಿಪಾಸೆಗೊಂದು ಉತ್ಕೃಷ್ಟ ಉದಾಹರಣೆ.

ಒರಿಸ್ಸಾ ರಾಜ್ಯದ ಕೋಂಝಾರ್ ಜಿಲ್ಲೆಯ ಕುಗ್ರಾಮ ಒರಾಲಿಯ ಉದಯನಾಥ ದಕ್ಷಿಣ ರಾಯ್ 'ಶತಪತ್ನೀವಲ್ಲಭ.' ಮೂರು ವರ್ಷಗಳ ಹಿಂದೆ ತನ್ನ 62ನೆಯ ವಯಸ್ಸಿಗಾಗಲೇ ಆತ ತೊಂಬತ್ತು ಸಲ ತಾಳಿ ಕಟ್ಟಿದ್ದ! ಕೇವಲ ಮೂವತ್ತಾರು ವರ್ಷಗಳಲ್ಲಿ ಆತ ಈ 'ವಿಕ್ರಮ'ವನ್ನು ಸಾಧಿಸಿದ್ದ! ನೂರು ಓಟಗಳನ್ನು ಗಳಿಸುವ ಛಲದ ಕ್ರಿಕೆಟ್ 'ದಾಂಡಿಗ'ನಂತೆ ಉದಯನಾಥನಿಗೂ 'ನೂರು ಹೆಂಡಿರ ಗಂಡ'ನಾಗುವ ಹಠವಿತ್ತು.

ಒರಾಲಿ ಕುಗ್ರಾಮವಾದ್ದರಿಂದ ಮತ್ತು ಉದಯನಾಥನಿಗೆ ಆ ಸುತ್ತಲಿನ ಸೀಮೆಯಲ್ಲಿ ಒಳ್ಳೆಯ ಹೆಸರಿರುವುದರಿಂದ ಈ ಬಹುಪತ್ನಿ



ಉದಯನಾಥನ ಎಪ್ಪತ್ತೈದನೆ ಸಂಸಾರ

ವಲ್ಲಭನಿಗೆ ಕಾಯಿದೆ-ಕಾನೂನುಗಳು ಏನೂ ಮಾಡಿಲ್ಲ.

ಒರಿಸ್ಸಾದ ಶ್ರೀಮಂತ ಜಮೀನುದಾರ ಕುಟುಂಬದಲ್ಲಿ ಜನಿಸಿದ ಉದಯನಾಥ ಕಲಕತ್ತಾದ ಸಿಟಿ ಕಾಲೇಜಿನಲ್ಲಿ ಕೆಲ ವರ್ಷ ಅಭ್ಯಾಸ ಮಾಡಿದ. ಒರಾಲಿಯ ಕೆಲವೇ ಅಕ್ಷರಸ್ಥರಲ್ಲಿ ಈತನೇ ಹೆಚ್ಚು ಓದಿದವ. ಮನೆಯಲ್ಲೊಂದು ದೊಡ್ಡ ಖಾಸಗಿ ಗ್ರಂಥಾಲಯವನ್ನಿಟ್ಟುಕೊಂಡಿರುವ ಉದಯನಾಥ ಆ ಗ್ರಾಮಸ್ಥರ ಪಾಲಿಗೆ 'ಎಲ್ಲವನು ಬಲ್ಲಪ್ಪ.' ಆತನ ಬಳಿ ನಿಮಗೆ ವಾತ್ಸ್ಯಾಯನನಿಂದ ಮೊದಲ್ಗೊಂಡು ಎಲ್ಲ ಕಾಮಶಾಸ್ತ್ರ ಪಂಡಿತರ ಗ್ರಂಥಗಳು, ನರ್ಗಿಸ್‌ಳಿಂದ ಇಂದಿನ ಖುಷ್‌ಬೂವರೆಗಿನ ಹಿಂದಿ ಚಿತ್ರಲೋಕದ ಅಪ್ಸರೆಯರ ವಿವಿಧ ಭಂಗಿಗಳ ಫೋಟೋ ಆಲ್ಬಮ್‌ಗಳು: 'ಲೈಂಗಿಕತೆಯಿಂದ ಆರೋಗ್ಯ'ದಂಥ ಪುಸ್ತಕಗಳು ಸಿಗುತ್ತವೆ. ಆತನ ಕಪಾಟುಗಳಲ್ಲಿ ತುಂಬಿರುವ ಗ್ರಂಥಶ್ರೇಷ್ಠಗಳಲ್ಲಿ ಇವು ಕೆಲವು ಮಾತ್ರ.

ಹೋಮಿಯೋಪತಿ ಮತ್ತು ಆಯುರ್ವೇದ ವೈದ್ಯಕಗಳಲ್ಲಿಯೂ ಸಾಕಷ್ಟು ಪರಿಣತಿಯಿದೆಯೆಂಬ ಖ್ಯಾತಿಗೂ ಪಾತ್ರನಾಗಿರುವ ಉದಯನಾಥ ಆ ಹಳ್ಳಿಗರ ದೃಷ್ಟಿಯಲ್ಲಿ ಸಾಕ್ಷಾತ್ ಧನ್ವಂತರಿ. ಅಲ್ಲದೆ ಆತ 'ಬಹುಭಾಷಾ ಪಂಡಿತ'ನೂ ಹೌದಂತೆ. ಮಾತೃಭಾಷೆ ಒಡಿಯಾ ಅಂತೂ ಸರಿಯೆ. ಬಂಗಾಲಿ, ಹಿಂದಿ, ಇಂಗ್ಲಿಷ್ ಮತ್ತು ತೆಲುಗು ಆತ ಬಲ್ಲ ಇತರ ಭಾಷೆಗಳು. ಆತನ ಹೆಂಡಿರಲ್ಲಿ ಇಂಗ್ಲಿಷೊಂದನ್ನುಳಿದು ಇತರ ನಾಲ್ಕು ಭಾಷೆಗಳವರು ಇರುವುದೇ ಈ ಕಾರಣದಿಂದಲೋ ಏನೋ.

ಈ 'ಜಮೀನ್ದಾರ' ಈಗ ವಾಸಿಸುತ್ತಿರುವುದು ಒಂದು ಗುಡಿಸಿಲಲ್ಲಿ. ಬಹಳಷ್ಟು ಜನ ಹೆಣ್ಣುಮಕ್ಕಳ ತಂದೆ ಒಬ್ಬೊಬ್ಬಳ ಮದುವೆಗೂ ಪಿತ್ರಾರ್ಜಿತ ಆಸ್ತಿಯನ್ನು ಭಾಗಶಃ ಮಾರುತ್ತ ಹೋಗುವಂತೆಯೇ ಆಗಿದೆ. ಈ ಬಹುಪತ್ನಿರಾಯನ ಸ್ಥಿತಿ. ಒಂದು ಕಾಲಕ್ಕೆ ನಾನೂರೈವತ್ತು ಎಕರೆ ಭೂಮಿಯ ಒಡೆಯನಾಗಿದ್ದ ಆತನ ಬಳಿಯೀಗ ಉಳಿದಿರುವುದು ಐದೆಕರೆ ಮಾತ್ರ. ಹೆಚ್ಚಿನ ಭೂಮಿ ಆತನ ಉಳಿದ ಪತ್ನಿಯರ ಸ್ವತ್ತಾಗಿದೆ. ತಾನು ಅನುಭವಿಸಿದ ಸುಖದೆದುರು ಈ ಜಮೀನೇನು? ಎಂಬ ದಿವ್ಯ

> "ಹೆಂಗಸು ಗಂಡಸಿನ ಅರ್ಧಾಂಗಿ. ಆಕೆಯಿಲ್ಲದೆ ಅರ್ಧಾಂಗನಾಗಿರುವ ಆತ ಅನೇಕ ಹೆಂಗಸರಿಂದಾಗಿ ಪೂರ್ಣಾಂಗನಾಗುತ್ತಾನೆ" ಎಂಬುದು ಶತಪತ್ನೀವಲ್ಲಭನ ಶತಸ್ಸಿದ್ಧಾಂತ.

ನಿರ್ಲಕ್ಷ್ಯ ಆತನದು!

ಉದಯನಾಥನ ಹಾಲಿ ಗೃಹದ ಪಕ್ಕದಲ್ಲೇ ಹಳೆಯ ದೊಡ್ಡ ಮನೆಯಿದೆ. ಅಲ್ಲೀಗ ಆತನ ನಾಲ್ಕನೆಯ ಹೆಂಡತಿ ಬಸಂತಿಲತಾ ವಾಸವಾಗಿದ್ದಾಳೆ. ಒಂದು ಕಾಲಕ್ಕೆ ಆಕೆಯೊಂದಿಗೆ ಇದೇ ಮನೆಯಲ್ಲಿದ್ದ ವಕ್ಷಿಣರಾಯ್. ಸದ್ಯ ತನ್ನ ಗುಡಿಸಿಲಲ್ಲಿ 75ನೆಯ ಹೆಂಡತಿ ಮೀರಾರಾಣಿಯೊಂದಿಗೆ ವಾಸಿಸಿರುವ ಉದಯನಾಥನಿಗೆ ಈಕೆಯೇ ಹೆಚ್ಚು ಪ್ರೀತಿಯವಳು. ನೆರೆಯ ಅಪಾಂದಾ ಎಂಬ ಹಳ್ಳಿಯಲ್ಲಿ ಈತನ ಇನ್ನಿಬ್ಬರು ಹೆಂಡಿರು ಕೂಲಿ-ನಾಲಿ ಮಾಡಿಕೊಂಡು ಜೀವಿಸುತ್ತಿದ್ದರೆ ಇನ್ನೊಂದಿಬ್ಬರು 20 ಕಿಲೋಮೀಟರ್ ದೂರದ ಗ್ರಾಮದಲ್ಲಿದ್ದಾರೆ. ಉಳಿದವರಲ್ಲಿ ಹೆಚ್ಚಿನವರು 'ಪತಿಯೇ ಪರದೈವ'ವೆಂಬ ಭಾರತೀಯ ಪರಂಪರಾನುಗತ ನಂಬಿಕೆಯನ್ನು ರೂಢಿಸಿಕೊಂಡು ಕಷ್ಟಪಡುತ್ತಿದ್ದರೆ ಇನ್ನು ಕೆಲವರು ಉದಯನಾಥನಿಂದ ವಿಚ್ಛೇದನ ಪಡೆದು ಪರಿಹಾರವೆಂದು ಜಮೀನಿನ ಕೆಲ ಅಂಶವನ್ನು ಪಡೆದು ತಮ್ಮ ಪಾಡಿಗೆ ತಾವಿದ್ದಾರೆ. ನಾಲ್ಕನೆಯ ಹೆಂಡತಿ ಬಸಂತಿಲತಾ ಪತಿಯೊಂದಿಗೆ ನಾಲ್ಕು ವರ್ಷ ಬಾಳುವೆ ನಡೆಸಿದಳಂತೆ. ಮುದ್ದಿನ ಮಡದಿ ಮೀರಾರಾಣಿ ಹತ್ತು ವರ್ಷಗಳಿಂದ ಜತೆಗಿದ್ದಾಳಂತೆ. ಆದರೆ ಈತನ ಉಳಿದೆಲ್ಲ ಹೆಂಡಿರೂ ಪತಿಯೊಂದಿಗಿದ್ದದ್ದು ಅಲ್ಪಕಾಲ ಮಾತ್ರ. ಕೆಲವರು 15 ದಿನ ಇನ್ನು ಕೆಲವರು 20 ದಿನ, ಮತ್ತೆ ಕೆಲವರು ಅಬ್ಬಬ್ಬಾ ಅಂದರೆ ಒಂದು ತಿಂಗಳು. ಹೆಚ್ಚಿನವರು ನೆಲೆ ದಪ್ಪಿದ ಹಕ್ಕಿಗಳಾಗಿ ಮರಳಿ ತವರನ್ನೇ ಆಶ್ರಯಿಸಿದ್ದಾರೆ.

ಈ ಭೂಪ ಮಾಡಿಕೊಂಡ ಮದುವೆಗಳಲ್ಲಿ 12 ಮಾತ್ರ ವಿಧ್ಯುಕ್ತವಾಗಿ ನಡೆದಂಥವು. ಉಳಿದವುಗಳೆಲ್ಲ ಗಾಂಧರ್ವ ವಿವಾಹಗಳು. ವಿಧ್ಯುಕ್ತ ಪತ್ನಿಯರೆಲ್ಲ ಕೋರ್ಟಿಗೆ ಹೋಗಿ ತನ್ನ ಆಸ್ತಿಯನ್ನು ಕಬಳಿಸಿದಂದಿನಿಂದ ಜಾಗರೂಕನಾಗತೊಡಗಿದ ಉದಯನಾಥ. ಈಗಾತ ಬಯಸುವುದು ಸರಳ ವಿವಾಹ ("ದೇವರೆದುರು ಮಾಲೆ ಹಾಕಿಕೊಂಡರಾಯಿತು"). ಈವರೆಗೆ 46 ಹೆಂಡಿರು ಆತನ ವಿರುದ್ಧ ಕೋರ್ಟಿಗೆ ಹೋಗಿದ್ದಾರಾದರೂ ಚೋದ್ಯವೆಂದರೆ ಯಾರೂ ಬಹುಪತ್ನೀತ್ವದ ಕುರಿತು ಆತನನ್ನು ನ್ಯಾಯಾಲಯಕ್ಕೆಳೆದಿಲ್ಲವೆಂಬುದು. ನಮ್ಮ ಸಮಾಜದ ಮನೋಧರ್ಮವನ್ನಿದು ಬಿಂಬಿಸುತ್ತದೆ.

ಬಹುಶಃ ಆತನ ಹುಟ್ಟು, ಬಾಲ್ಯ ಮತ್ತು ಬೆಳೆದು ಬಂದ ಪರಿಸ್ಥಿತಿಗಳೇ ಉದಯನಾಥ ಅತಿಕಾಮಿಯಾಗಲು ಕಾರಣವಾಗಿರಬೇಕು. ತಾಯ ಹಾಲು ಕುಡಿಯದೇ ಬೆಳೆದ ಆತನನ್ನು ಪೋಷಿಸಿದವ ತಂದೆಯ ಚಿಕ್ಕಪ್ಪನ ಮಗ. ಒಂದು ರೀತಿಯಲ್ಲಿ ತಾಯಿ, ಅಕ್ಕತಂಗಿಯರ ಸಹ ಬಾಳ್ವೆಯಿಲ್ಲದೆ ಬೆಳೆದ ಉದಯನಾಥನಿಗೆ 'ಸ್ತ್ರೀ' ಒಂದು 'ಅದ್ಭುತ'ವಾಗಿ ಕಾಡತೊಡಗಿರಬೇಕು. ಇಪ್ಪತ್ತಾರನೆಯ ವಯಸ್ಸಿಗೆ ಮೊದಲ ಮದುವೆಯಾದ. ಈತನ ಕಾಟವನ್ನು ತಾಳದ ಹೆಂಡತಿ ಹದಿನೈದೇ ದಿನಕ್ಕೆ ತಾಳಿ ಹರಿದು ಬಿಸಾಡಿ ತವರುಮನೆಗೋಡಿದಳು. ನಂತರ ಎರಡು ಬಾರಿ ಆತ್ಮಹತ್ಯೆಗೆಳಸಿದರೂ ಅಸಫಲನಾದ ಆತನಲ್ಲಿ ಸ್ತ್ರೀ ಸಾಮೀಪ್ಯದ ಆಸೆ ಅತಿಯಾಗತೊಡಗಿತು.

"ತರುಣಿ ತನ್ನ ತುಂಬು ಯೌವನದಿಂದ ಪುರುಷನಲ್ಲಿ ತಾರುಣ್ಯ ತುಂಬಿ ತುಳುಕುವಂತೆ ಮಾಡುತ್ತಾಳೆ. ಆತನ ದೇಹ, ಮನಸ್ಸು ಮತ್ತು 'ಸಾಮರ್ಥ್ಯ'ದಲ್ಲಿ ಆಕೆಯ ಸಹವಾಸ ಬಲವಾದ ಪರಿಣಾಮವುಂಟು ಮಾಡುತ್ತದೆ." "ಹೆಂಗಸು ಗಂಡಸಿನ ಅರ್ಧಾಂಗಿ. ಆಕೆಯಿಲ್ಲದೆ ಅರ್ಧಾಂಗನಾಗಿರುವ ಆತ ಅನೇಕ ಹೆಂಗಸರಿಂದಾಗಿ ಪೂರ್ಣಾಂಗನಾಗುತ್ತಾನೆ" ಎಂದು ಉದಯನಾಥ ಪ್ರತಿಪಾದಿಸುತ್ತಾನೆ.

ತನ್ನ ಹೆಂಡದಿರನ್ನೆಲ್ಲ ತುಂಬ ಗೌರವಯುತವಾಗಿ ನಡೆಸಿಕೊಳ್ಳುವುದಾಗಿ ಉದಯನಾಥ ಹೇಳುತ್ತಾನೆ. ಆದರೆ ಸವತಿಯರ ಕಾಟ ತಾಳಲಾರದೇ ತನ್ನಿಂದ ದೂರವಾದ ಹೆಂಡಂದಿರೇ ಹೆಚ್ಚು ಎಂಬುದು ಆತನ ಅಭಿಪ್ರಾಯ. ಹೆಂಡಂದಿರು ಓಡಿಹೋಗುವುದರಲ್ಲಿ, ವಿಚ್ಛೇದ ಪಡೆಯುವುದರಲ್ಲಿ ತನ್ನ ಪಾತ್ರ ಎಳ್ಳಷ್ಟೂ ಇಲ್ಲ

ಎನ್ನುವ ಉದಯನಾಥ, "ಪಾಪ, ಅವರಿಗೂ ಸ್ವಾತಂತ್ರ್ಯ-ಸುಖ ಬೇಕಲ್ಲ. ಅವರೂ ಮನುಷ್ಯರು. ಅವರ ಸ್ವಾತಂತ್ರ್ಯಕ್ಕೆ ನಾನೇಕೆ ಅಡ್ಡಿ ತರಲಿ? ಆದರೂ ಇನ್ನು ತನ್ನ ಎಲ್ಲ ಹೆಂಡಂದಿರಿಗೆ ಅವರೊಪ್ಪಿದರೆ ಪ್ರತ್ಯೇಕ ಮನೆ ಮಾಡಿಕೊಟ್ಟು, ಸರತಿಯ ಮೇಲೆ ಅವರ ಉಸ್ತುವಾರಿ ನೋಡಿಕೊಳ್ಳುತ್ತೇನೆ" ಎಂದು 'ಪ್ರಾಮಾಣಿಕ'ವಾಗಿ ಹೇಳುತ್ತಾನೆ.

ಉದಯನಾಥನಿಗಾಗಿ 'ವಧು'ಗಳನ್ನು ಶೋಧಿಸಲು ಆಯ್ದ ಕೆಲ ಮಂದಿ ಸದಾ ಶ್ರಮಿಸಿದ ರಂತೆ. ಬಡ ತರುಣಿಯರ ಪತ್ತೆಹಚ್ಚಿ, ಅವರ ತಂದೆತಾಯಿಂದಿರನ್ನು ಸಂಪರ್ಕಿಸಿ ಅವರ ಮಗಳಿಗೊಬ್ಬ "ಸಿರಿವಂತ ಆದರೆ ವಯಸ್ಸಾದ" ವರನನ್ನು ಹುಡುಕಿರುವುದಾಗಿಯೂ ಆತನಿಗೆ ಹಣದ ಮೇಲೆ ಆಸೆಯಿಲ್ಲ, ಯಾವುದಾದರೂ ಗುಡಿ-ಗುಂಡಾರದಲ್ಲಿ ಮಾಲಾವಿನಿಮಯದೊಂದಿಗೆ ಮದುವೆ ಮಾಡಿಕೊಟ್ಟರಾಯಿತು. ನಿಮ್ಮ ಹುಡುಗಿ ಸುಖಿಯಾಗಿರುತ್ತಾಳೆ ಎಂದು ನಂಬಿಸುವುದು ಮತ್ತು ಸ್ವಲ್ಪ ಹಣವನ್ನು ಕನ್ಯಾಪಿತೃವಿನ ಕೈಯಲ್ಲಿ ಹಾಕಿಬಿಡುವುದು ಅವರ ಕೆಲಸ. ಮಗಳಿಗೊಂದು ಮದುವೆ ಮಾಡಿಬಿಡುವ ತರಾತುರಿಯಲ್ಲಿರುವ ಕನ್ಯಾಪಿತೃವಿಗೆ 'ಒಳ್ಳೆಯ ಸಂಬಂಧ'ವೊಂದು ಮನೆಬಾಗಿಲಿಗೇ ಬಂದು ನಿಂತಾಗ ವರನ ವಯಸ್ಸೆಷ್ಟು, ಆಸ್ತಿ ಎಷ್ಟಿದೆ. ಮುಂಚೆ ಮದುವೆಯಾಗಿದ್ದಾನೆಯೇ ಮುಂತಾದ ಪ್ರಶ್ನೆಗಳು ಗೌಣವಾಗಿ ಬಿಡುತ್ತವೆ. ಅವರ ಅಸಹಾಯಕತೆಯ ಲಾಭವನ್ನು ತಾನು ಪಡೆದುಕೊಳ್ಳುತ್ತಿದ್ದೇನೆಂಬುದನ್ನು ಎಂದಿಗೂ ಉದಯನಾಥ ಒಪ್ಪಿಲ್ಲ.

ಎಂಬತ್ತೈದು ಎಕರೆ ಜಮೀನನ್ನು ನಿನ್ನ ಹೆಸರಿಗೆ ಹಚ್ಚುತ್ತೇನೆಂದು ನಂಬಿಸಿ ಒಬ್ಬನ ಹದಿನಾಲ್ಕರ ಎಳೆಯ ತಂಗಿಯನ್ನು ಉದಯನಾಥ ಮದುವೆಯಾದ. ಆಕೆಯೇ ಮೀರಾರಾಣಿ. ಇಂದಿಗೂ ಆಕೆಯ ಅಣ್ಣ ಜಮೀನು ತನ್ನ ಹೆಸರಿಗೆ ಹಚ್ಚು ಎಂದು ಉದಯನಾಥನ ಮನೆಗೆ ಅಲೆಯುತ್ತಲೇ ಇದ್ದಾನೆ. ನಾಲ್ಕನೆಯ ಹೆಂಡತಿ ಬಸಂತಿಲತಾ ಗಲಾಟೆ ಮಾಡಿ ಒಂದು ಮನೆ ಮತ್ತು ನಲವತ್ತೆಕರೆ ಜಮೀನನ್ನು ಉದಯನಾಥನಿಂದ ಪಡೆದುಕೊಂಡಿದ್ದಾಳೆ. ಆದರೂ ಆಕೆಯ ದೃಷ್ಟಿಯಲ್ಲಿ ಗಂಡ




ನಮ್ಮಾಕೆಗೆ ಹೂವು ಅಂದ್ರೆ ಪಂಚಪ್ರಾಣ... ಅದಕೆ!!

'ಅಸಾಮಾನ್ಯ ಪುರುಷ'.

ಉದಯನಾಥನಿಗೆ ಬಸಂತಿಲತಾಳಿಂದ ಹುಟ್ಟಿದ ಮಗ ಸುಧಾಂಶು ದಕ್ಷಿಣರಾಯ್ ತನ್ನ ಇಪ್ಪತ್ತೈದು ವರ್ಷಗಳವಧಿಯಲ್ಲಿ ಮೂವತ್ತು ಜನ "ಚಿಕ್ಕಮ್ಮಂದಿರು" ಬಂದಿರುವುದನ್ನು ಕಂಡಿದ್ದಾನೆ. ಆತನ ಪ್ರಕಾರ ಅವರಲ್ಲಿ ಹೆಚ್ಚಿನವರು ಕೂಲಿಯಾಳುಗಳು. ಮಾತಂಗಿ ಇಂಥ ಹೆಂಡಿರಲ್ಲೊಬ್ಬಳು. ಹದಿನೈದು ವರ್ಷದ ಹಿಂದೆ ತನ್ನ ಹದಿನಾಲ್ಕರ ವಯಸ್ಸಿನಲ್ಲಿ ತಾಳಿ ಕಟ್ಟಿಸಿಕೊಂಡು ಬಂದು ಹದಿನಾರನೆಯ ದಿನಕ್ಕೆ ಗಂಡನಿಂದ ದೂರವಾಗಿ ತವರಿಗೂ ಹೋಗದೆ ಪಕ್ಕದ ಹಳ್ಳಿಯಲ್ಲಿ ಜೀವಿಸುತ್ತಿದ್ದಾಳೆ.

ಮಾತಂಗಿಯಂಥ ಅಮಾಯಕ ತರುಣಿಯರೇ ಹೆಚ್ಚು ಉದಯನಾಥನ ಹೆಂಡಿರಲ್ಲಿ. ಕೆಲವರನ್ನಂತೂ ಉದಯನಾಥನ ಆಸೆ ಪೂರೈಸಲು ಜಾಡಿಗೆಗೆ ತಂದು ತಾಳಿ ಕಟ್ಟಿ, ಹೊರ ಅಟ್ಟ

ಲಾಯಿತಂತೆ. "ಸದ್ಯ ನನ್ನ ಗಂಡ ಅವರನ್ನು ಹೆಂಡತಿಯೆಂದಾದರೂ ಸ್ವೀಕರಿಸುತ್ತಾನೆ. ಹಾಗೆ ನಿಜವಾಗಿ ಕಾಮತೃಷೆಯನ್ನು ಹಿಂಗಿಸಿ ಕೊಳ್ಳುವುದೇ ಆತನ ಉದ್ದೇಶವಾಗಿದ್ದರೆ ಅವ ರನ್ನು ಎಳೆಸಿ ತಂದು ಭೋಗಿಸಬಹುದಾಗಿತ್ತಲ್ಲವೆ? ನನ್ನ ಗಂಡ ಹೆಂಗರುಳಿನವ" ಎಂದು ಸಮಜಾಯಿಷಿ ನೀಡುತ್ತಾಳೆ ಮೀರಾರಾಣಿ.

ಬಸಂತಿಲತಾಳ ಪ್ರಕಾರ ಆತನ ಐದನೆಯ ಹೆಂಡತಿ ಸತ್ಯಭಾಮಾಳೆ ಉದಯನಾಥ ಇಷ್ಟು ಕೆಡಲು ಕಾರಣ. ಗಂಡನಿಗಾಗಿ ಹುಡುಗಿಯ ರನ್ನು ಮನವೊಲಿಸಿ ಕರೆತಂದು ಮದುವೆಯ ನಾಟಕವಾಡಲು ಕಲಿಸಿದವಳೇ ಅವಳಂತೆ.

ಉದಯನಾಥನ ಬಗ್ಗೆ ಎಲ್ಲ ಗೊತ್ತಿದ್ದರೂ ಜನ ಸುಮ್ಮನಿದ್ದಾರೆ. ಯಾಕೆಂದರೆ ದಕ್ಷಿಣ ರಾಯ್ ಮನೆತನ ತಲೆತಲಾಂತರದಿಂದ ಆ ಹಳ್ಳಿಯ ಧಣಿಗಳದು. ಊರಿಗೆ ನೂರು ಮನೆ ಮಾಡುವುದು. ಆ ಮನೆ ತನದ ಪರಂಪರೆ. ಅಂದಮೇಲೆ ಆ ಪರಂಪರೆಯನ್ನು ಮುಂದು ವರೆಸಿಕೊಂಡು ಹೋಗುತ್ತಿರುವ ಉದಯ ನಾಥನ ಬಗ್ಗೆ ಅವರೇಕೆ ಸುಮ್ಮನೆ ತಲೆಕೆಡಿಸಿ ಕೊಂಡಾರು? ಇನ್ನು ಪೊಲೀಸು-ಸರಕಾರಗಳು ಯಾರಾದರೂ ಈ ಬಗ್ಗೆ ದೂರಿದರೆ ತಾನೆ ಅವಕ್ಕೆ ಎಚ್ಚರಾಗುವುದು... ಅಲ್ಲದೆ ಈ ಧನ್ವಂತರಿಗಿರುವ ದೊಡ್ಡ ಹೆಸರು ಆತನ ವಿರುದ್ಧ ದನಿಯೆತ್ತಲು ಅಡ್ಡಬರುತ್ತಿದೆ. ಒಮ್ಮೆ ಈ ಕುರಿತು ಬುದ್ಧಿಜೀವಿಯೊಬ್ಬ ಕೂಗಾಡಿ ಜನರ ಕಣ್ಣು ತೆರೆಸಲು ಯತ್ನಿಸಿದಾಗ ಅವರೆಲ್ಲ ಈ ಆಧುನಿಕ ಕೃಷ್ಣನ ಪರನಿಂತುಬಿಟ್ಟರಂತೆ. ಆ ಬುದ್ಧಿಜೀವಿ ಇತ್ತ ತಿರುಗಿ ನೋಡುವ ಸಾಹಸ ವನ್ನು ಮತ್ತೆ ಮಾಡಲಿಲ್ಲವಂತೆ.

ಬಡರೋಗಿಗಳ ಬಂಧುವೆನಿಸಿರುವ ಉದಯ ನಾಥ ಪ್ರತಿ ಹೊಸ ಮದುವೆಯ ನಂತರ ಊರಿಗೆ ಊಟ ಹಾಕಿಸುತ್ತಿದ್ದುದೂ ಆತನ ಬಗ್ಗೆ ಜನಕ್ಕೆ ಹೆಚ್ಚು ಗೌರವ ಹುಟ್ಟಲು ಕಾರಣವಾಗಿ ರಬೇಕು. ಹೆಂಗಸರಿಗಾದರೂ ಉದಯನಾಥನ ಈ ಕ್ರಮ ರೊಚ್ಚುಂಟು ಮಾಡಿದೆಯೆ? ಇಲ್ಲ.

(ಆಧಾರಿತ)

## ಹೆಸರಿನಲ್ಲೇನಿದೆ !

ಹೈದರಾಬಾದು ನಿಜಾಮರ ಪೂರ್ತಿ ಹೆಸರು ಹೀಗಿದೆ: ಹಿಸ್ ಎಕ್ಸಾಲ್ಟೆಡ್ ಹೈನೆಸ್ ಅಸಫ್ ಝಾ, ಮುಝಾಫರ್ ಉಲ್‌ಮುಲ್ಕ್, ವಾಲಿಮಾಮ್‌ಲಿಕ್, ನಿಝಮ್ ಉಲ್ ಮುಲ್ಕ್, ನಿಜಾಮ ಉದ್‌ದೌಲಾ, ನವಾಬ, ಮೀರ್, ಸರ್ ಉಸ್ಮಾನ್ ಅಲೀಖಾನ್ ಬಹಾದ್ದೂರ್ ಫತೇ ಜಂಗ್!

ಪಟಿಯಾಳಾ ಮಹಾರಾಜರ ಪೂರ್ಣ ಹೆಸರು: ಲೆಫ್ಟಿನೆಂಟ್ ಜನರಲ್ ಹಿಸ್ ಹೈನೆಸ್ ಶ್ರೀ (108 ಸಾರಿ) ಮಹಾರಾಜಾಧಿರಾಜ, ರಾಜೇಶ್ವರ ಶ್ರೀ ಮಹಾರಾಜಾ-ಯ-ರಾಜಗಣ ಮಹಾರಾಜ ಶ್ರೀ ಭೂಪೇಂದ್ರ ಸಿಂಗ್ ಮಹೇಂದ್ರ ಬಹಾದೂರ್ ಯದುವಂಶಾವತಂಸ ಭಟ್ಟಿ ಕುಲಭೂಷಣ, ಜಿ.ಸಿ.ಐ.ಇ., ಜಿ.ಬಿ.ಇ., ಎಲ್.ಎಲ್.ಡಿ.!

ನ್ಯೂಜಿಲ್ಯಾಂಡ್ ಉತ್ತರ ದ್ವೀಪದ ದಕ್ಷಿಣ ಹಾಕ್ಸ್‌ಕೊಲ್ಲಿಯ ಒಂದು ಜಿಲ್ಲೆಯ 83 ಅಕ್ಷರಗಳ ಮಾವೋರಿ ಭಾಷೆಯ ಹೆಸರನ್ನು ಈ ರೀತಿ ಕನ್ನಡಿಸಬಹುದು.

ಭೂಮಿಯನ್ನೇ ನುಂಗುವವನೆಂದು ಹೆಸರಾಂತ ಪರ್ವತಗಳನ್ನು ಹತ್ತಿಳಿದು ಜಾರುಬಂಡೆಯಾಟ ಹಾಡಿ ಅವುಗಳನ್ನೇ ನುಂಗುತ್ತಿದ್ದ ಟ್ಯಾಮಾಟೀ ಎಂಬಾತನು ತನ್ನ ಪ್ರೇಯಸಿಯನ್ನು ಎದುರಿಗೆ ಕೂರಿಸಿಕೊಂಡು ಕೊಳಲೂದುತ್ತಿದ್ದ ಸ್ಥಳ!

ಅನ್ನಾವಲ್ ಭಾಷೆಯಲ್ಲಿ: ಮಾ ಎಂಬ ಶಬ್ದಕ್ಕೆ ತಾಯಿ, ಅನ್ನ, ಕುದುರೆ, ದೆವ್ವ, ಸಮಾಧಿ ಹಾಗೂ ಆಂದರೆ ಎಂಬರ್ಥಗಳಿವೆ.

ನ್ಯೂಜಿಲ್ಯಾಂಡ್‌ನ ಒಂದು ಹಳ್ಳಿಯ ಹೆಸರು ಪೂರ್ಣವಾಗಿ ಮಾವೋರಿ ಭಾಷೆಯಲ್ಲಿ ಹೀಗಿದೆ:–
ಟ್ಯಾ ಮ್ಯಾ ಟಾ ಹ್ವಾ ಕ್ಯಾ ಟ್ಯಾ ಗೀ ಹ್ಯಾಂ ಗೀ ಕೀ ಹ್ವೋ ಟೋ ಮ್ಯಾ ಟೀ ಟುಂ ಪ್ಯು ಕ್ಯಾ ಕಾ ಪೀ ಕೀ ಮಾಂಗಾ ಹೋರೋ ಮಕು ಪೋ ಕೆ ಹ್ವಾ ನಾ ಕೀ ಟೀ ನ್ಯಾ ಟಾ ಹೂ.

ಸಂಗ್ರಹ: ಸಿ.ಎಸ್. ಪಟ್ಟಾಭಿರಾಮಯ್ಯ.

ಪ್ರತಿಭಾಶಾಲಿಯ
ನಿಗೂಢ ಅಂತ್ಯ

# ಖಗೋಳ ವಿಜ್ಞಾನಿ ರಿಚರ್ಡ್ ಕ್ಯಾರಿಂಗ್‌ಟನ್

● ಬಿ.ಎಸ್. ಶೈಲಜಾ ●

ಸೌರ ವಿಜ್ಞಾನಿಗಳಿಗೆ ರಿಚರ್ಡ್ ಕ್ಯಾರಿಂಗ್‌ಟನ್ ಹೆಸರು ಹೊಸತೇನಲ್ಲ. ಸೌರಬಿಂಬವು ಘನವಸ್ತುವಿನಂತೆ ಕಂಡರೂ ಅದು ಅನಿಲಗಳಿಂದಾದ ಒಂದು ಕಾಯ ಎಂದು ಸ್ಥಿರೀಕರಿಸಿದವರಲ್ಲಿ ಈತನೇ ಮೊದಲಿಗ. ಅದೇ ರೀತಿ ಉತ್ತರ ಧ್ರುವದ ಸಮೀಪದಲ್ಲಿರುವ ಸುಮಾರು 3,700 ನಕ್ಷತ್ರಗಳನ್ನು ಅಭ್ಯಸಿಸಿ ಪಟ್ಟಿಮಾಡಿದ ಕೀರ್ತಿಯೂ ಆತನಿಗೇ ಸಲ್ಲುತ್ತದೆ.

ಷೆರ್ಲಾಕ್ ಹೋಂಸ್‌ನ ಅಪ್ರಕಟಿತ ಕತೆಯೊಂದರಲ್ಲಿ ಕೊಡೆಯನ್ನು ತರಲು ಮನೆಯೊಳಗೆ ಹೋದಾತ ಮತ್ತೆ ಹೊರಬರುವುದೇ ಇಲ್ಲ. ಇಂಥದೇ ಘಟನೆ ಈ ಖ್ಯಾತ ಖಗೋಳ ವಿಜ್ಞಾನಿಯ ಜೀವನದಲ್ಲಿಯೂ ನಡೆಯಿತು.

1826ರಲ್ಲಿ ಜನಿಸಿದ ರಿಚರ್ಡ್ ಉತ್ತಮ ಕುಟುಂಬಕ್ಕೆ ಸೇರಿದವನು. ಆತನ ತಂದೆ ಮದ್ಯದ ಕಾರಖಾನೆಯೊಂದನ್ನು ನಡೆಸುತ್ತಿದ್ದನು. ಲಂಡನ್ನಿನ ಟ್ರೆನಿಟಿ ಕಾಲೇಜಿನಲ್ಲಿ ಅಭ್ಯಸಿಸಿ ಅಂದಿನ ಖ್ಯಾತವೆತ್ತ ಖಗೋಳಜ್ಞರಾಗಿದ್ದ ಜೇಮ್ಸ್ ಚಾಲಿಸ್‌ರವರ ಶಿಷ್ಯವೃತ್ತಿಯನ್ನು ಕೈಕೊಂಡ. ಖಗೋಳ ವಿಜ್ಞಾನವನ್ನೇ ವೃತ್ತಿಯನ್ನಾಗಿ ಆರಿಸಿಕೊಳ್ಳಬೇಕೆಂಬುದು ಆತನ ಆಕಾಂಕ್ಷೆ. "ನನ್ನ ಗಣಿತದ ಅಭ್ಯಾಸದ ದಿನಗಳಿಂದಲೇ ನನಗೆ ವೀಕ್ಷಣೆ ಹಾಗೂ ತಾಂತ್ರಿಕ ಜ್ಞಾನದತ್ತ ಸೆಳೆತ ಇದೆ ಎಂದು ಕಂಡುಕೊಂಡಿದ್ದೆ" ಎಂದಾತ ಬರೆದುಕೊಂಡಿದ್ದಾನೆ. ತಂದೆಯ ಆಸೆ ಚರ್ಚ್‌ನಲ್ಲಿ ಮಗ ಸೇವೆ ಸಲ್ಲಿಸಲಿ ಎಂದಿತ್ತು. ಆದರೆ ರಿಚರ್ಡ್ ತಂದೆಯ ಮನವೊಲಿಸಿ ಖಗೋಳವಿಜ್ಞಾನವನ್ನೇ ಆರಿಸಿಕೊಂಡ.

1849ರಲ್ಲಿ ರಿಚರ್ಡ್ ಡರ್ನ್‌ಹ್ಯಾಮ್ 'ವೀಕ್ಷಕ'ನಾಗಿ ಕೆಲಸಕ್ಕೆ ಸೇರಿದ ಕ್ಯಾರಿಂಗ್‌ಟನ್. ಅಲ್ಲಿದ್ದ 6½ ಅಂಗುಲ ದೂರದರ್ಶಕವನ್ನು ಸ್ವತಂತ್ರವಾಗಿ ಹಾಗೂ ಸಂಪೂರ್ಣವಾಗಿ ಉಪಯೋಗಿಸಿ ನಕ್ಷತ್ರಗಳು, ಕ್ಷುದ್ರ ಗ್ರಹಗಳು ಹಾಗೂ ಧೂಮಕೇತುಗಳ ಅಧ್ಯಯನವನ್ನು ನಡೆಸಿದ. ಮೂಲಭೂತ ಸಂಶೋಧನೆಗಳನ್ನು ಪ್ರಕಟಿಸುತ್ತಿದ್ದ ಕೆಲವು ಹೆಸರಾಂತ ನಿಯತಕಾಲಿಕೆಗಳಲ್ಲಿ ತನ್ನ ಸಂಶೋಧನ ಲೇಖನಗಳನ್ನು ಪ್ರಕಟಿಸಿದ.

ತನ್ನ ವೀಕ್ಷಣೆಗಳನ್ನು ಮುಂದುವರೆಸಲು ಅಲ್ಲಿ ಸಾಕಷ್ಟು ಅವಕಾಶ ಇಲ್ಲದಿರುವುದನ್ನು ಮನಗಂಡು 1852ರಲ್ಲಿ ರಾಜೀನಾಮೆ ನೀಡಿ ಹೊರಬಂದ. ತಂದೆಯ ಮದ್ಯದ ಕಾರಖಾನೆಯಿಂದ ಸಾಕಷ್ಟು ಉತ್ಪನ್ನ ಇದ್ದುದರಿಂದ ಹಣಕಾಸಿನ

ತೊಂದರೆ ಇರಲಿಲ್ಲ. ಆದ್ದರಿಂದ ಸ್ವತಂತ್ರವಾದ ವೀಕ್ಷಣಾಲಯವೊಂದನ್ನು ರೆಡ್‌ಹಿಲ್ ಎಂಬ ಸಣ್ಣಹಳ್ಳಿಯಲ್ಲಿ ತೆರೆದು ಅನೇಕ ಬಗೆಯ ಖಗೋಳ ಅಧ್ಯಯನದ ಉಪಕರಣಗಳನ್ನು ಜೋಡಿಸಿಕೊಂಡ. ಇವುಗಳ ಸಹಾಯದಿಂದ 1853ರಲ್ಲಿ ಒಂದು ಸರ್ವೇಕ್ಷಣವನ್ನು ಪ್ರಾರಂಭಿಸಿದ. ಉತ್ತರ ಧ್ರುವಕ್ಕೆ ಒಂಬತ್ತು ಡಿಗ್ರಿಗಳಷ್ಟು ವೃತ್ತದೊಳಗಿರುವ ಸುಮಾರು 3,735 ನಕ್ಷತ್ರಗಳನ್ನು ಅಭ್ಯಸಿಸಿ, ಈ ವರದಿಯನ್ನು ದೀರ್ಘ ವಿವರಣೆಯೊಂದಿಗೆ ಪ್ರಕಟಿಸಿದ. ಈ ಶ್ರಮವನ್ನು ಗುರುತಿಸಿ, 1859ರಲ್ಲಿ ರಾಯಲ್ ಅಸ್ಟ್ರನಾಮಿಕಲ್ ಸೊಸೈಟಿ ಚಿನ್ನದ ಪದಕ ನೀಡಿ ಗೌರವಿಸಿತು.

ಸೌರವಿಜ್ಞಾನಕ್ಕೆ ಈತನ ಕೊಡುಗೆ ಮಹತ್ವದ್ದು. 1853ರಿಂದಲೇ ಸೂರ್ಯನ ಮಚ್ಚೆಗಳನ್ನು ಗುರುತಿಸಿ ಅವುಗಳ ವ್ಯತ್ಯಾಸವನ್ನು ಅಧ್ಯಯನ ಮಾಡುವ ಯೋಜನೆಯನ್ನು ಪ್ರಾರಂಭಿಸಿದ. ಸೂರ್ಯಬಿಂಬವು ತನ್ನ ಅಕ್ಷದ ಮೇಲೆ ಸುತ್ತಲು ಬೇಕಾಗುವ ಅವಧಿಯನ್ನು ಕಂಡುಹಿಡಿಯುವುದೂ ಸಹ ಒಂದು ಉದ್ದೇಶವಾಗಿತ್ತು. ಇದಕ್ಕಾಗಿ ಈತ ಬಳಸಿದ್ದು ಕೇವಲ ನಾಲ್ಕೂವರೆ ಅಂಗುಲ ವ್ಯಾಸದ ದೂರದರ್ಶಕವೊಂದನ್ನು ಮಾತ್ರ. ಇದರ ಸಹಾಯದಿಂದ ಪರದೆಯ ಮೇಲೆ ಸುಮಾರು ಹನ್ನೊಂದು ಅಂಗುಲ ವ್ಯಾಸದ ಸೂರ್ಯಬಿಂಬವನ್ನು ಮೂಡಿಸಿಕೊಂಡ. ದೂರದರ್ಶಕದ ನಾಭಿಯಲ್ಲಿ ಎರಡು ಪರಸ್ಪರ ಲಂಬವಾದ (ಚಿನ್ನದ) ತೆಳ್ಳನೆಯ ತಂತಿಗಳನ್ನು ಬಿಗಿದು ಆಧಾರ ಬಿಂಬವನ್ನು ಕಲ್ಪಿಸಿದ. ಇವು ಉತ್ತರ-ದಕ್ಷಿಣ ಪೂರ್ವ-ಪಶ್ಚಿಮವಾಗಿರದೆ ಸುಮಾರು 45° ಕೋನದಲ್ಲಿದ್ದವು. ದೂರದರ್ಶಕ ಚಲಿಸುತ್ತಿರಲಿಲ್ಲ. ಆದ್ದರಿಂದ ಸೂರ್ಯಬಿಂಬ ಪರದೆಯ ಮೇಲೆ ನಿಧಾನವಾಗಿ ಸರಿಯುತ್ತಿತ್ತು. ಹೀಗೆ ಸರಿಯುತ್ತಿರುವಾಗ ಒಂದೊಂದು ಮಚ್ಚೆಯೂ ಆಧಾರ ಬಿಂದುವನ್ನು ದಾಟುವ ಕಾಲವನ್ನು ಗುರುತಿಸಿಕೊಳ್ಳಬಹುದಾಗಿತ್ತು. ಅದರ ಜೊತೆಗೆ ಬಿಂಬದ ಮೇಲೆ ಮಚ್ಚೆಯ ಸ್ಥಾನವನ್ನು ಸಹ ಗುರುತಿಸಿಕೊಳ್ಳಬಹುದಾಗಿತ್ತು.

ಹೀಗೆ 1861ರವರೆಗೆ ಸುಮಾರು 5300 ವೀಕ್ಷಣೆಗಳನ್ನು ದಾಖಲು ಮಾಡಿಕೊಂಡು ಅಭ್ಯಸಿಸಿದಾಗ ಅನೇಕ ಹೊಸ ವಿಷಯಗಳು ಬೆಳಕಿಗೆ ಬಂದವು. ಸೂರ್ಯಬಿಂಬದ ಮಧ್ಯರೇಖೆಗೆ ದೂರದಲ್ಲಿರುವ ಮಚ್ಚೆಗಳು ನಿಧಾನವಾಗಿ ಸುತ್ತುತ್ತವೆ ಎಂದಾತ ಗಮನಿಸಿದ. ಮಧ್ಯರೇಖೆಯ ಮೇಲಿನ ಮಚ್ಚೆ 25½ ದಿನಗಳಲ್ಲಿ ಅಕ್ಷದ ಮೇಲೆ ಸುತ್ತಿ ಬಂದರೆ ದೂರದಲ್ಲಿರುವ ಮಚ್ಚೆ 27½ ದಿನಗಳನ್ನು ತೆಗೆದುಕೊಳ್ಳುತ್ತಿತ್ತು. ಸೂರ್ಯ ಘನಕಾಯವಾಗಿದ್ದರೆ ಈ ವ್ಯತ್ಯಾಸ ಕಂಡುಬರುತ್ತಿರಲಿಲ್ಲ. ಆದ್ದರಿಂದ ಸೂರ್ಯ ಎಂಬುದು ಅನಿಲದ ಒಂದು ಗೋಳ ಎಂದಾತ ಪ್ರತಿಪಾದಿಸಿದ.

ಸೂರ್ಯನ ಮೇಲ್ಮೈ ಚಟುವಟಿಕೆಗಳನ್ನು ಅಭ್ಯಸಿಸಿ ಸೌರಜ್ವಾಲೆಯನ್ನು ದಾಖಲು ಮಾಡಿದವರಲ್ಲಿಯೂ ರಿಚರ್ಡ್ ಮೊದಲಿಗ. 1859 ಸೆಪ್ಟೆಂಬರ್ ಒಂದರಂದು ಸೌರಮಚ್ಚೆಗಳ ನಡುವೆ ಇದ್ದಕ್ಕಿದ್ದ ಹಾಗೆ ಬೆಳಕಿನ ಜ್ವಾಲೆ ಎದ್ದು ಸುಮಾರು ಐದು ನಿಮಿಷಗಳ ನಂತರ ಅಡಗಿದ್ದನ್ನು ಈತ ವರದಿ ಮಾಡಿದ. ಅನಂತರ ಭೂಮಿಯ ಕಾಂತಶಕ್ತಿಯಲ್ಲಿ ಏರಿಳಿತವಾಗಿ ಧ್ರುವ ಪ್ರಭೆಗಳು (ಅರೋರಾ) ಹೆಚ್ಚಾಗಿ ಕಂಡು ಬಂದವು. ಹೀಗೆ ಸೌರ ಚಟುವಟಿಕೆಯೊಂದರ ನೇರ ಪರಿಣಾಮವನ್ನು ಭೂಮಿಯ ಮೇಲೆ ವಿಶ್ಲೇಷಿಸಲು ಸಾಧ್ಯವಾಯಿತು.

1858ರಲ್ಲಿ ರಿಚರ್ಡ್‌ನ ತಂದೆಯ ಮರಣದ ನಂತರ ಮದ್ಯದ ಕಾರಖಾನೆಯ ಉಸ್ತುವಾರಿ ಈತನ ಮೇಲೆಯೇ ಬಿದ್ದಿತು. ತತ್‌ಪರಿಣಾಮವಾಗಿ ಸಮಯ ಸಾಲದೇ 1861ರಲ್ಲಿ ವೀಕ್ಷಣೆಗಳನ್ನು ಪೂರ್ಣವಾಗಿ ನಿಲ್ಲಿಸಬೇಕಾಯಿತು. 1865ರಲ್ಲಿ ತೀವ್ರವಾದ ಕಾಯಿಲೆಯೊಂದಕ್ಕೆ ತುತ್ತಾದಾಗ ಕಾರಖಾನೆಯನ್ನು ಮಾರಬೇಕಾಗಿ ಬಂತು. ಆ ಕಾಯಿಲೆಯಿಂದ ನಿಶ್ಶಕ್ತನಾದ ಆತನಿಗೆ ಮೊದಲಿನ ಚಟುವಟಿಕೆಯನ್ನು ಮರಳಿ ಪಡೆದುಕೊಳ್ಳುವುದು ಸಾಧ್ಯವಾಗಲೇ ಇಲ್ಲ.

ಈ ತರುವಾಯ ರಿಚರ್ಡ್ ಮತ್ತು ಆತನ ಪತ್ನಿ ರೋಸಾ ಲಂಡನ್ನಿನಿಂದ ಮೂವತ್ತು ಮೈಲಿ ದೂರದ ಚರ್ಟ್ ಎಂಬ ಹಳ್ಳಿಗೆ ತೆರಳಿದರು. ಅಲ್ಲಿ 19 ಎಕರೆ ಜಮೀನನ್ನು ಖರೀದಿಸಿದರು. ಅದರಲ್ಲಿ ಮೂರು ಚಪ್ಪಟೆಯಾದ ಶಿಖರಗಳ ಕೂಟವೊಂದು ಸೇರಿತ್ತು. ದೆವ್ವದ ನೆಗೆತ (Devil's Jump) ಎಂದು ಅದರ ಹೆಸರು. ಈ

ಶಿಖರಗಳಲ್ಲಿ ಒಂದರ ಮೇಲೆ ಈತ ಮತ್ತೆ ತನ್ನ ವೀಕ್ಷಣಾಲಯವನ್ನು ಸ್ಥಾಪಿಸಿದ. ವೀಕ್ಷಣೆಗಳನ್ನು ನಿಧಾನಗತಿಯಲ್ಲಿ ಮುಂದುವರೆಸಿದ.

1875ರ ನವೆಂಬರ್ 17 ರಿಚರ್ಡ್‌ನ ಜೀವನದಲ್ಲಿಯ ಒಂದು ದುರ್ದಿನ. ಅಂದು ರೋಸಾ ತನ್ನ ಹಾಸಿಗೆಯಲ್ಲೇ ಸತ್ತು ಬಿದ್ದಿದ್ದಳು. ಆತ್ಮಹತ್ಯೆ ಎಂದು ಅನುಮಾನಿಸುವಂತಿತ್ತು. ನಾಲ್ಕು ದಿನಗಳ ನಂತರ ಈ ಸಾವಿನ ವಿಚಾರಣೆ ನಡೆಯಿತು. ಸಾಕ್ಷಿಗಳೆಲ್ಲರೂ ಆಕೆ ಅನೇಕ ದಿನಗಳಿಂದ ಅಸ್ವಸ್ಥಳಾಗಿದ್ದುದನ್ನು ಒಪ್ಪಿದರು. ಅಲ್ಲದೆ ಉಪಶಮನಕ್ಕಾಗಿ ಆಕೆ ನಿತ್ಯವೂ ಕ್ಲೋರಲ್ ಹೈಡ್ರೇಟನ್ನು ಸೇವಿಸುತ್ತಿದ್ದುದನ್ನು ಖಚಿತಪಡಿಸಿದರು.

ಈ ದಿನಗಳಲ್ಲಿ ಕ್ಲೋರಲ್ ಹೈಡ್ರೇಟ್ ಹೊಸದಾಗಿ ಬಂದಿದ್ದ ಔಷಧ. ಇದು ಸ್ವಾಭಾವಿಕವಾದ ನಿದ್ರೆಯನ್ನೇ ಉಂಟುಮಾಡುತ್ತಿತ್ತಾದರೂ ರೋಗಿಗೆ ಚಟವಾಗಿ ಅಂಟಿಕೊಂಡು ಬಿಡುತ್ತಿತ್ತು. ಹೆಚ್ಚಾಗಿ ತೆಗೆದುಕೊಂಡಲ್ಲಿ ಉಸಿರಾಟದ ತೊಂದರೆ ಮತ್ತು ಹೃದಯ ಬಡಿತದಲ್ಲಿ ಏರಿಳಿತ ಕಾಣಿಸಿಕೊಳ್ಳುತ್ತಿದ್ದವು.

ವೈದ್ಯಕೀಯ ವರದಿಗಳು ಆಕೆ ಉಸಿರು ಕಟ್ಟಿ ಸತ್ತಳೆಂದು ತಿಳಿಸಿದವು. ಆದರೆ ಹೇಗೆ ಉಸಿರು ಕಟ್ಟಿರಬಹುದೆಂದು ತಿಳಿಯಲಾಗಲಿಲ್ಲ. ಈ ಸಾವಿನ ವಿಚಾರಣೆ ನಡೆಸಿದ ಜ್ಯೂರಿಯು ಹೆಂಡತಿಯನ್ನು ಸರಿಯಾಗಿ ನೋಡಿಕೊಳ್ಳದೇ ಇದ್ದುದಕ್ಕಾಗಿ ರಿಚರ್ಡ್‌ನನ್ನು ದೂರಿದನಲ್ಲದೆ ಬೇರೆ ಯಾವ ಶಿಕ್ಷೆಯನ್ನು ಕೊಡಲಿಲ್ಲ.

ವಿಚಾರಣೆಯಿಂದ ಹಿಂದಿರುಗಿದ ರಿಚರ್ಡ್ ಮನೆಯಲ್ಲಿದ್ದ ಎಲ್ಲಾ ನೌಕರರನ್ನು ವಜಾ ಮಾಡಿ ಕಳಿಸಿಬಿಟ್ಟ. ಆಮೇಲೆ ಒಂದು ವಾರ ಯಾರೂ ಅತನನ್ನು ನೋಡಲೇ ಇಲ್ಲ. ನವೆಂಬರ್ 27 ರಂದು ನೆರೆಮನೆಯವರು ಆತನನ್ನು ಮನೆಯೊಳಗೆ ಪ್ರವೇಶಿಸುತ್ತಿದ್ದಾಗ ಕಂಡರು. ಆಮೇಲೆ ಆತನ ದರ್ಶನವೇ ಇಲ್ಲ.

ಈ ವೈಚಿತ್ರ್ಯಗಳನ್ನು ಗಮನಿಸಿದ್ದ ನೆರೆಯವರು ಆತನ ನಾಪತ್ತೆಯ ಬಗ್ಗೆ ಪೊಲೀಸರಿಗೆ ದೂರು ಕೊಟ್ಟರು. ಇನ್ಸ್‌ಪೆಕ್ಟರ್ ಹಬರ್ಡ್ ಬಾಗಿಲೊಡೆದು ಒಳಹೊಕ್ಕರು. ಇಡೀ ಮನೆಯನ್ನು ಶೋಧಿಸಿ ನಿರಾಶರಾಗಿ ವಾಪಸಾಗುತ್ತಿದ್ದಾಗಲೇ ನೌಕರನ ಕೋಣೆಯೊಂದು ಕಂಡಿತು. ಒಳಗಿನಿಂದ ಬಾಗಿಲನ್ನು ಭದ್ರಪಡಿಸಲಾಗಿತ್ತು. ಒಡೆದು ನೋಡಿದಾಗ ಒಳಗೆ ರಿಚರ್ಡ್ ಸತ್ತು ಬಿದ್ದುದು ಕಂಡು ಬಂದಿತು. ಮಂಚಕ್ಕೂ ಚಿಮಣಿಗೂ ನಡುವೆ ನೆಲದ ಮೇಲೆ ಹಾಸಿಗೆ ಹಾಸಿಕೊಂಡು ಆತ ಅದರ ಮೇಲೆ ಬಿದ್ದುಕೊಂಡಿದ್ದನಲ್ಲದೆ ತಲೆಗೆ ಬಟ್ಟೆಯನ್ನೂ ಕಟ್ಟಿಕೊಂಡಿದ್ದನು.

ಪಕ್ಕದ ಊರಾದ ಫಾರ್ನ್ ಹ್ಯಾಂ ನಿಂದ ತಕ್ಷಣ ಸರ್ಜನ್ನರನ್ನು ಕರೆಯಿಸಲಾಯಿತು. ರಿಚರ್ಡ್‌ನ ಚೀಲದಲ್ಲಿ ಖಾಲಿಯಾಗಿದ್ದ ಕ್ಲೋರಲ್ ಹೈಡ್ರೇಟ್ ಬಾಟಲೊಂದು ಸಿಕ್ಕಿತು. ಊಟದ ಮನೆಯಲ್ಲಿ ಇನ್ನೂ ನಾಲ್ಕು ಖಾಲಿ ಬಾಟಲಿಗಳು ದೊರೆತವು. ಆದರೆ ಸರ್ಜನ್ನರ ವರದಿಯಂತೆ ರಿಚರ್ಡ್ ಕ್ಲೋರಲ್ ಹೈಡ್ರೇಟನ್ನು ಸೇವಿಸಿರಲಿಲ್ಲ. ಇದ್ದಕ್ಕಿದ್ದಂತೆ ಪಾರ್ಶ್ವವಾಯುವಿನ ಬಡಿತಕ್ಕೆ ಆತ ತುತ್ತಾಗಿರಬೇಕೆಂದು ಅವರ ಹೇಳಿಕೆಯಾಗಿತ್ತು. ತಲೆನೋವಿನ ಉಪಶಮನಕ್ಕಾಗಿ ಆತ ಟೀ ಎಲೆಗಳ ಪೋಲ್ಟೀಸನ್ನು ತಲೆಯ ಸುತ್ತ ಕಟ್ಟಿಕೊಂಡಿದ್ದನು. ಆದ್ದರಿಂದ ಆತನದು 'ಸ್ವಾಭಾವಿಕ ಸಾವು' ಎಂದೇ ತೀರ್ಮಾನಿಸಲಾಯಿತು.

ಆದರೆ ರೋಸಾಳ ಸಾವಿನ ಕಾರಣ ನಿಗೂಢವಾಗಿಯೇ ಉಳಿಯಿತು. ಆಕೆಯ ಸಂಕಟ ನೋಡಲಾರದೆ ರಿಚರ್ಡ್ ಸ್ವತಃ ಕ್ಲೋರಲ್ ಹೈಡ್ರೇಟ್ ಅನ್ನು ಮಾರಕವಾಗುವಷ್ಟು ಹೆಚ್ಚಾಗಿ ಕೊಟ್ಟುಬಿಟ್ಟನೇ? ಅಥವಾ ಈ ಬಗ್ಗೆ ಬೆಳಕು ಚೆಲ್ಲುವ ಬೇರೆ ಯಾವುದಾದರೂ ಸಾಕ್ಷಿಯನ್ನು ಉದ್ದೇಶ ಪೂರ್ವಕವಾಗಿಯೇ ಮುಚ್ಚಿಡಲಾಯಿತೇ? ನವೆಂಬರ್ 17 ರಂದು ವಾಸ್ತವವಾಗಿ ಏನು ನಡೆಯಿತು? ಈ ಪ್ರಶ್ನೆಗಳಿಗೆ ಉತ್ತರ ದೊರಕಲೇ ಇಲ್ಲ. ●

('ಅಸ್ಟ್ರಾನಮಿ' ಯಿಂದ)

ನಿಮ್ಮ ಇಚ್ಛೆಯ ಒಂದು ಭಾಗ ನಿಮಗೆ ತಿಳಿದಿದೆಯೆಂದಾದರೆ, ಅದನ್ನು ಪಡೆಯುವುದಕ್ಕೋಸ್ಕರ ನೀವೇನನ್ನು ತ್ಯಾಗ ಮಾಡಬೇಕೆಂಬುದು ತಿಳಿದಂತೆ.

● ದ. ಆಫ್ರಿಕಾದ ಒಂದು ಅಂಗಡಿಯಲ್ಲಿರುವ ಬರಹ

ಸತ್ಯ ಘಟನೆ

# ರಕ್ಷಕನಾರು? ಕೊಲೆಗಡುಕನಾರು?

— ಮೂರ್ತಿ ರಾಮನಾಥಪುರ —

ರಾತ್ರಿ ಒಂಭತ್ತು ಗಂಟೆಯಾಗುವುದರಲ್ಲಿತ್ತು. ಅಷ್ಟರಲ್ಲಿ ಟೆಲಿಫೋನ್ ಟ್ರಿಣ್ ಟ್ರಿಣ್ ಶಬ್ದ ಮಾಡಿತು.

"ಡಾಕ್ಟರ್ ಬಾನ್‌ಪಿಕ್" ಫೋನ್ ಎತ್ತಿ ಕೊಂಡರು.

"ನಾನು ಡಾಕ್ಟರ್ ಹೇಡನ್ ಮಾತಾಡ್ತಾ ಇದೀನಿ ಗ್ಲಾನ್ಸ್ ಫಾಲ್ಸ್ ಆಸ್ಪತ್ರೆಯಿಂದ. ಈಗಿನ್ನೂ ಒಬ್ಬ ಹುಡುಗನನ್ನು ಇಲ್ಲಿಗೆ ಕರ್‍ಕೊಂಡ್ ಬಂದಿದ್ದಾರೆ. ಅವನ ತಲೆಗೆ ಗುಂಡು ಹೊಕ್ಕಿದೆ. ತಕ್ಷಣ ಆಪರೇಷನ್ ಮಾಡ ಬೇಕು. ರಕ್ತ ಸಾಕಷ್ಟು ಹೊರಟು ಹೋಗಿದೆ. ಅಲ್ಲದೆ ನಾಡಿಯೂ ಬಹಳ ನಿಧಾನವಾಗಿ ಬಡೀ ತಿದೆ."

"ನಾನು 60 ಮೈಲಿ ದೂರದಲ್ಲಿದ್ದೇನೆ. ನೀವು ಡಾಕ್ಟರ್ ಮರ್ಸರ್‌ರನ್ನು ಕರೆಸಲಿಲ್ವೇನು?" ಎಂದರು ಬಾನ್‌ಪಿಕ್.

ಅವರು ಊರಿನಲ್ಲಿಲ್ಲ. ಹುಡುಗನನ್ನು ನಿಮ್ಮ ಊರಿಂದಲೇ ಕರ್‍ಕೊಂಡ್ ಬಂದಿರೋದು. ಅಲ್ಲಿಗೆ ಅವನು ತನ್ನ ನೆಂಟರ ಮನೆಗೆ ಹೋಗಿದ್ದ. ಬಂದೂಕಿನ ಜತೆ ಆಟ ಆಡ್ತಾ ಇರಬೇಕಾದ್ರೆ ಗುಂಡು ಹಾರ್‍ತು ಎಂದರು. ಡಾ|| ಹೇಡನ್ "ನಾನು ಆದಷ್ಟು ಬೇಗ ಅಲ್ಲಿಗೆ ಬರೋದಿಕ್ಕೆ ಪ್ರಯತ್ನಿಸ್ತೇನೆ. ವಿಪರೀತ ಹಿಮ ಬೀಳ್ತಾ ಇದೆ. ಆದರೂ ಅರ್ಧ ರಾತ್ರಿಗೆ ಮುಂಚೇನೆ ಅಲ್ಲಿ ಬಂದು ಸೇರ್‍ತೆನೆ ಅಂದ್ಕೊಂಡಿ ದೀನಿ."

"ಹುಡುಗನ ತಾಯಿ ತಂದೆಗಳು ಬಡವರಾದ್ದ ರಿಂದ ಅವರು ಆಪರೇಷನ್‌ಗೆ ಹಣ ಕೊಡೋ ಭರವಸೆ ಇಲ್ಲಾಂತ ಅನ್ನಸ್ತೆ."

"ಹಣದ ವಿಚಾರವೇನೂ ಪರವಾಯಿಲ್ಲ."

ಡಾ|| ಬಾನ್‌ಪಿಕ್ ತಮ್ಮ ಕಾರಿನಲ್ಲಿ ಅಲಬಾನಿ ನಗರದಿಂದ ಹೊರಟು ಹೊರ ಬಂದರಾದರೂ ಒಂದು ಸ್ಥಳದಲ್ಲಿ ಕೆಂಪು ದೀಪ ಕಂಡು ಕಾರು ನಿಲ್ಲಿಸಿದರು. ಕೂಡಲೇ ಮುಂದೆ ಬಂದ ವ್ಯಕ್ತಿ ಯೊಬ್ಬ ಕಾರ್ ಬಾಗಿಲು ತೆಗೆದು ಅವರಲ್ಲಿ ಕುಳಿತ.

"ನೇರವಾಗಿ ಹೋಗು. ನೋಡು ಮತ್ತೇ ನಾದ್ರೂ ತರಲೆಗಿರಲೆ ಮಾಡಿದ್ಯೋ ನನ್ನ ಹತ್ರ ಪಿಸ್ತೂಲ್ ಇದೆ" ಎಂದ ಆ ವ್ಯಕ್ತಿ.



"ನಾನು ಡಾಕ್ಟರ್ ಬಹಳ ಅರ್ಜೆಂಟಾಗಿ..." ಎಂದು ಡಾ|| ಹೇಳುತ್ತಿದ್ದಂತೆಯೇ "ಯಾವ ಅರ್ಜೆಂಟೂ ಇಲ್ಲ, ಬಾಯಿ ಮುಚ್ಕೊಂಡಿರು. ಸುಮ್ಮನೆ ನೇರವಾಗಿ ಹೋಗು."

ಸಾಕಷ್ಟು ಮುಂದೆ ಹೋದಮೇಲೆ ಆತ ಕಾರು ನಿಲ್ಲಿಸಿದವನೇ ಡಾಕ್ಟರರಿಗೆ ಇಳಿಯಲು ಹೇಳಿದ. ಡಾಕ್ಟರ್ ಕಾರಿನಿಂದ ಇಳಿಯುತ್ತಲೆ ಆತ ಕಾರ ತೆಗೆದುಕೊಂಡು ಹೊರಟು ಹೋದ.

ಡಾ|| ಬಾನ್‌ಪಿಕ್ ಫೋನ್ ಮಾಡಿ ನಗರದಿಂದ ಟ್ಯಾಕ್ಸಿ ತರಿಸಿಕೊಳ್ಳಲು ಇಚ್ಛಿಸಿದರು. ಇದರಲ್ಲಿ ಅರ್ಧ ಗಂಟೆ ಕಳೆಯಿತು. ಅವರು ಸ್ಟೇಶನ್ ತಲುಪಿದಾಗ ಗಾಡಿ ಹೊರಟು ಹೋಗಿತ್ತು. ಮುಂದಿನ ಗಾಡಿ ರಾತ್ರಿ 12-15ಕ್ಕೆ ಬರುವುದಿತ್ತು.

ಕೊನೆಗೆ ಅವರು ಆಸ್ಪತ್ರೆ ತಲುಪಿದಾಗ ಎರಡು ಗಂಟೆ ಬಾರಿಸಿತ್ತು. ಡಾ|| ಹೇಡನ್ ಅವರಿಗಾಗಿ ಕಾಯುತ್ತಿದ್ದರು.

"ನಾನು ಬಹಳ ಪ್ರಯತ್ನಪಟ್ಟೆ. ಆದರೆ ನನ್ನ ಕಾರು..." ಎಂದು ಡಾಕ್ಟರ್ ಬಾನಪಿಕ್ ಹೇಳಿದರು. "ತಾವು ಬಂದಿರೋದಿಕ್ಕೆ ತುಂಬಾ ಥ್ಯಾಂಕ್ಸ್. ಆದರೆ ದುಃಖದ ವಿಷಯಾಂದ್ರೆ ಹುಡುಗ ಒಂದು ಗಂಟೆ ಮೊದಲು ಸತ್ತು ಹೋದ" ಡಾ|| ಹೇಡನ್ ಉತ್ತರಿಸಿದರು.

"ಅಯ್ಯೋ, ನಾನು ಒಂದು ಗಂಟೆ ಮೊದಲು ಇಲ್ಲಿಗೆ ಬಂದು ಸೇರಿದ್ದರೆ..." ಎನ್ನುತ್ತಾ ಡಾಕ್ಟರ್ ಪಿಕ್ ರಸ್ತೆಯಲ್ಲಾದ ಘಟನೆಯ ಬಗ್ಗೆ ತಿಳಿಸಿದರು.

ಇಬ್ಬರೂ ವೇಟಿಂಗ್ ರೂಂನ ಬಳಿಯಿಂದ ಹೋಗುತ್ತಿದ್ದಾಗ ಡಾ|| ಪಿಕ್ ಇದ್ದಕ್ಕಿದ್ದಂತೆ ನಿಂತು ಬಿಟ್ಟರು. ಇವರ ಕಾರನ್ನು ಕಿತ್ತುಕೊಂಡ ವ್ಯಕ್ತಿಯೇ ಅಲ್ಲೊಂದು ಬೆಂಚಿನ ಮೇಲೆ ಎರಡೂ ಕೈಗಳನ್ನು ತಲೆಯ ಮೇಲೆ ಹೊತ್ತು ಯೋಚನಾಮಗ್ನನಾಗಿ ಕುಳಿತಿದ್ದ.

ಅವನಿಗೆ ಡಾ|| ಹೇಡನ್ ಹೇಳಿದರು. "ಮಿಸ್ಟರ್ ಕನ್ನಿಂಘಾಮ್ ಇವರೇ ಡಾ|| ಬಾನ್‌ಪಿಕ್ ಇವರು ಅಲಬಾನಿಯಿಂದ ಬಂದು ನಿಮ್ಮ ಮಗನ ಜೀವ ಉಳಿಸುವವರಿದ್ದರು.

ಆದರೆ ಬಹಳ ತಡವಾಗಿ ಬಂದರು. ಅವರ ಕಾರನ್ನು ಯಾರೋ ದಾರಿಯಲ್ಲಿ ಬಲವಂತವಾಗಿ ಕಿತ್ಕೊಂಡ್ ಬಿಟ್ಟರಂತೆ!" ●

## ಗ್ರಾಮೀಣ ಜನತೆಗೊಂದು ಆಶಾಕಿರಣ

# ಡಾ. ಪರಮೇಶ್ವರರಾವ್:

● ಸಂಜೀವ ಪ್ಯಾಟಿ ●

ಒಬ್ಬ ತರುಣ ಅಮೆರಿಕದಲ್ಲಿ ಪಿ.ಎಚ್.ಡಿ. ಪದವಿ ಪಡೆದು ಭಾರತಕ್ಕೆ ಹಿಂದಿರುಗುತ್ತಾನೆ. ಅವನಿಗೆ ಹಳ್ಳಿಗರ ಸೇವೆ ಮಾಡಿ ಅವರ ಜೀವನ ಮಟ್ಟ ಸುಧಾರಿಸಬೇಕೆಂಬ ಹಂಬಲ. ಅದಕ್ಕಾಗಿ ಕೈತುಂಬ ಸಂಬಳ ತರುವ ನೌಕರಿಗಳನ್ನು ಧಿಕ್ಕರಿಸಿ. ದರ್ಪದ ಸ್ವಭಾವದ ತಂದೆಯನ್ನು ಅತಿ ಕಷ್ಟದಿಂದ ಒಪ್ಪಿಸಿ ತನ್ನ ಹಳ್ಳಿಗೆ ತೆರಳುತ್ತಾನೆ. ಅನೇಕ ತೊಂದರೆಗಳನ್ನೆದುರಿಸಿ, ಜನತೆಯ ಅಪಹಾಸ್ಯಗಳನ್ನು ಲೆಕ್ಕಿಸದೆ ಕಾರ್ಯನಿರತನಾಗುತ್ತಾನೆ. ಯಶಸ್ಸನ್ನೂ ಕಾಣುತ್ತಾನೆ. ಅವನಿಗೆ ಪ್ರಶಸ್ತಿ-ಪುರಸ್ಕಾರ, ಪ್ರಚಾರಗಳು ಬೇಕಿಲ್ಲ...

ಚಲಚಿತ್ರದ ಕಥೆಯಂತೆ ತೋರುತ್ತದಲ್ಲವೆ? ಆದರೆ ಇದು ನಿಜ ಡಾ|| ಬಿ.ವಿ. ಪರಮೇಶ್ವರರಾವ್ ಸಾಧಿಸ ಹೊರಟಿದ್ದು, ಸಾಧಿಸಿದ್ದು ಇದನ್ನೇ.

1967ರಲ್ಲಿ ಅಣುರಸಾಯನ ಶಾಸ್ತ್ರದ ಮೇಲಿನ ತಮ್ಮ ಪ್ರಬಂಧಕ್ಕೆ ಅಮೆರಿಕದ ಪೆನಿಸಿಲ್ವೇನಿಯಾ ಸ್ಟೇಟ್ ಯೂನಿವರ್ಸಿಟಿಯಿಂದ ಡಾಕ್ಟರೇಟ್ ಪಡೆದ ಪರಮೇಶ್ವರರಿಗೆ, ಅಲ್ಲಿಯೇ ಕೆಲಸಕ್ಕೆ ಸೇರುವಂತೆ ಆಹ್ವಾನ. ಅಮೆರಿಕದ ಒಂದೆರಡು ಕಂಪನಿಗಳೂ ಕೈತುಂಬ ಸಂಬಳ ಕೊಡುವುದಾಗಿ ಹೇಳಿ ಅವರನ್ನು ಆಕರ್ಷಿಸಲೆತ್ನಿಸಿದವು. ಎರಡೂವರೆ ವರ್ಷಗಳ ಹಿಂದೆ ಅಮೆರಿಕಕ್ಕೆ ತೆರಳುವಾಗ ಬಿಟ್ಟು ಹೋಗಿದ್ದ ಮುಂಬೈನ ಭಾಭಾ ಪರಮಾಣು ಸಂಶೋಧನಾ ಕೇಂದ್ರದಲ್ಲಿನ ದೊಡ್ಡ ಹುದ್ದೆ ಅವರ ದಾರಿ ಕಾಯುತ್ತಿತ್ತು. ಆದರೆ ಡಾ|| ಪರಮೇಶ್ವರರಿಗೆ ಇವೆಲ್ಲ ಬೇಕಾಗಿರಲಿಲ್ಲ. ಚಿಕ್ಕವರಿರುವಾಗಲೇ ಅವರ ಸ್ವಂತ ಗ್ರಾಮವಾದ ಡಿಮ್ಲಿ (ಆಂಧ್ರದ ಕರಾವಳಿ ಭಾಗದಲ್ಲಿದೆ) ಅವರನ್ನು ಆಕರ್ಷಿತ್ತು. ಅಲ್ಲಿಗೆ ಹೋಗಲು ಅವರ ಮನ ಹಾತೊರೆಯುತ್ತಿತ್ತು.

ಹಾಗೆ ನೋಡಿದರೆ ಅವರಿಗೆ ಹೆಚ್ಚಿನ ವ್ಯಾಸಂಗ ಮಾಡುವ ಇಚ್ಛೆಯೂ ಇರಲಿಲ್ಲ. ಆದರೆ ಬಿಗುಪಿನ ಸ್ವಭಾವದ ತಂದೆಯೆದುರು ಅದನ್ನು ಹೇಳುವ ಧೈರ್ಯವಿರಲಿಲ್ಲ. ಹೀಗಾಗಿ ಅವರು ಹೇಳಿದ ಪ್ರಕಾರ ಕಾಲೇಜಿಗೆ ಹೋದರು. ನಂತರ ಭಾಭಾ ಕೇಂದ್ರದಲ್ಲಿ ನೌಕರಿಗೆ ಅರ್ಜಿ ಮಾಡಿದರು. ಅಲ್ಲಿ ತಮ್ಮನ್ನು ತಿರಸ್ಕರಿಸಿದರೆ ತಾವು ನೌಕರಿ ಮಾಡಲು ಯೋಗ್ಯನಲ್ಲವೆಂದು ತಂದೆಗೆ ಹೇಳಿ ಹಳ್ಳಿಗೆ ತೆರಳುವ ಯೋಜನೆ ಪರಮೇಶ್ವರರದು!

ಅನಂತರ ಅವರು ತಾವು ಅಮೆರಿಕಕ್ಕೆ ಹೊರಡುವ ವಿಚಾರ ತಿಳಿಸಿದಾಗ ತಂದೆಗಾದ ಸಂತೋಷ ಹೇಳತೀರದು. ಅಮೆರಿಕಕ್ಕೆ ವಿಮಾನಯಾನದ ಟಿಕೆಟ್ ಕಳಿಸುವ ಮೂಲಕ ಮಗನ ಪತ್ರಕ್ಕೆ ಉತ್ತರಿಸಿದರು.

ಡಾ|| ಪರಮೇಶ್ವರರಾವ್ ಅಲ್ಲಿದ್ದುದು ಎರಡೂವರೆ ವರ್ಷ ಮಾತ್ರ. ಆದರೆ ಅವರು ಡಾಕ್ಟ

ರೇಟ್ ಪಡೆದು ತಿರುಗಿ ಬರುವಾಗ ಅವರ ಪ್ರೊಫೆಸರರಿಗೆ ದುಃಖ ತಡೆದು ಕೊಳ್ಳುವುದಾಗಲಿಲ್ಲ. ಪರಮೇಶ್ವರರ ಪ್ರಬಂಧದ ಬಗ್ಗೆ "ನಾನು ನನ್ನ 32 ವರ್ಷ ವಯಸ್ಸಿನ ನೌಕರಿಯಲ್ಲೆ ಇಂಥ ಅದ್ಭುತ ವಿಚಾರಧಾರೆಯನ್ನು ಕಂಡಿಲ್ಲ" ಎಂದು ಹೇಳಿ ಪ್ರೊಫೆಸರರು ಬಿಕ್ಕಿ ಬಿಕ್ಕಿ ಅತ್ತರಂತೆ. ಕೊನೆಗೆ ಬೀಳ್ಕೊಡುವಾಗ "ಮುಂದಿನ ಎರಡು ವರ್ಷಗಳವರೆಗೆ ಇಲ್ಲಿನ ಹುದ್ದೆಯನ್ನು ನಿನಗೆಂದು ಕಾದಿಟ್ಟಿರುತ್ತೇವೆ. ನೀನೇನಾದರೂ ಮನಸ್ಸು ಬದಲಾಯಿಸಿದರೆ ತಕ್ಷಣ ಹೊರಟು ಬಾ, ಮರೆಯಬೇಡ" ಎಂದರು.

ಆದರೆ ತಿರುಗಿ ಭಾರತಕ್ಕೆ ಬಂದೊಡನೆ ಡಾ|| ರಾವ್ ಎಲ್ಲವನ್ನೂ ಮರೆತರು. ವಿಶಾಖ ಪಟ್ಟಣಕ್ಕೆ ಹಿಂದಿರುಗಿದೊಡನೆ ಕೊನೆಗೊಮ್ಮೆ ಧೈರ್ಯ ತಳೆದು, ಹಳ್ಳಿಗರ ಸೇವೆ ಸಲ್ಲಿಸುವ ತಮ್ಮ ಯೋಜನೆಯನ್ನು ತಂದೆ ತಾಯಿಗಳಿಗೆ ವಿವರಿಸಿದರು. ಈ ಬಾರಿ ಗೆಲುವು ಮಗನದಾಯಿತು.

ಸರಿ, ಒಪ್ಪಿಗೆ ದೊರೆತ ದಿನವಂದೇ ಪತ್ನಿಯೊಂದಿಗೆ ಐವತ್ತು ಕಿಲೋಮೀಟರ್ ದೂರದ ದಿಮ್ಮಿಗೆ ತೆರಳಿದರು. ಆಗ ಒಂದು ಕುಗ್ರಾಮವಾಗಿದ್ದ ದಿಮ್ಮಿ ಇಂದು ಸಾಕಷ್ಟು ಆಧುನಿಕ ಸೌಲಭ್ಯಗಳನ್ನು ಪಡೆದಿದೆ. ಒಂದು ಕಾಲಕ್ಕೆ ಬರಡು ಭೂಮಿಯೆಂದು ನಿರ್ಲಕ್ಷಿಸಲ್ಪಟ್ಟಿದ್ದು ಈಗ ಹಸಿರಿನಲ್ಲಿ ಕಂಗೊಳಿಸುತ್ತಿದೆ. ಎರಡು ಹೊತ್ತಿನ ಅನ್ನಕ್ಕೂ ಕಷ್ಟಪಡುತ್ತಿದ್ದ ಜನ ಹಣ ಉಳಿಸುವಷ್ಟು ಸ್ಥಿತಿವಂತರಾಗಿದ್ದಾರೆ. ಈ ಎಲ್ಲ ಅಭಿವೃದ್ಧಿಯ ನೇತಾರ ಡಾ|| ಪರಮೇಶ್ವರ ರಾವ್. ಇಷ್ಟೆ ಅಲ್ಲ, ಅವರ 'ಭಾಗವತುಲಾ ಚಾರಿಟಬಲ್ ಟ್ರಸ್ಟ್' ವಿಶಾಖಪಟ್ಟಣ ಜಿಲ್ಲೆಯ 50ಕ್ಕೂ ಹೆಚ್ಚು ಗ್ರಾಮಗಳ ಜನತೆಯ ಜೀವನಮಟ್ಟವನ್ನು ಸುಧಾರಿಸುವತ್ತ ದಾಪುಗಾಲನ್ನಿಡುತ್ತಿದೆ. ಬಡ ಜನತೆಗೆ ಹೊಸ ಆಸೆ ಮೂಡಿಸಿದೆ.

ಆದರೆ ಈ ಕಾರ್ಯ ಸುಲಭವಾಗಿತ್ತೇ? ಖಂಡಿತ ಇಲ್ಲ. ಡಾ|| ರಾವ್ ತಮ್ಮ ಹಳ್ಳಿಗೆ ಹೋದ ಮರುದಿನ ತಿರುಗಾಡಲು ಹೋದಾಗ ವಿದ್ಯಾರ್ಥಿಗಳ ಗುಂಪೊಂದು ಕಣ್ಣಿಗೆ ಬಿತ್ತು. ವಿಚಾರಿಸಿದಾಗ ಅವರ ಶಾಲೆ ಐದು ಮೈಲು ದೂರದ ಮುಂಚಿಲಿಯಲ್ಲಿದೆಯೆಂದು ತಿಳಿಯಿತು. ಅವರಿಂದ ತಾವು ಮಾಡಬೇಕಾದ ಮೊದಲ ಕೆಲಸವೆಂದರೆ ಹಳ್ಳಿಯಲ್ಲಿ ಒಂದು ಶಾಲೆ ತೆರೆಯುವುದು ಎಂದು ಡಾ|| ರಾವ್ ಅರಿತುಕೊಂಡರು. ಆದರೆ ಶಾಲೆ ತೆರೆಯಲು ಹಣ ಬೇಕಲ್ಲವೆ? ಅದಕ್ಕಾಗಿ ಮರುದಿನ ಹಳ್ಳಿಗರೊಂದಿಗೆ ಮಾತುಕತೆ ಆರಂಭಿಸಿದರು. ಆದರೆ ಮೊದ ಮೊದಲು ಅವರಾರೂ ಇದರಲ್ಲಿ ಆಸಕ್ತಿಯನ್ನೇ ತೋರಲಿಲ್ಲ. ಅಷ್ಟೇ ಅಲ್ಲ. ಈ ಅಪರಿಚಿತನ ಬಗ್ಗೆ ಅವರಲ್ಲಿ ಶಂಕೆಯೂ ಮೂಡಿತ್ತು. ಗ್ರಾಮದ ಮುಖ್ಯಸ್ಥನಂತೂ, "ನೀವು ನಮ್ಮಿಂದ ಹಣ ಸಂಗ್ರಹಿಸಿಕೊಂಡು ಅಮೆರಿಕಕ್ಕೆ ಓಡಿ ಹೋಗುವುದಿಲ್ಲವೆಂಬುದಕ್ಕೆ ಏನು ಭರವಸೆ" ಎಂದು ಕೇಳಿದನಂತೆ.

ಕೆಲ ದಿನಗಳಲ್ಲೇ 57,000 ರೂಪಾಯಿಗಳು ಸಂಗ್ರಹವಾದವು. ಅಮೆರಿಕದ ಶಾಂತಿಪಡೆ 19,000 ರೂಪಾಯಿಗಳನ್ನು ದೇಣಿಗೆಯಾಗಿ ನೀಡಿತು. ಇವೆಲ್ಲವರಿಂದ 1968ರ ಜೂನ್‌ನಲ್ಲಿ ಶಾಲಾ ಕಟ್ಟಡ ಸಿದ್ಧವಾಯಿತು. ಆದರೆ ಅಷ್ಟರಲ್ಲಿ ಏಕಾಏಕಿ ರಾಜ್ಯ ಸರಕಾರ ಖಾಸಗಿ ಶಾಲೆ ಆರಂಭಿಸಲು ಅನುಮತಿ ಕೊಡುವುದಿಲ್ಲವೆಂದು ಸಾರಿತು.

ಡಾ|| ರಾವ್ ಆಂಧ್ರದ ಆಗಿನ ಮುಖ್ಯಮಂತ್ರಿ ಕೆ. ಬ್ರಹ್ಮಾನಂದ ರೆಡ್ಡಿಯವರನ್ನು ಭೇಟಿಯಾಗಿ ಹೇಳಿಕೊಂಡರು. ಆದರೆ ಪ್ರಯೋಜನವಾಗಲಿಲ್ಲ. ಛಲ ಬಿಡದ ರಾವ್ ರಾಜ್ಯಪಾಲ ಖಂಡೂ ಭಾಯಿ ದೇಸಾಯಿಯವರ ಮನ ಒಲಿಸಲು ನಿರ್ಧರಿಸಿದರು. ಎಷ್ಟೋ ಬಾರಿ ಹೋದ ನಂತರ ಭೇಟಿಯಾದ ರಾಜ್ಯಪಾಲರ ಎ.ಡಿ.ಸಿ. ಗ್ರಾಮೀಣ ಶಾಲಾ ಮಾಸ್ತರನಾಗ ಬಯಸಿದ್ದ ಈ ವ್ಯಕ್ತಿಯ ಇಂಗ್ಲಿಷ್ ಜ್ಞಾನವನ್ನು ಕಂಡು ಅಚ್ಚರಿಪಟ್ಟು "ನೀವು ಪದವೀಧರರೆ?" ಎಂದು ಪ್ರಶ್ನಿಸಿದ. ಡಾ|| ರಾವ್ ಹಿಂಜರಿಯುತ್ತಲೇ ತಮ್ಮ ವಿದ್ಯಾಭ್ಯಾಸದ ಬಗ್ಗೆ ಹೇಳಿದಾಗ ತಕ್ಷಣ ಅವರನ್ನು ರಾಜ್ಯಪಾಲರ ಕೋಣೆಗೆ ಕರೆದೊಯ್ಯಲಾಯಿತು. ಒಪ್ಪಿಗೆ ದೊರೆಯಿತು. ಜೊತೆಗೆ ರಾಜ್ಯಪಾಲರೊಂದಿಗೆ ಸ್ನೇಹವೂ ಬೆಳೆಯಿತು. 1968ರ ಗಾಂಧಿ ಜಯಂತಿ ದಿನದಂದು ದಿಮ್ಮಿ ಹೈಸ್ಕೂಲಿನ ಉದ್ಘಾಟನೆ ನೆರವೇರಿತು. 1976ರಲ್ಲಿ ಈ ಶಾಲೆಯ ಜವಾಬ್ದಾರಿಯನ್ನು ಜಿಲ್ಲಾ ಪರಿಷತ್ ವಹಿಸಿಕೊಂಡಿತು.

ಈ ಶಾಲೆಯಲ್ಲಿ ಡಾ॥ ರಾವ್ ವಿದ್ಯಾರ್ಥಿಗಳಿಗೆ ಕೇವಲ ಪುಸ್ತಕದ ಪಾಠ ಹೇಳಲಿಲ್ಲ. ಅದರಿಂದ ಅವರ ವ್ಯಕ್ತಿತ್ವ ಸಂಪೂರ್ಣವಾಗಿ ವಿಕಾಸಗೊಳ್ಳುವುದಿಲ್ಲವೆಂಬುದರ ಅರಿವು ಅವರಿಗಿತ್ತು. ಆದ್ದರಿಂದ ಅವರಿಗೆ ಕೃಷಿ ತಂತ್ರಜ್ಞಾನದ ಬಗ್ಗೆಯೂ ತಿಳಿವಳಿಕೆ ನೀಡಿ. ಅವರು ತಮ್ಮ ಭೂಸಾಗುವಳಿ ಸಂಪ್ರದಾಯವನ್ನೇ ಮುಂದುವರಿಸಿಕೊಂಡು ಹೋಗುವಂತೆ ಮಾರ್ಗದರ್ಶನ ಮಾಡಿದರು.

ವಿತನ್ಮಧ್ಯೆ ಈ ಶಾಲಾ ಮಾಸ್ತರನ ದೃಷ್ಟಿ ಬೇರೆಡೆಗೆ ಹರಿದಿತ್ತು. ದಿವ್ಲಿಯಿಂದ 12 ಮೈಲು ದೂರದ ವಕಪಾಡು ಎಂಬಲ್ಲಿ ಒಂದು ಸಾವಿರ ಎಕರೆಗಿಂತ ಹೆಚ್ಚಿನ ಜವಳು ಪ್ರದೇಶವಿತ್ತು. ಬಂಗಾಲ ಕೊಲ್ಲಿಯಿಂದ ಬೀಸಿ ಬಂದ ಬಿರುಗಾಳಿ ಈ ಪ್ರದೇಶವನ್ನು ಹಾಳುಗೆಡವಿತ್ತು. ಅಲ್ಲಿಯ ಜನತೆಯ ಸ್ಥಿತಿ ಶೋಚನೀಯವಾಗಿತ್ತು. ಸಾಗರದ ಉಕ್ಕೇರಿದ ಅಲೆಗಳು ಅವರ ಉಪ್ಪಿನ ಮಡಿಗಳನ್ನು ನಾಶ ಮಾಡುವುದು ಸಾಮಾನ್ಯವಾಗಿತ್ತು.

ವೈಜ್ಞಾನಿಕ ಪದ್ಧತಿಯ ಮೂಲಕ ನಿಸರ್ಗದ ಈ ದಬ್ಬಾಳಿಕೆಯನ್ನು ತಡೆಯಬಹುದೆಂದು ಅವರಿಗನ್ನಿಸಿತು. ಆ ಸ್ಥಳದಲ್ಲಿ ಸರಕಾರದಿಂದ 380 ಎಕರೆ ಭೂಮಿಯನ್ನು ಗೇಣಿ ಪಡೆದು ಕಾರ್ಯ ಪ್ರವೃತ್ತರಾದರು. 1973ರಲ್ಲಿ ಅಲ್ಲಿ ಇವರ ಉಪ್ಪು ಉತ್ಪಾದನೆ ಆರಂಭವಾಯಿತು. ಪ್ರತಿದಿನ ಸೈಕಲ್ ತಳ್ಳಿಕೊಂಡು ವಕಪಾಡುವಿಗೆ ಹೋಗುತ್ತಿದ್ದ ಈ ವ್ಯಕ್ತಿಯನ್ನು ನೋಡಿ ಆರಂಭದಲ್ಲಿ ಜನ ಅಪಹಾಸ್ಯ ಮಾಡಿದರು. ಆದರೆ ಎಂಥ ಜವಳು ಭೂಮಿಯನ್ನೂ ಬಗ್ಗಿಸಲು ಸಾಧ್ಯವೆಂದು ಡಾ॥ ರಾವ್ ತೋರಿಸಿಕೊಟ್ಟಾಗ, ಅವರಲ್ಲಿ ಹೊಸ ಗೌರವ ಭಾವನೆ ಮೂಡಿತು. ಈಗ ಆಧುನಿಕ ತಂತ್ರಜ್ಞಾನದ ಮೂಲಕ ಅಲ್ಲಿನ ಜನತೆ ಉಪ್ಪು ಉತ್ಪಾದನೆಯನ್ನು ಒಂದು ದೊಡ್ಡ ಉದ್ದಿಮೆಯನ್ನಾಗಿ ಪರಿವರ್ತಿಸಿದ್ದಾರೆ.

ಡಾ॥ ಪರಮೇಶ್ವರರಿಗೆ ಸಮಾಜ ಸೇವೆಯ ಕಾಲಕ್ಕೆ ರಾಜಕಾರಣಿಗಳ ಕುತಂತ್ರದ ಕಟು ಅನುಭವವೂ ಆಗಿದೆ. 1973ರಲ್ಲಿ ಅವರು ಸುತ್ತಮುತ್ತಲಿನ ಹಳ್ಳಿಗರಿಗೆ ಸಹಕಾರಿ ಸಕ್ಕರೆ ಕಾರಖಾನೆಯೊಂದನ್ನು ಆರಂಭಿಸಲು ಪ್ರೋತ್ಸಾಹಿಸಿದರು. ಈ ಕಾರಖಾನೆ ಬರಗಾಲದ ಪೆಟ್ಟು ತಡೆದುಕೊಳ್ಳಬಲ್ಲ ಜಾತಿಯ ಕಬ್ಬಿನ ಮೂಲಕ ಸಕ್ಕರೆ ತಯಾರಿಸಬೇಕೆಂಬ ಯೋಜನೆ ಡಾ॥ ರಾವ್ ಅವರದು. ಆದರೆ ಇದರಿಂದ ತಮಗೆ ದೊರೆಯುವ ಅಗ್ಗ ದರದ ಕಚ್ಚಾ ವಸ್ತುವಿಗೆ ಖೋತಾ ಬೀಳುತ್ತದೆಂಬುದನ್ನು ಅರಿತ ಸ್ಥಳೀಯ ಸಕ್ಕರೆ ಕಾರಖಾನೆ ಮಾಲಿಕರು ಇದರ ವಿರುದ್ಧ ಗುಲ್ಲೆಬ್ಬಿಸಿದರು. ಅವರ ವಿರುದ್ಧ ಹೋರಾಡುವುದರಲ್ಲಿ ಅರ್ಥವಿಲ್ಲವೆಂದು ಕೊಂಡ ರಾವ್ ಯೋಜನೆಯನ್ನು ರದ್ದುಗೊಳಿಸಿ ಅದಕ್ಕಾಗಿ ಸಂಗ್ರಹಿಸಿದ್ದ ಹಣವನ್ನು ಕೊಟ್ಟವರ ಮನೆಬಾಗಿಲಿಗೆ ಹೋಗಿ ಹಿಂತಿರುಗಿಸಿದರು.

ಅವರ ಈ ಪ್ರಾಮಾಣಿಕತೆ ಜನರಯಲಿ ಅವರ ಬಗೆಗಿದ್ದ ಮೆಚ್ಚುಗೆ, ಗೌರವವನ್ನು ಇನ್ನಷ್ಟು ಹೆಚ್ಚಿಸಿತು. ಆದ್ದರಿಂದ 1974ರಲ್ಲಿ ಅವರು ದಿವ್ಲಿಲಾ ಸಹಕಾರಿ ರೈತ ಸೇವಾ ಕೇಂದ್ರವನ್ನು ಆರಂಭಿಸುವಾಗ ಬೆಂಬಲ ತಾನೇ ತಾನಾಗಿ ಹರಿದು ಬಂತು. ಈ ಕೇಂದ್ರ ರೈತರಿಗೆ ಕೃಷಿ ಸಾಲ ಅವಶ್ಯಕ ಉಪಕರಣಗಳನ್ನು ನೀಡುತ್ತದಲ್ಲದೆ, ಹಾಲು ಹೈನ, ಕೋಳಿ ಸಾಕಣೆ ಮುಂತಾದ ಉದ್ಯೋಗಗಳ ಮೂಲಕ ಹೆಚ್ಚಿನ ಆದಾಯವನ್ನು ಹೇಗೆ ಗಳಿಸಬೇಕೆಂಬುದರ ಬಗ್ಗೆ ಮಾರ್ಗದರ್ಶನ ನೀಡುತ್ತದೆ. ಈ ಕೇಂದ್ರ ಆರಂಭಿಸುವಾಗ ಸ್ವಲ್ಪ ಹಣದ ಕೊರತೆಯುಂಟಾಯಿತು. ಆಗ ಅವರು ಜರ್ಮನಿಯ ಅಭಿವೃದ್ಧಿ ಸಹಾಯಕ ಸಂಸ್ಥೆಯೊಂದನ್ನು ಸಂಪರ್ಕಿಸಿದರು. ಆ ಸಂಸ್ಥೆ ಸಹಾಯ ಮಾಡಲು ಒಪ್ಪಿಕೊಂಡು ಒಂದು ಟ್ರಸ್ಟ್ ಸ್ಥಾಪಿಸುವಂತೆ ಕೇಳಿಕೊಂಡಿತು.

ಅದೇ ಸಮಯದಲ್ಲಿ ಡಾ॥ ರಾವ್ ಅವರ ತಂದೆ ಮಗನನ್ನು ಕರೆದು, "ನೀನು ಹಳ್ಳಿಯಲ್ಲಿ ಒಳ್ಳೆ ಕೆಲಸ ಮಾಡುತ್ತಿದ್ದಿ ಎಂದು ಕೇಳಿದ್ದೇನೆ. ನೀನು ದಿವ್ಲಿಯಲ್ಲಿ ನನ್ನ ಹೆಸರಿನಲ್ಲಿ ಒಂದು ಆಸ್ಪತ್ರೆ ತೆರೆಯುವುದಾದರೆ ನಾನು ಹತ್ತು ಸಾವಿರ ರೂಪಾಯಿ ಕೊಡುತ್ತೇನೆ" ಎಂದು ಹೇಳಿದರು. ಆಗ ಪರಮೇಶ್ವರ "ನೀವು 300 ರೂಪಾಯಿ ಕೊಡಿ ಸಾಕು. ನಾನು ಅದನ್ನು ಹಳ್ಳಿಯ ಅಭಿವೃದ್ಧಿಯಲ್ಲಿ ತೊಡಗಿಸುತ್ತೇನೆ. ಅಲ್ಲಿನ ಜನತೆಯ ಆರೋಗ್ಯ ರಕ್ಷಣೆಗೆ

ಆಸ್ಪತ್ರೆಯಲ್ಲಿ ಬೇಕು ಎಂದೇನಿಲ್ಲ" ಎಂದರು.

ಮರುದಿನ ಬೆಳಿಗ್ಗೆ ತಂದೆ ಮಗನನ್ನು ಕರೆದು "ನೀನು ಹೇಳುವುದು ನನಗೆ ಸರಿಯಾಗಿ ಅರ್ಥ ವಾಗುತ್ತಿಲ್ಲ. ಆದರೂ ನಿನ್ನಲ್ಲಿ ನನಗೆ ನಂಬಿಕೆ ಯಿದೆ. ಹಣ ತೆಗೆದುಕೊಂಡು ನಮ್ಮ ಮನೆ ತನದ ಹೆಸರಿನಲ್ಲಿ ಟ್ರಸ್ಟ್ ಆರಂಭಿಸು" ಎಂದರು. ಭಾಗವತುಲಾ ಚಾರಿಟಬಲ್ ಟ್ರಸ್ಟ್ ಅಸ್ತಿತ್ವಕ್ಕೆ ಬಂದಿದ್ದು ಹೀಗೆ.

1976ರಲ್ಲಿ ಆರಂಭವಾದ ಈ ಟ್ರಸ್ಟ್ 1977 ರಲ್ಲಿ ಆಂಧ್ರ ಕರಾವಳಿ ಬಿರುಗಾಳಿಗೆ ತುತ್ತಾದಾಗ ಅನುಪಮ ಸೇವೆ ಸಲ್ಲಿಸಿತು. ಅನಂತರ ಅದು ಕೈಗೆತ್ತಿಕೊಂಡ ಯೋಜನೆ ಯಳ್ಳಮಂಚಿಲಿಯ ಬಳಿಯ ಬರಡು ಭೂಮಿ ಸಾಗುವಳಿ. ಶತಮಾನಗಳಿಂದ ಹಾಗೆಯೇ ಬಿದ್ದಿದ್ದ ಭೂಮಿ ಮೂರು ವರ್ಷಗಳಲ್ಲೆ ಡಾ|| ರಾವ್ ಅವರ ಮಾರ್ಗದರ್ಶನದಲ್ಲಿ ಹಸಿರಿನಲ್ಲಿ ಕಂಗೊಳಿಸಲಾರಂಭಿಸಿತು. ಅವರ ಟ್ರಸ್ಟು ಬಡ ರೈತರ ಬಂಜರುಭೂಮಿಯನ್ನು ದೇಣಿಗೆ ಪಡೆದು ಅದನ್ನು ಸಾಗುವಳಿಗೆ ಯೋಗ್ಯವಾಗಿ ಪರಿವರ್ತಿಸುವ ಕೆಲಸವನ್ನು ಮಾಡುತ್ತದೆ. ಇದರಿಂದ ಎಷ್ಟೋ ಜನ ಬಡ ರೈತರಿಗೆ ಲಾಭ ವಾಗಿದೆ.

ಆದರೆ ಅವರ ಎಲ್ಲಕ್ಕಿಂತ ಹೆಚ್ಚಿನ ಸಾಧನೆ ಯೆಂದರೆ ಮರಿಪಾಲೆಂ ಗ್ರಾಮವನ್ನು ಮಹಿಳಾ ಪ್ರಧಾನ ಗ್ರಾಮವನ್ನಾಗಿ ಪರಿವರ್ತಿಸಿದ್ದು. ಹತ್ತು ವರ್ಷಗಳ ಹಿಂದೆ ಈ ಗ್ರಾಮದಲ್ಲಿ ಹೆಂಗಸರು ಬಾಗಿಲು ತೆರೆದು ಹೊರಬರುವುದಕ್ಕೂ ಅವಕಾಶವಿರಲಿಲ್ಲ. ಎಷ್ಟೋ ಜನ ಗಂಡಸರು ಹೊಲಕ್ಕೆ ಹೋಗುವಾಗ ಮನೆಯ ಬಾಗಿಲಿಗೆ ಬೀಗ ಹಾಕಿಕೊಂಡು ಹೋಗುತ್ತಿದ್ದರು. ಆದರೆ ಡಾ|| ರಾವ್ ಅವರ ಮಾರ್ಗದರ್ಶನದಿಂದ ಈ ಸಂಪ್ರದಾಯದ ಮುಸುಕು ಸರಿದಿದೆ. ಮನೆಯಲ್ಲಿ ಕುಳಿತು ಊಟದ ಎಲೆಗಳನ್ನು ತಯಾರಿಸುವುದರ ಮೂಲಕ ತಮ್ಮ ಉತ್ಪಾದಕ ಚಟುವಟಿಕೆಯನ್ನು ಆರಂಭಿಸಿದ ಇಲ್ಲಿಯ ಮಹಿಳೆಯರು ಈಗ ಸ್ವತಃ ರೇಶನ್ ಅಂಗಡಿಯೊಂದನ್ನು ನಡೆಸುವಷ್ಟು ಮುಂದುವರೆದಿದ್ದಾರೆ. ಗಂಡಸರಿಗೂ ಈಗ ಜ್ಞಾನೋದಯ ವಾಗಿದ್ದು ಅವರು ಮಹಿಳೆಯರ ಚಟುವಟಿಕೆಗಳಿಗೆ ಅಡ್ಡಿಯನ್ನುಂಟುಮಾಡುವ ಮನೋಭಾವವನ್ನು ತೊರೆದು ಪ್ರೋತ್ಸಾಹ ನೀಡುತ್ತಿದ್ದಾರೆ.

ಈ ಗ್ರಾಮ ಇತರ ಗ್ರಾಮಗಳಿಗೆ ಉದಾಹರಣೆ ಹಾಕಿ ಕೊಟ್ಟಿದೆ. ಟ್ರಸ್ಟ್ ಸ್ಥಾಪಿಸಿದ ಮಹಿಳಾ ಮಂಡಳದ ಕಾರ್ಯಕರ್ತೆಯರ ನೆರವಿನಿಂದ ಈ ಗ್ರಾಮಗಳ ಮಹಿಳೆಯರೂ ಆರ್ಥಿಕ ಅಭಿವೃದ್ಧಿಯ ಮೆಟ್ಟಲುಗಳನ್ನೇರುತ್ತಿದ್ದಾರೆ. ಟ್ರಸ್ಟ್‌ನವರು ಪ್ರತಿ ಹಳ್ಳಿಗೆ ವೈದ್ಯಕೀಯ ಸೌಲಭ್ಯಗಳನ್ನೂ ಒದಗಿಸಿದ್ದಾರೆ. ರೋಗಿಗಳ ಮನೆ ಮನೆಗೆ ಹೋಗಿ ಅತಿ ಕಡಿಮೆ ದರದಲ್ಲಿ ಚಿಕಿತ್ಸೆ ನೀಡಲಾಗುತ್ತದೆ.

ಕೆಲವು ಬಾರಿ ಡಾ|| ರಾವ್ ತಮ್ಮ ಯೋಜನೆಗಳಿಗೆ ಸಂಪ್ರದಾಯ ಶರಣರ ವಿರೋಧ ಎದುರಿಸಿದ್ದುಂಟು. ಆದರೆ ಅವರ ಸಹನೆ, ವಿವೇಚನೆಗಳೆದುರು ಈ ವಿರೋಧಗಳು ತಂತಾನೆ ಮಾಯವಾಗುತ್ತವೆ. ಅವರ ಪ್ರಭಾವ ಎಷ್ಟಿದೆಯೆಂದರೆ ಗ್ರಾಮಸ್ಥರು ಅವರ ಮಾತನ್ನು ವೇದವಾಕ್ಯವಂತೆ ಪಾಲಿಸುತ್ತಾರೆ. ತಮ್ಮ ಹಳ್ಳಿಗಾಗಿ ಈ ವ್ಯಕ್ತಿ ತನ್ನದು ಎಂಬುದನ್ನೆಲ್ಲ ತೊರೆದಿದ್ದು, ಅವರನ್ನು ಪೂಜ್ಯತೆಯ ಎತ್ತರಕ್ಕೇರಿಸಿಬಿಟ್ಟಿದೆ. ಒಮ್ಮೆ ಟ್ರಸ್ಟಿನ ಶಿಫಾರಸಿನ ಮೇಲೆ ಬ್ಯಾಂಕೊಂದು 120 ಜನ

### ಹೆಣ್ಣು-ಹೊನ್ನು-ಮಣ್ಣು

ಹೆಣ್ಣು-ಹೊನ್ನು-ಮಣ್ಣು
"ಮಾಯ–"
ಇರಬಹುದು....
ಆದರೆ
ಇವುಗಳಿಂದಲೇ ಈ
ಕಾಯ....
–ಹದವರಿತು ಬಳಸುವುದೇ
ಸಮಗಿರುವ....
ಉಪಾಯ
ಹೆಜ್ಜೆ ಮೀರಿದರೆ
ತಪ್ಪದು....
ಅಪಾಯ.

● ನಾರಾಯಣ ರೈ ಕುಕ್ಕುವಳ್ಳಿ

# ಲೈಫ್‌ಬಾಯ್ ಎಲ್ಲಿದೆಯೋ, ಅಲ್ಲಿದೆ ಆರೋಗ್ಯ




ಹಿಂದುಸ್ಥಾನ್ ಲೀವರ್ ಅವರ ಉತ್ಕೃಷ್ಟ ಉತ್ಪಾದನೆ

LINTAS LB P 100 1811 KN

ಗ್ರಾಮಸ್ಥರಿಗೆ ಹಸುಗಳನ್ನು ಕೊಳ್ಳಲು ಸಾಲ ನೀಡಿತ್ತು. ಆದರೆ ಅವರಲ್ಲಿ ಬಹಳ ಜನ ಸಾಲ ಪಡೆದವರಾದರೂ ಹಸುಗಳನ್ನು ಕೊಳ್ಳಲಿಲ್ಲ. ಬ್ಯಾಂಕಿನವರು ಡಾ॥ ರಾವ್ ಅವರಿಗೆ ಈ ಬಗ್ಗೆ ದೂರು ಸಲ್ಲಿಸಿದರು. ಆಗ ಅವರು ಹಳ್ಳಿಗೆ ಹೋಗಿ ಸಾಲ ಪಡೆದವರನ್ನು ಕರೆದು. ತಿಳಿ ಹೇಳಿ ಹಸು ಕೊಳ್ಳುವಂತೆ ಹೇಳಿದರು. ಒಬ್ಬನೂ ಅವರ ಮಾತನ್ನು ಕಡೆಗಣಿಸಲಿಲ್ಲ!

ಮೃದುಭಾಷಿಯಾದ ಡಾ॥ ರಾವ್ ಅವರಿಗೆ ಪ್ರಚಾರ, ಪುರಸ್ಕಾರಗಳು ಬೇಕಿಲ್ಲ. ಆದರೂ ಅವು ಅವರನ್ನು ಹುಡುಕಿಕೊಂಡು ಬರುತ್ತವೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ಅವರ ಖ್ಯಾತಿ ಹರಡಿದೆ. 1981ರಲ್ಲಿ ವಿಶ್ವ ಬ್ಯಾಂಕಿನ ಅಧ್ಯಕ್ಷ ರಾಬರ್ಟ್ ಮ್ಯಾಕ್ನಮಾರಾರ ನೇತೃತ್ವದಲ್ಲಿ ವಿಶ್ವಬ್ಯಾಂಕ್‌ನ ನಿಯೋಗವೊಂದು ಭಾರತಕ್ಕೆ ಬಂದಿತ್ತು. ಡಾ॥ ರಾವ್‌ರ ಬಗ್ಗೆ ಕೇಳಿದ್ದ ಓರ್ವ ಸದಸ್ಯ ಪ್ರಧಾನಿ ಇಂದಿರಾ ಗಾಂಧಿಯವರನ್ನು ಅವರ ಬಗ್ಗೆ ಪ್ರಶ್ನಿಸಿದರು. ಆಗ ಈ ಮಹಾಶಯರನ್ನು ಪತ್ತೆಹಚ್ಚಿ ಮರುದಿನದ ಔತಣ ಕೂಟಕ್ಕೆ ಕರೆದುಕೊಂಡು ಬರುವಂತೆ ಇಂದಿರಾ, ತಮ್ಮ ಮಂತ್ರಿ ಪಿ.ವಿ. ನರಸಿಂಹ ರಾಯರನ್ನು ಕೇಳಿಕೊಂಡರು. ನರಸಿಂಹರಾವ್ ಜಿಲ್ಲಾಧಿಕಾರಿಗಳನ್ನು ಸಂಪರ್ಕಿಸಿ ಕೊನೆಗೂ ದೂರದ ಗ್ರಾಮವೊಂದರಲ್ಲಿದ್ದ ಡಾ॥ ರಾವ್ ಅವರನ್ನು ಪತ್ತೆ ಹಚ್ಚಿದರು. ಅಲ್ಲಿಂದ ಅವರನ್ನು ಹೈದರಾಬಾದಿನ ಮೂಲಕ ವಿಶೇಷ ವಿಮಾನದಿಂದ ದಿಲ್ಲಿಯಲ್ಲಿ ಪ್ರಧಾನಿಯ ಬಳಿಗೆ ಊಟಕ್ಕೆ ಕರೆತರಲಾಯಿತು.

ಅಂದಿನಿಂದ ಇಂದಿರಾ, ಡಾ॥ ರಾವ್‌ರವರ ಟ್ರಸ್ಟಿನ ಚಟುವಟಿಕೆಗಳಲ್ಲಿ ವಿಶೇಷ ಆಸಕ್ತಿ ತೋರಿದರು. ಆದರೆ ಟ್ರಸ್ಟಿನ ಕಾರ್ಯಗಳಲ್ಲಿ ತಮ್ಮ ಪಾತ್ರ ಹಿರಿದು ಎಂಬುದನ್ನು ರಾವ್ ಒಪ್ಪಿಕೊಳ್ಳುವುದಿಲ್ಲ. "ಅಭಿವೃದ್ಧಿ ಕೆಲಸ ಮಾಡುತ್ತಿರುವವರೆಲ್ಲ ಗ್ರಾಮಸ್ಥರೆ. ಟ್ರಸ್ಟ್ ಅವರಿಗೆ ಮಾರ್ಗದರ್ಶನ ನೀಡುತ್ತಿದೆ ಅಷ್ಟೇ. ಈ ಕೆಲಸವನ್ನು ಸಹ ಟ್ರಸ್ಟ್‌ನ ಕಾರ್ಯಕರ್ತರು ಮಾಡುತ್ತಿದ್ದಾರೆ ವಿನಾ ನಾನಲ್ಲ" ಎನ್ನುತ್ತಾರವರು.

ಗ್ರಾಮಸ್ಥರು ನಿರಕ್ಷರಿಗಳಾಗಿರಬಹುದು. ಆದರೆ ಅವರು ಖಂಡಿತ ಜ್ಞಾನಿಗಳೆಂದು ಡಾ॥ ರಾವ್ ನಂಬುತ್ತಾರೆ. ಒಮ್ಮೆ ಹಳ್ಳಿಗೆ ಹೋಗಿದ್ದರಂತೆ. ಆಗ ಇಬ್ಬರು ಅನಕ್ಷರಸ್ಥ ಮುದುಕರು ಕುಳಿತು ಗೀತಾ ಮತ್ತು ಭಾಗವತಗಳನ್ನು ಪಠಿಸುತ್ತಿದ್ದರಂತೆ. ಆಗಲೇ ಡಾ॥ ರಾವ್ ಅವರಿಗೆ ಈ ನಂಬಿಕೆ ಉಂಟಾಯಿತಂತೆ. ಹಳ್ಳಿಗಳ ಅಭಿವೃದ್ಧಿಗೆ ಅಲ್ಲಿಯ ಜನತೆಯ ಜಾಣತನವೇ ಕಾರಣ. ತಮ್ಮ ಸಮಸ್ಯೆಗಳಿಗೆ ತಾವೇ ಪರಿಹಾರ ಕಂಡು ಕೊಳ್ಳುತ್ತಿದ್ದಾರೆ ಎಂದವರು ಹೇಳುತ್ತಾರೆ.

ಡಾ॥ ರಾವ್ ಅವರು ಟ್ರಸ್ಟಿನ ಕಾರ್ಯಗಳ ಶ್ರೇಯಸ್ಸು ತಮಗೆ ಸಲ್ಲುವುದು ತಪ್ಪೆಂದು ಹೇಳಬಹುದು. ಆದರೆ ತಮ್ಮ ಶ್ರೇಷ್ಠ ಕಾರ್ಯಗಳನ್ನು ಜನರಿಂದ ಮುಚ್ಚಿಡುವುದು ಸಾಧ್ಯವಿಲ್ಲ. ಅವರ ಟ್ರಸ್ಟಿನ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಿಗೆ ಹೋಗಿ ಪರಿಶೀಲಿಸಿದರೆ ಡಾ॥ ರಾವ್‌ರ ಅನುಪಮ ಸೇವೆಯ ಅರಿವಾಗುತ್ತದೆ. ಅವರ ಟ್ರಸ್ಟ್ ಹಳ್ಳಿಗಳಲ್ಲಿ ಕೊಳವೆ ಬಾವಿ ತೆರೆಸಿದೆ. ವೈದ್ಯಕೀಯ ಸೌಲಭ್ಯ, ಶಿಕ್ಷಣ ಸೌಲಭ್ಯಗಳನ್ನೊದಗಿಸಿದೆ. ಜೀತದಾಳುಗಳನ್ನು ಬಿಡುಗಡೆ ಮಾಡಿಸಿದೆ. ಟ್ರಸ್ಟಿನ ಮಾರ್ಗದರ್ಶನದಲ್ಲಿ ಬೆಳೆದ ಜನರು ಹೊಟ್ಟೆತುಂಬ ಉಂಡು, ಉಳಿಸುವಷ್ಟು ಅಭಿವೃದ್ಧಿ ಹೊಂದಿದ್ದಾರೆ. ಭಾರತದ ಗ್ರಾಮಸ್ಥರಿಗೆ ಇದಕ್ಕಿಂತ ಹೆಚ್ಚಿನದೇನು ಬೇಕು.

●

(ಆಧಾರ: ದಿ ವೀಕ್)



ಕವನದ ಅರ್ಥ, ಯಾರಿಗೆ ಬೇಕು? ನೀವು, ಒಂದು ಕವಿತೆಯನ್ನು ಅನುಭವ ಎಂಬಂತೆ ಸ್ವೀಕರಿಸಬೇಕು. ಅದು ನನ್ನ ಪತ್ನಿಯಿದ್ದಂತೆ. ನನಗೆ ಆಕೆಯನ್ನು ಅರ್ಥಮಾಡಿಕೊಳ್ಳಲಾಗುತ್ತಿಲ್ಲ. ಆಕೆಯ ಮನಸ್ಸಲ್ಲೇನಿದೆ ಎಂಬುದೂ ನನಗೆ ಗೊತ್ತಿಲ್ಲ. ಆದರೆ ಆಕೆ ನನಗೊಂದು ಅನುಭವವಾಗಿದ್ದಾಳೆ.

●ಜಾನ್ ಸಿಯಾರ್ಡಿ.



# ಪಡೆಯಬಲ್ಲವರಿಗೆ

ಕಗ್ಗತ್ತಲನೂ ಸೀಳಿ
ಕೋರೈಸಿ ಸುಳಿವೊಂದು
ಕೋಲ್ಮಿಂಚು!
ನನಸಾಗದ ಕನಸುಗಳ
ನೆರಳಲ್ಲೂ
ಭ್ರಾಂತಿಯಲಿ ಕೊನೆಗೊಳ್ಳುವ
ಸಡಗರದಲ್ಲೂ
ಅಸಾಧ್ಯವೂ ಎಸಳಾಗಿ
ಕೊನೆಗೊಂಡು
ಮಿಡಿಯುತಿದೆ ಸೃಜನಾತ್ಮಕ
ತುಡಿತವೊಂದು!

ಬಿತ್ತಿದಷ್ಟೂ ತಲೆಯೆತ್ತುವ
ಬಗಲು ತುಂಬದ
ಬಯಕೆ ಅನುಭವಗಳ
ತೆಕ್ಕೆಯೊಳಗೂ ಉಸುರುತಿದೆ
ಮುಷ್ಟಿಗ್ರಾಹ್ಯವಲ್ಲದ
ಆಸೆಗಳ ಬತ್ತದಾ
ಮಹಾಪೂರವೊಂದು!

ಜೀವನದ ಘೋರಮುಖ
ನೈರಾಶ್ಯದ ನಿಟ್ಟುಸಿರ
ತಾರಕ ದನಿಯ
ಅಳುವಿನ ವ್ಯಾಪ್ತಿಯನೂ
ಮೀರಿ ಗುನುಗುತಿದೆ
ನಗುವಿನಾ ಎಳೆಯೊಂದು!

ಅಸಾಂಗತ್ಯ ಅಬದ್ಧ
ಬದುಕಿನ ಮೂರ್ಗಳಿಗೆ
ವ್ಯರ್ಥವೆನಿಸಿದರೂ
ಪಡೆಯ ಬಲ್ಲವರಿಗಿಹುದು ಇಲ್ಲಿ
ಮಿಥ್ಯವಲ್ಲದ ಅರ್ಥವರ್ಧಕ
ಸತ್ಯವೊಂದು!

● ಸುವರ್ಣ ಚಂದ್ರಶೇಖರ್ ●

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1. ಆಸುರ
   ಅ) ಅತಿಶಯ
   ಆ) ನೀರಡಿಕೆ
   ಇ) ಆಶ್ರಯ
   ಈ) ಸುಂದರ

2. ಬಿದುರು
   ಅ) ಹೆದರು
   ಆ) ಹಿಂದಿರುಗು
   ಇ) ದೂರಮಾಡು
   ಈ) ಕೊಡುಹು

3. ಗುದುಕು
   ಅ) ಕಳಿಸಿಕೊಡು
   ಆ) ಚಿಮ್ಮು
   ಇ) ಧ್ವನಿಮಾಡು
   ಈ) ಶೋಧಿಸು

4. ಘೋಷ
   ಅ) ಆನಂದ
   ಆ) ಆರೈಕೆ
   ಇ) ಧ್ವನಿ
   ಈ) ಓರುವುದು

5. ಒಗ್ಗು
   ಅ) ಹುಟ್ಟು
   ಆ) ಒಸರು
   ಇ) ಬಸಿಯುವಿಕೆ
   ಈ) ಗುಂಪು

6. ತೆವರು
   ಅ) ಎತ್ತರವಾದ ನೆಲ
   ಆ) ತಾಯಿಮನೆ
   ಇ) ರಥದ ಗಾಲಿ ಗುರುತು
   ಈ) ಸೇರಿಕೆ

7. ದಾವಣಿ
   ಅ) ಪಲಾಯನ
   ಆ) ಸೆಕೆ
   ಇ) ದನಗಳನ್ನು ಕಟ್ಟುವ ಹಗ್ಗ
   ಈ) ಕಂದಾಯ

8. ಕಬರಿ
   ಅ) ಪಾತ್ರ
   ಆ) ಹೆಳಲು
   ಇ) ಆಳವಾದ ತಗ್ಗು
   ಈ) ಮುಚ್ಚಳ

9. ತಮಂಧ
   ಅ) ಪೆಡ್ಡ
   ಆ) ಅಜ್ಞಾನ
   ಇ) ಕಡುಕುರುಡ
   ಈ) ಕಾಣಿಗೆ

10. ಜರ್ಜರಿತ
   ಅ) ಕುಪಿತ
   ಆ) ತಾಳದ ಘಾತ
   ಇ) ಸುಗ್ಗಾದ
   ಈ) ಶೂರತನ

11. ತೋಷಣ
   ಅ) ತೃಪ್ತಿ ಕೊಡುವುದು
   ಆ) ಹೊಟ್ಟೆ ಹೊರೆಯುವಿಕೆ
   ಇ) ನಿಂದೆ
   ಈ) ನೀರು ಆರಿಸುವುದು

12. ದೋಸ್ತಿ
   ಅ) ದುಷ್ಟ
   ಆ) ಪೋಷಾಕು
   ಇ) ಬೆಳಕು
   ಈ) ಸ್ನೇಹ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

**1. ಆಸುರ**

ಅ) ಅತಿಶಯ, ಭಯಂಕರ. ಉದಾ: ಕಟ್ಟಾಸುರದ ಭೋಗಾಸಕ್ತಿ [ಸಂ]

**2. ಬಿದುರು**

ಈ) ಕೊಡಹು, ಜಾಡಿಸು, ಬಿಸುಡು, ಚದರಿಸು. ('ಬಿದಿರು' ಎಂದೂ ಇದೆ) ಉದಾ: ಇರುವೆ ಕಚ್ಚಿದ ಕೈಯನ್ನು ಬಿದುರಿದ. [ದೇಶ್ಯ]

**3. ಗುದುಕು**

ಅ) ಚಿಮ್ಮು, ಮೇಲೆ ಹಾರು, ನೆಗೆ, ನೆಗೆತ. ಉದಾ: ಒಮ್ಮೆಲೇ ಗುದುಕಿದ ಹಕ್ಕಿ [ದೇಶ್ಯ. ಕುದುಕು ಗುದುಕು]

**4. ಘೋಷ**

ಇ) ದೊಡ್ಡದಾದ ಧ್ವನಿ, ಕೂಗು. ಉದಾ: ಘೋಷವನ್ನು ಕೇಳಿ ಜನ ಕೂಡಿದರು. [ಸಂ]

**5. ಒಗ್ಗು**

ಈ) ಗುಂಪು, ಗಡಣ, ರಾಶಿ. ಉದಾ: ಭಕ್ತರ ಒಗ್ಗು ಕೈಮೀರಿತು. [ದೇಶ್ಯ-ಒಮ್ಮಿ-ಒಗ್ಗು]

**6. ತೆವರು**

ಅ) ಎತ್ತರವಾದ ನೆಲ, ದಿಬ್ಬ, ತಿಟ್ಟು, ಗದ್ದೆಯ ಅಂಚು. ಉದಾ: ತಗ್ಗು ತೆವರುಗಳನ್ನು ಸಮ ಮಾಡಿದನು. ('ತೆಮರು' ಎಂದೂ ಇದೆ) [ದೇಶ್ಯ]

**7. ದಾವಣಿ**

ಇ) ದನಗಳನ್ನು ಕಟ್ಟುವ ಹಗ್ಗ, ಕಣ್ಣಿ. ಉದಾ: ದಾವಣಿಯನ್ನು ಹರಿದುಕೊಂಡು ಹೋಯಿತು. [ಸಂ.ದಾಮನ್=ಹಗ್ಗ-ಇಂದ]

**8. ಕಬರಿ**

ಅ) ಹೆಳಲು, ಹೆರಳು, ಕೂದಲಿನ ಜಡೆ. ಕಬರೀಭರ=ಹೆಳಲು ಗಂಟು [ಸಂ]

**9. ತಮಂಧ**

ಅ) ಕಗ್ಗತ್ತಲೆ, ಗಾಢಾಂಧಕಾರ, ಅಜ್ಞಾನ, ಆತ್ಮಜ್ಞಾನ ಶೂನ್ಯತೆ. ಉದಾ: ಮನಸ್ಸಿನ ತಮಂಧಕ್ಕೆ ಬೆಳಕು ಹಾಯಿಸಿದನು. [ಸಂ. ತಮೋಂಧ-ದ ಅಪಭ್ರಂಶ]

**10. ಜರ್ಜರಿತ**

ಇ) ನುಗ್ಗಾದ, ಭಗ್ನವಾದ, ಗಾಯದಿಂದ ನಿರ್ವಿಣ್ಣನಾದ. ಉದಾ: ಚಿಂತೆಯಿಂದ ಜರ್ಜರಿತನಾದ [ಸಂ.]

**11. ತೋಷಣ**

ಅ) ತೃಪ್ತಿಯನ್ನುಂಟುಮಾಡುವುದು, ಸಂತೋಷಗೊಳಿಸುವುದು, ಸಮಾಧಾನಪಡಿಸುವುದು. ಉದಾ: ದುರ್ಜನರ ತೋಷಣದಿಂದ ಸಮಸ್ಯೆ ಬಿಗಿಯಾಗುವುದು. [ಸಂ]

**12. ದೋಸ್ತಿ**

ಈ) ಸ್ನೇಹ, ಗೆಳೆತನ, ಮೈತ್ರಿ, ಗೆಳೆಯ, ಮಿತ್ರ. ಉದಾ: ಅವನಿಗೂ ಇವನಿಗೂ ಹಾಲು ನೀರಿನ ದೋಸ್ತಿ. [ಪಾರಸೀಕ-ದೋಸ್ತ್=ಗೆಳೆಯ]

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| 6- 8 ಸರಿಯಿದ್ದರೆ | ... | ಸಾಧಾರಣ |
| 9-10 " | ... | ಉತ್ತಮ |
| 11-12 " | ... | ಅತ್ಯುತ್ತಮ |

# ಇದು ಬೇರೆ ಜಗವಲ್ಲೋ ಅಣ್ಣ!

ಎವರೆಸ್ಟಿಗಿಂತ ಎತ್ತರವಾದ ಶಿಖರ, ಸಹಾರಾಕ್ಕಿಂತಲೂ ವಿಸ್ತಾರವಾದ ಮರುಭೂಮಿ, ನೈಲ್‌ಗಿಂತಲೂ ದೊಡ್ಡದಾದ ನದಿ ಇಲ್ಲಿವೆಯೆಂದರೆ ನಂಬುತ್ತೀರಾ? ಇಲ್ಲಿ ಆನೆಗಳನ್ನು ಬಿಡಿ, ಡೈನೋಸಾರ್‌ಗಳಿಗಿಂತಲೂ ಬೃಹದ್ಗಾತ್ರದ ಪ್ರಾಣಿಗಳು ಓಡಾಡುತ್ತಿವೆ; ಭೂಮಿಯ ಮೇಲೆ ದಟ್ಟ ಅರಣ್ಯಗಳಲ್ಲೂ ನೋಡಸಿಕ್ಕದಂತಹ ಸಸ್ಯಗಳಿಲ್ಲಿವೆ. ಆದರೆ ಇದೊಂದು ಭಯಾನಕ ಜಗತ್ತು; ಇದರ ಬಹುಭಾಗ ಶಾಶ್ವತವಾಗಿ ಕತ್ತಲೆಯಲ್ಲೇ ಹುದುಗಿಹೋಗಿದೆ. ಮನುಷ್ಯ ಚಂದ್ರನ ಮೇಲೆ ಅಡಿಯಿರಿಸಿ ಬಂದಿದ್ದಾನಾದರೂ ಈ ಜಗತ್ತಿನ ಬಗ್ಗೆ ಅವನಿಗೆ ತಿಳಿದದ್ದೂ ತೀರ ಅಲ್ಪಾಂಶ ಮಾತ್ರ.

ಹಾಗಿದ್ದರೆ ಈ 'ಇನ್ನೊಂದು ಜಗತ್ತು' ಯಾವುದು? ಅದಿರುವುದೆಲ್ಲಿ? ಎಂಬ ಪ್ರಶ್ನೆಗಳು ಸ್ವಾಭಾವಿಕವಾಗಿಯೇ ಉದ್ಭವಿಸುತ್ತವೆ. ಆದರೆ ಇವುಗಳಿಗೆ ಉತ್ತರ ಕಷ್ಟಸಾಧ್ಯವೇನಲ್ಲ. ನಾವಿರುವ ಈ ಪೃಥ್ವಿಯ ಬಹುಭಾಗವನ್ನು ವ್ಯಾಪಿಸಿರುವ ಸಾಗರಗಳೇ ಆ 'ಇನ್ನೊಂದು ಜಗತ್ತು'.

ನಾವು ಈ ಜಗತ್ತಿನ ವಿಷಯ ಮಾತನಾಡುವಾಗ ಪಥ್ವಿಯ ತೀರ ಅಲ್ಪ ಭಾಗ ಮಾತ್ರವಾಗಿರುವ ಭೂಮಿಯ ಮೇಲೆ ಕಾಣುವುದರ ಕುರಿತೇ ಮಾತಾಡುತ್ತಿರುತ್ತೇವೆ. ಜಗತ್ತಿನಲ್ಲೇ ಅತಿ ಎತ್ತರವಾದ ಶಿಖರ ಯಾವುದೆಂಬ ಪ್ರಶ್ನೆಯನ್ನು ಶಾಲೆಗೆ ಹೋಗುವ ಹುಡುಗ ಸಹ ತಟ್ಟನೆ ಉತ್ತರಿಸುತ್ತಾನೆ— ಸಮುದ್ರ ಪಾತಳಿಯಿಂದ 29,028 ಅಡಿ ಎತ್ತರವಿರುವ ಎವರೆಸ್ಟ್ ಎಂದು. ದಕ್ಷಿಣ ಅಮೆರಿಕದ ಪೆರು ದೇಶದ ಕರಾವಳಿಯಲ್ಲಿ ಎವರೆಸ್ಟಿಗಿಂತ 19,000 ಅಡಿ ಹೆಚ್ಚು ಎತ್ತರವಿರುವ ಶಿಖರವೊಂದಿದೆ ಎಂದು ಅವನಿಗೆ ತಿಳಿಯದು. ಈ ಶಿಖರವನ್ನು ಎವರೆಸ್ಟಿನ ಬದಿಗಿರಿಸಿ ನೋಡಿದರೆ, ಸುಮಾರು ಐದು ಮೈಲು ಎತ್ತರವಿರುವ ಎವರೆಸ್ಟಿಗಿಂತ ಮೂರೂವರೆ ಮೈಲು ಎತ್ತರದಲ್ಲಿ ಈ ಶಿಖರ ನಿಲ್ಲುತ್ತದೆ. ಇದರೆದುರು ಎವರೆಸ್ಟ್ ಒಂದು ಕುಬ್ಜ ಮಾತ್ರ! ಈ ಶಿಖರ ನೀರ ಮೇಲೆ 23,000 ಅಡಿ ಎದ್ದಿರುವುದಾದರೂ ಸಾಗರದಲ್ಲಿ 45,000 ಅಡಿಗಳಷ್ಟಿದೆ.

ಹೀಗಿರುವಾಗಲೂ ಸಾಮಾನ್ಯವಾಗಿ ಎವರೆಸ್ಟ್ ಜಗತ್ತಿನ ಅತ್ಯುತ್ತುಂಗ ಶಿಖರವೆಂದು ಜನ ನಂಬುವುದಕ್ಕೆ ಕಾರಣ ಆ ಶಿಖರದ ಪ್ರತಿ ಅಂಗುಲ ಅಂಗುಲವೂ ಬರಿಗಣ್ಣಿಗೆ ಕಾಣುವಂತಿರುವುದು. ನಾವೆಲ್ಲ ಗಾಳಿಯನ್ನುಸಿರಾಡುತ್ತ, ಒಣ ನೆಲದ ಮೇಲೆ ಬದುಕುವ ಜೀವಿಗಳಲ್ಲವೆ? ನಮ್ಮ ಜ್ಞಾನದ ಪರಿಮಿತಿಗೆ ದೃಷ್ಟಿಯ ಪರಿಮಿತಿಯೂ ಬಹುಮಟ್ಟಿಗೆ ಕಾರಣ. ಸಾಗರದ ಆಳಕ್ಕೆ ಮನುಷ್ಯ ಇಳಿಯುವುದಕ್ಕೂ ಪರಿಮಿತಿಯಿದೆ. ಯಾಂತ್ರಿಕ ಸಲಕರಣೆಗಳ ಸಹಾಯದಿಂದ ವಿಶಾಲ ಮಹಾಸಾಗರದ ಗರ್ಭದಲ್ಲಿ ಅಡಗಿರುವುದರಲ್ಲಿ ಅಂಶ ಮಾತ್ರದಷ್ಟನ್ನು ಅರಿಯಲು ಆತ ಸಮರ್ಥ

ನಾಗಿದ್ದಾನೆ. ನಮ್ಮ ದೃಷ್ಟಿಯ ಪರಿಮಿತಿಯಿಂದಾಗಿ ನಾವು ನಮ್ಮ ಸಂಕುಚಿತ ದೃಷ್ಟಿಗೆ ಸರಿಹೋಗುವ ರೀತಿಯಲ್ಲೇ ನಮ್ಮ ಜಗತ್ತನ್ನು ರೂಪಿಸಿಕೊಂಡಿದ್ದೇವೆ.

ಎವರೆಸ್ಟಿನ ಹೋಲಿಕೆ ಬರಿ ತಾಂತ್ರಿಕ ಅಂಶಗಳಿಂದ ಕೂಡಿದೆಯೆಂದು ಅನೇಕರಿಗೆ ಸಂದೇಹ ಬರಬಹುದು. ಆದರೆ ಅದೊಂದು ಚಿಕ್ಕ ನಿದರ್ಶನ ಮಾತ್ರ. ಮನುಷ್ಯ ಅಂತರಿಕ್ಷವನ್ನು ಗೆದ್ದಿದ್ದಾನೆ; ಪರಮಾಣುವನ್ನು ವಿಭಜಿಸಿ ಅತ್ಯಪೂರ್ವ ಬಲ ಸಂಪಾದನೆ ಮಾಡಿದ್ದಾನೆ; ಆದರೂ ನಮ್ಮ ಸೃಷ್ಟಿಯ ಮುಕ್ಕಾಲು ಭಾಗವನ್ನು ವ್ಯಾಪಿಸಿರುವ ನೀರಲ್ಲಡಗಿರುವ ಭೌತಿಕ ರಹಸ್ಯಗಳ ಬಗ್ಗೆ ಮಾತ್ರ ಅವನಿಗೆ ತಿಳಿದಿರುವುದು ಒಂದು ಸಾಸಿವೆ ಕಾಳಿನಷ್ಟು ಮಾತ್ರ. ಸಾಗರದ ತಳದಲ್ಲಿ ಅಲ್ಲಿಯ ಪ್ರಾಣಿಗಳ ಸಾಧನೆಗಳನ್ನು ನೋಡಿದರೆ ಮನುಷ್ಯನ ಸಾಧನೆ ಕಃಪದಾರ್ಥವೆನಿಸುವ ಭಯವೂ ಇದೆಯೆಂದು ಒಬ್ಬ ವಿಜ್ಞಾನಿ ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಅರಿಝೋನಾದಲ್ಲಿರುವ ಗ್ರ್ಯಾಂಡ್ ಕ್ಯಾನ್ಯನ್ ಜಗತ್ತಿನ ಏಳು ನೈಸರ್ಗಿಕ ಆಶ್ಚರ್ಯಗಳಲ್ಲಿ ಒಂದೆಂದು ಪರಿಗಣಿಸಲ್ಪಡುತ್ತಿದೆ. ಅದನ್ನು ನೋಡಿದ ಯಾರೂ ಆ ಅದ್ಭುತವನ್ನು ಕಂಡು ಅಚ್ಚರಿಯಿಂದ ಬೆರಳು ಕಚ್ಚದಿರಲಾರರು. ಅದು 200 ಮೈಲಿಗಳಿಗಿಂತಲೂ ಉದ್ದ, 4 ರಿಂದ 13 ಮೈಲುಗಳಷ್ಟು ಅಗಲ ಮತ್ತು ಒಂದೆಡೆ ಒಂದು ಮೈಲಿನಷ್ಟು ಆಳವಾಗಿದೆ. ಈ ಭವ್ಯ ದೃಶ್ಯವನ್ನು ಕಣ್ಣಾರೆ ಕಂಡವನು ವಿಜ್ಞಾನಿಯೇ ಇರಲಿ, ಸಾಮಾನ್ಯನೇ ಆಗಿರಲಿ ವಿಸ್ಮಯದಿಂದ ಮೂಕರಾಗದಿರುವುದು ಕಷ್ಟ. ಈ ನೋಟದ ಭವ್ಯತೆಯೇ ಅಂತಹದು.

ಸಾಗರ ತಳದಲ್ಲಿಯ ಪಾತಾಳವನ್ನು ನೋಡಿದಾಗ ಮಾತ್ರ ಗ್ರ್ಯಾಂಡ್ ಕ್ಯಾನ್ಯನ್ ಕುಗ್ಗಿಬಿಡುತ್ತದೆ. ಪೆರು ಮತ್ತು ಚಿಲಿ ದೇಶಗಳ ಪಶ್ಚಿಮಕ್ಕೆ ಶಾಂತಸಾಗರದಲ್ಲಿರುವ ಪೆರು-ಚಿಲಿ ತಗ್ಗು ಉತ್ತರ ತುದಿಯಿಂದ ದಕ್ಷಿಣ ತುದಿಯ ತನಕ 3,600 ಮೈಲುಗಳಷ್ಟು ಉದ್ದ ಹಬ್ಬಿದೆ, ಅರ್ಥಾತ್ ಗ್ರ್ಯಾಂಡ್ ಕ್ಯಾನ್ಯನ್‌ಗಿಂತ ಇದು 18 ಪಟ್ಟು ಉದ್ದ. ಗುವಾಮ್ ದ್ವೀಪದ ಬಳಿ ಮರಿಯನಾಸ್ ತಗ್ಗು ಎಂದು ಪ್ರಸಿದ್ಧವಾಗಿರುವೆಡೆಯಲ್ಲಿ ಅದರ ಆಳ ಏಳು ಮೈಲುಗಳಿಗಿಂತಲೂ ಹೆಚ್ಚು!

ಭೂನಿವಾಸಿಗಳಾದ ನಮ್ಮ ಮಟ್ಟಿಗೆ ಸಾಗರವೊಂದು ಅಸ್ಪಷ್ಟ ಆಶ್ಚರ್ಯ, ನಮ್ಮ ಜೀವನಕ್ಕೆ ಅಷ್ಟಿಷ್ಟು ಮಾತ್ರ ಸಂಬಂಧವಿರುವ ಹೊರಗಿನ ವಸ್ತು. ಆದರೆ ವಸ್ತುಸ್ಥಿತಿಯೇ ಬೇರೆ. ಸಾಗರಗಳಿಲ್ಲದಿದ್ದರೆ ನಾವು ಬದುಕುವುದೂ ಅಸಾಧ್ಯವಿತ್ತು. ಯಾರೋ ಹೇಳಿದಂತೆ ನಮಗೆ ಚಂದ್ರನ ಅಗೋಚರ ಮೈಯ ಬಗ್ಗೆ ನಮಗೆ ಸಾಗರತಲಕ್ಕಿಂತಲು ಹೆಚ್ಚು ಚೆನ್ನಾಗಿ ತಿಳಿದಿದೆ. ಈ ವೈಪರೀತ್ಯಕ್ಕೆ ಕಾರಣ ಗಮ್ಮತ್ತೆ. ಭೂಮಿಯ ಮೇಲಿನ ಬಹುಶಃ ಎಲ್ಲ ಸ್ಥಳಗಳಿಗೂ ಸ್ವಲ್ಪ ಪ್ರಯಾಸಪಟ್ಟರೆ ಹೋಗಿಬರಬಹುದು. ಅದರಂತೆಯೇ ಅಂತರಿಕ್ಷದಲ್ಲಿ ಚಂದ್ರನ ಮೇಲೆ ಇಳಿದು ಬರಲೂ ಸಾಧ್ಯವಾಗಿದೆ. ಆದರೆ ಸಾಗರದ ಆಳವನ್ನು ಬಗೆಯುವುದು ಮಾತ್ರ ಸಾಧ್ಯವಿಲ್ಲ. ಕೈಬೆರಳ ಮೇಲೆ ಎಣಿಸಬಲ್ಲಷ್ಟು ಜನ ಮಾತ್ರ ತಳ ಕಂಡು ಮರಳಿ ಬಂದಿದ್ದಾರೆ. ಮರಿಯನಾಸ್ ತಗ್ಗನ್ನು ಕೆಲ ನಿಮಿಷಗಳಷ್ಟು ಕಾಲ ಪ್ರವೇಶಿಸಿ ಮರಳಿ ಬಂದವರು ಇಬ್ಬರು ಮಾತ್ರ. 1960ರ ಜನವರಿ 23 ರಂದು 'ಟ್ರೀಸ್ಟೆ' ಎಂಬ ಹೆಸರಿನ ವಿಶೇಷವಾಗಿ ನಿರ್ಮಿತವಾದ ವಾಹಕದಲ್ಲಿ ಅಮೆರಿಕದ ಡಾನ್ ವಾಲ್ಷ್ ಮತ್ತು ಫ್ರಾನ್ಸಿನ ಜೇಕಸ್ ಪಿಕಾರ್ಡ್ ಎಂಬ ಇಬ್ಬರನ್ನು ಪೃಥ್ವಿಯ ಮೇಲೆಯೇ ಅತ್ಯಂತ ಆಳವಾದ (36,198 ಅಡಿ) ಮರಿಯನಾಸ್‌ನಲ್ಲಿ ಇಳಿಸಲಾಯಿತು. ಕಪ್ಪು ಮಸಿಗಿಂತಲೂ ಕತ್ತಲಾವರಿಸಿರುವ ಆ ತಗ್ಗಿನಲ್ಲಿ ನೆಲ ತಲುಪಿ ಸುರಕ್ಷಿತ ಮರಳಿ ಬಂದರವರು.

ಮಧ್ಯ ಅಟ್ಲಾಂಟಿಕ್ ಸಾಗರದಲ್ಲಿಯ ಬೆಟ್ಟದ ಸಾಲನ್ನೇ ನೋಡೋಣ. ಐಸ್‌ಲ್ಯಾಂಡಿನ ಬಳಿ (ಅಲ್ಲಿ ಕೆಲವೆಡೆ ಮಾತ್ರ ಈ ಬೆಟ್ಟದ ಶಿಖರಗಳು ಸಮುದ್ರದ ಮೇಲ್ಮೈಯಿಂದ ಮೇಲೆದ್ದಿವೆ) ಪ್ರಾರಂಭವಾಗಿ ಅಮೆರಿಕ, ಯೂರೋಪ್ ಮತ್ತು ಆಫ್ರಿಕಗಳಿಗೆ ಸಮಾಂತರವಾಗಿ ಉತ್ತರದಿಂದ ದಕ್ಷಿಣಕ್ಕೆ ಇಡೀ ಅಟ್ಲಾಂಟಿಕ್ ಸಾಗರದುದ್ದಕ್ಕೂ ಹಬ್ಬಿದ ಇದು ದಕ್ಷಿಣದಲ್ಲಿ ಆಫ್ರಿಕದ ದಕ್ಷಿಣಕ್ಕೆ ಹಿಂದೂ ಸಾಗರದಲ್ಲೂ ಚಾಚಿಕೊಂಡಿದೆ.

ಈ ಸಾಗರ ಪರ್ವತ ಸರಾಸರಿ 125 ಮೈಲು




ಗಳಷ್ಟು ಅಗಲವಾಗಿದೆ. ಇದರ ಅತಿ ಎತ್ತರ ಶಿಖರಗಳು ಕೂಡ ಸುಮಾರು 10,000 ಅಡಿ ಗಳಷ್ಟು ಆಳವಾದ ನೀರಲ್ಲೇ ಇವೆ. ಈ ಪರ್ವತ ಮತ್ತು ಇದರ ಶಾಖೆಗಳ ಒಟ್ಟು ವಿಸ್ತಾರ 40,000 ಮೈಲುಗಳಿಗಿಂತ ಹೆಚ್ಚಾಗಿದೆ. ಅರ್ಥಾತ್ ಅವುಗಳ ಉದ್ದ ವಿಷುವದ್ ವೃತ್ತ ದಲ್ಲಿರುವ ಭೂಮಿಯ ಸುತ್ತಳತೆಯ ಒಂದೂ ವರೆ ಪಟ್ಟು ಇದೆ. ಭೂಪೃಷ್ಠದ ಮೇಲಿರುವ ಯಾವುದೇ ಪರ್ವತಶ್ರೇಣಿಯೂ ವಿಸ್ತಾರದಲ್ಲಿ ಇದರ ಸಮೀಪ ಸಹ ಸುಳಿಯಲಾರದು.

ಇನ್ನು ನದಿಗಳೋ? ಭೂಗೋಲ ಪಠ್ಯಗಳ ಪ್ರಕಾರ 4,145 ಮೈಲುಗಳಷ್ಟು ಹರಿಯುವ ನೈಲ್ ಜಗತ್ತಿನ ಅತಿ ಉದ್ದ ನದಿ. ಉದ್ದದಲ್ಲಿ ನೈಲ್‌ಗಿಂತ ತುಸು ಚಿಕ್ಕದಾದರೂ ಹರಿಯುವ ನೀರಿನ ಗಾತ್ರದಲ್ಲಿ ಅಮೇಜಾನ್ ಅತ್ಯದ್ಭುತ. ಅದರಿಂದ ಹರಿದುಬರುವ ಸಿಹಿ ನೀರು ಎಷ್ಟೊಂದು ವಿಪುಲ ಮತ್ತು ಅದೆಷ್ಟು ರಭಸ ದಿಂದ ಹರಿದುಬರುತ್ತದೆಂದರೆ ಉಪ್ಪು ನೀರಿನ ಅಟ್ಲಾಂಟಿಕ್ ಸಾಗರದಲ್ಲಿ ಈ ನದಿಯ ಮುಖ ದಿಂದ 100 ಮೈಲುಗಳವರೆಗೂ ಸಿಹಿ ನೀರೇ ಇದೆಯಂತೆ.

ಈಗ ಸಾಗರದಾಳದಲ್ಲಿ ಹರಿಯುವ ಒಂದು ಮಹಾನದಿಯನ್ನೂ ಅದರ ಉದ್ದ, ರಭಸ ಗಳನ್ನೂ ನೋಡೋಣ. ಮಧ್ಯ ಅಂಟ್ಲಾಂಟಿಕ್ ಸಾಗರದಲ್ಲಿ ಕೆರಿಬಿಯನ್ ದ್ವೀಪಗಳ ಬಳಿ ಯಿಂದಾರಂಭಿಸಿ ಗಡಿಯಾರದ ಮುಳ್ಳಿನೋ ಪಾದಿಯಲ್ಲಿ ಉತ್ತರ ಅಟ್ಲಾಂಟಿಕ್ ಸಾಗರ ವನ್ನು ಬಳಸಿಕೊಂಡು ಯುರೋಪನ್ನು ತಲಪುವ ಗಲ್ಫ್‌ಸ್ಟ್ರೀಮ್ ಬಿಸಿ ನೀರಿನ ಪ್ರವಾಹ-ಉದ್ದ ದಲ್ಲಿ ನೈಲ್‌ಗಿಂತ ತುಂಬ ದೊಡ್ಡದಾಗಿದ್ದರೆ ಅದರಲ್ಲಿ ಪ್ರವಹಿಸುವ ನೀರಿನ ರಭಸವನ್ನು ಗಮನಿಸಿದಾಗ ಅಮೇಜಾನ್ ಗುಡ್ಡದಿಂದ ಜುಳು ಜುಳು ಹರಿದುಬೀಳುವ ಝರಿ ಯೋಪಾದಿಯಲ್ಲಿ ಕಂಡೀತು.

ಗಲ್ಫ್‌ಸ್ಟ್ರೀಮ್‌ನ ಅಸ್ತಿತ್ವವನ್ನು ಖಚಿತವಾಗಿ ಗುರಿತಿಸಿದವರು ಅಮೆರಿಕನ್ ವಿಜ್ಞಾನಿ ಬೆಂಜ ಮಿನ್ ಫ್ರಾಂಕ್‌ಲಿನ್–1769ರಲ್ಲಿ. ಅವನು ಮೊದಲ ಬಾರಿಗೆ ಈ ಪ್ರವಾಹದ ನಕ್ಷೆಯನ್ನು ಸಿದ್ಧಪಡಿಸಿದನು. ಇದು 50 ಮೈಲು ಅಗಲ ವಿದ್ದು ಮಿಯಾಮಿಯ ಹತ್ತಿರವೊಂದರಲ್ಲೆ (ಭೂಮಿಗೆ ಸಮೀಪ) 1,500 ಅಡಿ ಆಳವಿದೆ. ವಿಪುಲ ಖನಿಜ ಮತ್ತು ಪೋಷಕ ದ್ರವ್ಯಗಳಿಂದ ಸಮೃದ್ಧವಾದ ಈ ಪ್ರವಾಹದ ಕಡುನೀಲಿ ನೀರನ್ನು ಸಾಗರದ ಬೂದು ಹಸಿರು ನೀರಿ ನಿಂದ, ಅಟ್ಲಾಂಟಿಕ್ ಸಾಗರದ ಅನುಭವಿ ಪ್ರವಾಸಿಗಳು ತಟ್ಟನೆ ಗುರುತಿಸಬಲ್ಲರು.

ಭೂಮಿಯ ಮೇಲಿರುವಂತೆಯೇ ಸಾಗರದಲ್ಲಿ ಕೂಡ ಖನಿಜಗಳು ಸಮೃದ್ಧವಾಗಿ ತುಂಬಿ ಕೊಂಡಿವೆ. ಅಲ್ಲದೆ ಅದನ್ನು ಶಕ್ತಿಮೂಲವಾಗಿ ಬಳಸಿಕೊಳ್ಳುವತ್ತ ಮನುಷ್ಯ ಈಚೀಚೆಗಷ್ಟೇ ಪ್ರಯತ್ನ ನಡೆಸಿದ್ದಾನೆ. ಸಾಗರಗಳಲ್ಲಿ ಶೇಖರ ವಾಗಿರುವ ಉಪ್ಪಿನ ಗಾತ್ರವನ್ನು ಕೇಳಿಯೇ ನೀವು ಬೆರಳು ಕಚ್ಚಬಹುದು. ಜಗತ್ತಿನ ಎಲ್ಲ ಸಾಗರಗಳಲ್ಲಿ ಕೂಡಿ ಒಟ್ಟಿಗೆ ಇರುವುದು 5,000 ಕೋಟಿ ಟನ್ನುಗಳಷ್ಟು ಉಪ್ಪು. ಆ ಉಪ್ಪನ್ನಷ್ಟೆ ತೆಗೆದು ಭೂಮಿಯ ಮೇಲೆ ಹರಡಿ ದರೆ ಭೂಮಿಯ ಮೇಲೆ ನೂರಡಿ ದಪ್ಪನೆಯ ಹಾಸಿಗೆಯನ್ನು ಹಾಸಿದಂತಾದೀತು!

ಸಾಗರದ ತಳದಲ್ಲಿ ವಿಶಾಲ ಮರುಭೂಮಿ ಗಳೂ ಇವೆಯೆಂದರೆ ನಂಬುತ್ತೀರಾ? ಅವು ಗಳಲ್ಲಿ ಕೆಲವಂತೂ ಭೂಮಿಯ ಮೇಲಿನ

ಅತ್ಯಂತ ವಿಸ್ತಾರವಾದ ಮರುಭೂಮಿ ಎಂದು ಹೆಸರಾಗಿರುವ ಸಹಾರಾ ಮರುಭೂಮಿಗಿಂತಲೂ ವಿಶಾಲವಾಗಿದ್ದು ಅದಕ್ಕಿಂತಲೂ ಬರಡಾಗಿವೆ. ಸಾಗರದಾಳದ ಈ ಮರಳುಗಾಡಿನಲ್ಲಿ ಒಂದು ಚದರ ಮೈಲಿಗೆ ಬರಿ ಒಂದು ಮಿಲಿಗ್ರಾಮಿನಷ್ಟು ಸಜೀವ ವಸ್ತುಗಳಿರಬೇಕು!

ಭೂಮಿ-ಸಾಗರಗಳನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿದಾಗ ನಮ್ಮ ದೃಷ್ಟಿಕೋನವೇ ಅದೆಷ್ಟು ತೂಕ ತಪ್ಪಿದೆಯೆಂದು ನಮಗೆ ಕಲ್ಪನೆ ಬರುತ್ತದೆ. ಆದರೆ ಸಾಗರವಾಸಿ ಜೀವಿಗಳನ್ನು ಗಮನಕ್ಕೆ ತಂದುಕೊಂಡರೆ ನಮ್ಮ ಅಜ್ಞಾನ ಅದೆಷ್ಟು ಪ್ರಬಲವಾಗಿದೆಯೆಂಬ ಅರಿವು ನಮಗಾಗದಿರದು. ಭೂಮಿಯ ಮೇಲೆ ಜೀವಿಸಿರುವ ಪ್ರಾಣಿಗಳಲ್ಲಿ ಆನೆಯೇ ಅತಿ ದೊಡ್ಡದು. ಅದೆಷ್ಟು ದೊಡ್ಡದೆಂದರೆ ಯಾವುದಾದರೂ ಮಹಾಗಾತ್ರದ ವಸ್ತುವನ್ನು ವರ್ಣಿಸಬೇಕಾದರೆ ನಾವು ಅದು ಗಜಗಾತ್ರದ್ದು ಎಂದು ಹೇಳುತ್ತೇವೆ. ಆದರೆ ಜಲವಾಸಿ ನೀಲ ತಿಮಿಂಗಿಲು ಆನೆಗಿಂತ ಎಷ್ಟೋ ದೊಡ್ಡದಷ್ಟೇ ಅಲ್ಲ, ನಮ್ಮ ಭೂಮಿಯ ಇತಿಹಾಸದಲ್ಲೆ ಯಾವುದೇ ಕಾಲಕ್ಕೆ ಇದರಷ್ಟು ಮಹಾನ್ ಗಾತ್ರದ (ಡೈನೋಸಾರನ್ನೊಳಗೊಂಡು) ಪ್ರಾಣಿ ಇನ್ನೊಂದಿರಲಿಲ್ಲ, ಈಗಲೂ ಇಲ್ಲ.

ಭೂಮಿಯ ಇತಿಹಾಸದಲ್ಲಿ ಜೀವ ಪ್ರಾದುರ್ಭವಿಸಿದಂದಿನಿಂದ ಬಗೆಬಗೆಯ ಜೀವಿಗಳು, ಜಂತುಗಳು ಹುಟ್ಟಿ ಬಾಳಿ ಅವುಗಳಲ್ಲಿ ಅನೇಕ ಕುಲಗಳು ಹೇಳ ಹೆಸರಿಲ್ಲದಂತೆ ನಾಶವಾಗಿ ಹೋಗಿವೆ. ಆದರೆ ಸಮುದ್ರದಲ್ಲಿ ಮೈದಳೆದ ಯಾವ ಜೀವಿ-ಕುಲವೂ ನಾಶವಾಗದೇ ಹಾಗೆಯೇ ಉಳಿದಿದೆಯೆಂದರೆ ನಿಮಗೆ ಆಶ್ಚರ್ಯವಾದೀತು. ಸಾಗರವಾಸಿ ಮೀನುಗಳಲ್ಲೇ 50,000 ಪ್ರಭೇದಗಳಿವೆ. ಅಷ್ಟೇ ಏಕೆ ಸಾಗರದ ಕ್ರಿಮಿಗಳೆಂದು ಗುರುತಿಸಲಾಗುವ ಸಿಂಪುಗಳು, ಏಡಿಗಳು ಮುಂತಾದವುಗಳಲ್ಲಿಯೇ 25,000 ಪ್ರಭೇದಗಳಿವೆ.

ಜಲಜೀವಿಗಳ ಕೆಲ ಸಾಧನೆಗಳನ್ನು ನೋಡಿದರೆ ವೈಜ್ಞಾನಿಕ ಪ್ರಗತಿಯ ಉತ್ತುಂಗ ಶಿಖರವನ್ನು ತಲುಪಿರುವೆನೆಂದುಕೊಂಡಿರುವ ಮಾನವನ ಸಾಧನೆ ಕಃಪದಾರ್ಥವೆಂಬುದು ತಟ್ಟನೆ ವೇದ್ಯವಾಗುತ್ತದೆ. ಕೆಲಿಫೋರ್ನಿಯಾ ಬೂದು

ತಿಮಿಂಗಿಲ ಪ್ರತಿವರ್ಷ ಉತ್ತರಧ್ರುವ ಸಮುದ್ರದಿಂದ ಮೆಕ್ಸಿಕೋವರೆಗೆ ಆಯಾ ಋತುಮಾನಕ್ಕನುಸರಿಸಿ 11,000 ಮೈಲುಗಳ ಯಾನ ಮಾಡುತ್ತದೆ.

ಅದಕ್ಕಾಗಿ ಅದು ಅನುಸರಿಸುವ ಸ್ವಾಭಾವಿಕ ಮಾರ್ಗಸೂಚಿ ಎಷ್ಟೊಂದು ಕಟ್ಟುನಿಟ್ಟಾಗಿದೆಯೆಂದರೆ ಮನುಷ್ಯನು ತನ್ನ ಹಡಗುಗಳಿಗೆ ಮಾರ್ಗ ಸೂಚಿಸಲು ಇದುವರೆಗೆ ಸಿದ್ಧಪಡಿಸಿದ ಯಾವೊಂದು ಉಪಕರಣವೂ ಅದಕ್ಕೆ ಸರಿಸಾಟಿಯಾಗಿಲ್ಲ.

ಭೂಮಿಯ ಮೇಲೆ ಉಷ್ಣವಲಯದಲ್ಲಿ ಭಾರಿ ಮಳೆಯಾಗುವೆಡೆಗಳಲ್ಲಿ ಸಸ್ಯ ಅತ್ಯಂತ ರಭಸದಿಂದ ಬೆಳೆಯುತ್ತದೆಂಬುದು ಸಾಮಾನ್ಯ ಭಾವನೆ. ಆದರೆ ಸಮುದ್ರಗಳ ದಂಡೆಗೆ ಹೊಂದಿ ನೀರಲ್ಲಿ ಬೆಳೆಯುವ ಕಳೆ ಭೂಮಿಯ ಮೇಲಿನ ಯಾವುದೇ ಸಸ್ಯಕ್ಕಿಂತಲೂ ಭರದಿಂದ ಬೆಳೆಯುವುದಲ್ಲದೆ ಇದರ ಕೆಲ ಜಾತಿಗಳು ಆರು ತಿಂಗಳಲ್ಲಿ 15 ಅಡಿಗಳಷ್ಟು ಎತ್ತರಕ್ಕೆ ಬೆಳೆಯುವುದುಂಟು. ಅಲ್ಲದೆ ಭೂಮಿಯ ಮೇಲಿನ ಸಸ್ಯಗಳು ಆಶ್ರಯವೀಯುವುದಕ್ಕಿಂತ ಹೆಚ್ಚು ಬಗೆಯ ಜೀವಿಗಳಿಗೆ ಸಮುದ್ರ ಸಸ್ಯಗಳು ಮನೆಯಾಗಿದೆ.

ಸಾಗರದಲ್ಲಿ ಜೀವಿಗಳು ಬದುಕುವುದಕ್ಕಾಗಿ ಭೂಮಿಯ ಮೇಲೆ ಕಂಡರಿಯದಂತಹ ಹೋರಾಟ ನಡೆಸಬೇಕಾಗುತ್ತದೆ. ಅಲ್ಲಿ ತಾಯಿತಂದೆಗಳೇ ಮದ ಬಂದಾಗ ತಮ್ಮ ಮರಿಗಳನ್ನೇ ನುಂಗಿಬಿಡುತ್ತವೆ! ಅಲ್ಲದೆ ದೊಡ್ಡ ಪ್ರಾಣಿಗಳ ಹಸಿವಿನ ಬಾಧೆಗೆ ಸಣ್ಣವು ಬಲಿಯಾಗುವುದಕ್ಕೆ ಲೆಕ್ಕವೇ ಇಲ್ಲ. ಒಂದು ಅಂದಾಜಿನ ಪ್ರಕಾರ ಸಮುದ್ರದಲ್ಲಿ ಹುಟ್ಟಿದ 1,000 ಪ್ರಾಣಿಗಳಲ್ಲಿ ಒಂದು ಮಾತ್ರ ಯೌವನ ತಲುಪುವವರೆಗೆ ಬದುಕುತ್ತದಂತೆ.

ಈ ಜಲ ಜಗತ್ತಿನಲ್ಲಿ ಕ್ಷಣಕ್ಷಣಕ್ಕೂ ಬದುಕಿಗಾಗಿ ನಡೆಯುವ ಕ್ರೂರ ಹೋರಾಟ ಹಾಗೂ ಅದರಿಂದ ಉದ್ಭವಿಸುವ ಅಗಾಧ ಮರಣ ಪ್ರಮಾಣಗಳನ್ನು ನೋಡಿದಾಗಲೂ ಇವುಗಳಲ್ಲಿ ಕಂಡುಬರುವ ಅಗಾಧ ಚೈತನ್ಯವನ್ನು ಕಂಡು ಬೆರಗಾಗುತ್ತದೆ. ಕಳೆದ 60 ಕೋಟಿ ವರ್ಷಗಳಲ್ಲಿ ನಾಲ್ಕು ಸಲ ಪ್ರಳಯದೋಪಾದಿಯಲ್ಲಿ ಸಂಭವಿಸಿದ ಉತ್ಪಾತ್ನಗಳಿಂದ ಸಾಗರ ತಲದಲ್ಲಿಯ ಜೀವಸೃಷ್ಟಿಯೆ ನಾಶವಾಗಿ ಹೋಗಿತ್ತು. ಆದರೆ ಅಂಥ ವಿನಾಶದ ಬೂದಿಯಿಂದಲೇ ಮತ್ತೆ ಚೇತರಿಸಿಕೊಂಡು ಏಳುವಂತೆ- ಜೀವ ಅಲ್ಲಿ ಪ್ರತಿಸಲವೂ ಮೈದಳೆದು ಅಗಾಧ ವೈಪುಲ್ಯವನ್ನು ಮೆರೆದಿದೆ! ಈ ಸೃಷ್ಟಿ ಕಾರ್ಯಕ್ಕೆ ಲಕ್ಷಾವಧಿ ವರ್ಷ ಕಾಲ ಹಿಡಿದಿರಬೇಕೆಂಬ ಮಾತು ಬೇರೆ. ಆದರೆ ಹುಲು ಮಾನವರಾದ ನಾವು ಕಾಲವನ್ನು ನಮ್ಮ ಮಾನದಂಡದಿಂದ ಮಾತ್ರ ಅಳೆಯಲು ಶಕ್ತರು. ಆದರೆ ಸಾಗರದ ವಿಕಾಸದಲ್ಲಿ ಈ ಕಾಲಮ್ಹಾನ ಎವೆ ತೆರೆ ದಿಕ್ಕಿದಷ್ಟು ಮಾತ್ರ.

ಭೂಮಿಯ ಮಾನದಿಂದ ಪೃಥ್ವಿಯ ಮೇಲಿನ ಸಾಗರದ ನೀರಿನ ಪ್ರಮಾಣವನ್ನು ಕುರಿತು ಯೋಚಿಸಿದರೆ ಒಂದು ವಿಶಿಷ್ಟ ಅಂಶ ವೇದ್ಯವಾಗುತ್ತದೆ. ಮೇಲು ನೋಟಕ್ಕೆ ಪೃಥ್ವಿಯ ಶೇಕಡಾ 70.8 ಭಾಗ ಸಮುದ್ರ. ನಮ್ಮ ಸಾಗರಗಳಲ್ಲಿ ಸಂಗ್ರಹಿತವಾಗಿರುವ ಒಟ್ಟು ನೀರು 3 ಕೋಟಿ 50 ಲಕ್ಷ ಘನ ಮೈಲುಗಳಷ್ಟಿದೆ. ಅರ್ಥಾತ್ ಪೃಥ್ವಿಯ ಮೇಲಿರುವ ನೀರಿನಲ್ಲಿ ಶೇಕಡಾ 97ರಷ್ಟು ಸಾಗರಗಳಲ್ಲೇ ಇದೆ. ಇದನ್ನೇ ಸಾಗರಶಾಸ್ತ್ರಿಗಳು ಇನ್ನೊಂದು ರೀತಿಯಲ್ಲಿ ಹೇಳುತ್ತಾರೆ. ಭೂಮಿಯ ಮೇಲಿರುವ ಪರ್ವತ, ಕೊಳ್ಳ ಮುಂತಾದವುಗಳನ್ನೆಲ್ಲ ಹೇಗೋ ಒಂದೇ ಪಾತಳಿಯಲ್ಲಿ ಬರುವಂತೆ ಬಡಿದುಬಿಟ್ಟರೆ ಭೂಮಿಯ ಮೇಲೆ ನಿಲ್ಲುವ ಸಾಗರಗಳ ನೀರು. 8,000ದಿಂದ 12,000 ಅಡಿಗಳಷ್ಟು ಆಳವಾಗಿರುತ್ತದೆ!

ಅಂತೆಯೇ ಏನೋ, ನಭೋಮಂಡಲದಲ್ಲಿ ಸುತ್ತುತ್ತಿದ್ದ ಅಮೆರಿಕನ್ ಅಂತರಿಕ್ಷಯಾನಿಯೊಬ್ಬ, "ನಮ್ಮ ಈ ಮಾತೃಗ್ರಹವನ್ನು ಯಾರೋ ತಪ್ಪಾಗಿ ಭೂಮಿಯೆಂದು ಕರೆದರು. ಇದು ಭೂಮಿಯಲ್ಲ, ನೀರು!" ಎಂದ.

ಇದನ್ನು ಭೂಮಿಯೆಂದಾದರೂ ಕರೆಯಿರಿ. ನೀರೆಂದಾದರೂ ಗುರುತಿಸಿರಿ. ಆದರೆ ಇದುವರೆಗೆ ವಿಜ್ಞಾನಕ್ಕೆ ತಿಳಿದಿರುವಂತೆ ಸಾಗರಗಳಿರುವುದು ಇಲ್ಲಿ ಮಾತ್ರ. ಇಲ್ಲಿ ನಮಗಾಗಿ ಹವಾಮಾನವನ್ನು, ವಾತಾವರಣವನ್ನು ಸೃಷ್ಟಿಸಿರುವುದು ಮತ್ತು ಈ ಸೃಷ್ಟಿಯನ್ನು ಕಾಪಾಡಿಕೊಂಡು ಬರುತ್ತಿರುವುದು ಸಾಗರಗಳೇ ಎಂದಾಗ ನಮ್ಮ ಈ ಜಗತ್ತು ವಿಶ್ವದ ವಿಶಿಷ್ಟ ಸೃಷ್ಟಿಯೆಂದೆನಿಸುವುದಿಲ್ಲವೆ? ●

(ಕೃಪೆ: ಸೈನ್ಸ್ ಡೈಜೆಸ್ಟ್)

# ಲೇಪಾಕ್ಷಿಯಿಂದ... ಪುಟ್ಟಪರ್ತಿಯವರೆಗೆ

● ಚಿತ್ರಲೇಖನ: ಪಿ.ಆರ್. ತಿಪ್ಪೇಸ್ವಾಮಿ ●

ಹಲವು ಮಂದಿ ಕನ್ನಡ ಕಲಾವಿದರು ಕೂಡಿ 'ಲೇಪಾಕ್ಷಿ'ಗೆ ಒಂದು ಕಲಾಯಾತ್ರೆಯನ್ನು ಇಟ್ಟುಕೊಂಡಿದ್ದೆವು. ಚಿತ್ರದುರ್ಗ ಜಿಲ್ಲೆಯ ನನ್ನ ಹುಟ್ಟೂರು ಹರ್ತಿಕೋಟೆಯಿಂದ ಹಿಂದೂಪುರ ಮಾರ್ಗವಾಗಿ ನಾನು ಹೊರಟಿದ್ದೆ. ಮಿತ್ರ ಕಲಾವಿದರು ಮೈಸೂರು-ಬೆಂಗಳೂರಿನಿಂದ ರೈಲಿನಲ್ಲಿ ಬರುವುದಾಗಿ ತಿಳಿಸಿದ್ದರು. ಚಳ್ಳಕೆರೆ, ಪರಶುರಾಮಪುರ, ಹಾದು ನಿಡಗಲ್ ಪಾವಗಡ, ಮಡಕಸಿರಾ ಮೂಲಕ ಬಸ್ಸಿನಲ್ಲಿ ಬರುವಾಗ ಪಕ್ಕದಲ್ಲೇ ಕಾಣುವ ಭವ್ಯವಾದ ಬೆಟ್ಟ, ಗುಡ್ಡಗಳನ್ನು ನೋಡುತ್ತಾ ಸಾಗುವ ಪ್ರಯಾಣ ರಮ್ಯ. ದಿವ್ಯ ಕಲಾಕ್ಷೇತ್ರ ಲೇಪಾಕ್ಷಿಯಲ್ಲಿ ನನ್ನ ಮನಸ್ಸು ಲೀನವಾಗಿದ್ದರಿಂದ ಹಿಂದೂಪುರದವರೆಗಿನ ಎಂಭತ್ತು ಮೈಲಿಗಳ ಪ್ರಯಾಣ ಕಳೆದುದೇ ಅರಿವಾಗಲಿಲ್ಲ. ಹಿಂದೂಪುರಕ್ಕೆ ಬಂದಿಳಿದು ಪ್ರಯಾಣದ ಧೂಳನ್ನು ಝಾಡಿಸಿದೆ. ನನ್ನ ಕಲಾಸಾಮಗ್ರಿಯೊಂದಿಗೆ ಕಲಾಭಿಮಾನಿಗಳೂ ರಾಜಕಾರಣಿಗಳೂ ಆದ ದಿ. ಕಲ್ಲೂರು ಸುಬ್ಬರಾಯರ ಮನೆಯನ್ನು ಸೇರಿದೆ. ಬರುವಾಗ ತಂದಿದ್ದ ಬುತ್ತಿ ನನ್ನ ಬಸ್ಸಿನ ಪ್ರಯಾಣದ ಬಳಲಿಕೆಯನ್ನು ನೀಗಿತು.

ಲೇಪಾಕ್ಷಿ ಹಿಂದೂಪುರದ ಪೂರ್ವಕ್ಕೆ ಎಂಟು ಮೈಲಿಗಳ ದೂರದಲ್ಲಿದೆ. ಅಲ್ಲಿಗೆ ಹೋದೆ. ಕಲ್ಲುಗಳು ಲೇಪಾಕ್ಷಿಯ ದೇಗುಲಗಳನ್ನು ಅರಸುತ್ತ ಹೆಬ್ಬೀದಿಯನ್ನು ದಾಟಿ ಬಲಕ್ಕೆ ತಿರುಗಿ ಮುಂದೆ ಹೋಗಿ ಹಂತಗಳನ್ನು ಏರಿದಾಗ ಕಾಣುವ ದೇವಾಲಯದ ರಮ್ಯ ದೃಶ್ಯ ಸೋಜಿಗ ಹುಟ್ಟಿಸುತ್ತದೆ. ಅದೇ ಲೇಪಾಕ್ಷಿಯ ಶ್ರೀವೀರ ಭದ್ರಸ್ವಾಮಿಯ ಗುಡಿ.

ಬೆಂಗಳೂರು ಮೈಸೂರಿನಿಂದ ಕಲಾವಿದ ಮಿತ್ರರು ನನಗಿಂತ ಮೊದಲೇ ಬಂದಿರಬೇಕೆಂದು ತಿಳಿದದ್ದು ತಪ್ಪೆನಿಸಿತು. ಯಾವ ಕಲಾವಿದರ ಸುಳಿವೂ ಅಲ್ಲಿರಲಿಲ್ಲ. ಮರುದಿನ ಬಂದಾರೆಂದು ಆಸೆ ತಾಳಿದೆ. ಸುಮ್ಮನೆ ಕಾಲ ಕಳೆಯುವುದೇನೆಂದು ಒಮ್ಮೆ ದೇವಾಲಯವನ್ನು ವೀಕ್ಷಿಸತೊಡಗಿದೆ. ಲೇಪಾಕ್ಷಿ ಬಗ್ಗೆ ಹಿಂದೆ ಓದಿ ತಿಳಿದುದು ಮತ್ತೆ ನೆನಪು ಕೊಟ್ಟಿತು. ಲೇಪಾಕ್ಷಿಯ ಈ ದೇವಾಲಯ ತನ್ನ ಶಿಲ್ಪ ಹಾಗೂ ಚಿತ್ರಕಲೆಗೆ ಭಾರತದಲ್ಲೇ ಪ್ರಸಿದ್ಧ. ಒಂದೇ ದೇವಾಲಯದಲ್ಲಿ ಮೂಲ ಮೂರ್ತಿ ವೀರಭದ್ರನ ಪ್ರತಿಮೆ ಮತ್ತು ಅದರ ಎಡಬಲಗಳಲ್ಲಿ ಶ್ರೀರಾಮ ಮತ್ತು ಭಿಕ್ಷಾಟನೇಶ್ವರ ಮೂರ್ತಿಯನ್ನು ಕಾಣುತ್ತೇವೆ. ದೇವಾಲಯವನ್ನು ಪ್ರವೇ



'ಲೇಪಾಕ್ಷಿ' ನಾಗಲಿಂಗ ಶಿಲ್ಪ ವರ್ಣಚಿತ್ರ

ಶಿಸುತ್ತಿದ್ದಂತೆಯೇ ನಮ್ಮ ಬಲದ ಮೂಲೆಯ ಕಂಬದಲ್ಲಿನ ದುರ್ಗಾಂಬ ವಿಗ್ರಹವನ್ನು ಕನ್ನಡಿಯ ಮೂಲಕ ದರ್ಶನ ಮಾಡಿಸುವ ಒಂದು ವ್ಯವಸ್ಥೆ ಇದೆ. ಈ ದುರ್ಗಮ್ಮನೇ ಜನರ ಆರಾಧ್ಯ ದೇವತೆ. ದೇವಾಲಯವನ್ನು ದುರ್ಗಮ್ಮನ ಗುಡಿ ಎಂದು ಅಲ್ಲಿನ ಜನತೆ ಕರೆಯುತ್ತಾರೆ. ಇಲ್ಲಿನ ಕಂಬಗಳಲ್ಲಿ ನಾವು ವಿಶಿಷ್ಟವಾದ ಶಿಲ್ಪಕಲೆಯನ್ನು ಕಂಡರೆ, ಭಾವಣೆಯಲ್ಲಿ ಅಪೂರ್ವವಾದ ಚಿತ್ರಕಲೆಯ ಸೊಬಗನ್ನು ವೀಕ್ಷಿಸಬಹುದು.

ಕುಮಾರ ಪರ್ವತದಲ್ಲಿರುವ ಈ ದೇವಾಲಯವು 16ನೇ ಶತಮಾನದ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ್ದು. ಪೆನುಗೊಂಡೆಯ ಕೋಶಾಧಿಕಾರಿ ಅಪಾರ ಹಣ ವೆಚ್ಚಮಾಡಿ ಇದನ್ನು ಕಟ್ಟಿಸಿದ್ದಾನೆ. ಆಗ ವಿಜಯನಗರದ ರಾಜನಾಗಿದ್ದ ಅಳಿಯ ರಾಮರಾಯನ ಆಗ್ರಹಕ್ಕೆ ವಿರುಪಣ್ಣ ತುತ್ತಾಗಬೇಕಾಗಿ ರಾಜಾಜ್ಞೆ ಬರುವ ಮುನ್ನ ತನ್ನ ಕೈಗಳಿಂದಲೇ ಕಣ್ಣುಗಳನ್ನು ಕಿತ್ತು ವೀರಭದ್ರಸ್ವಾಮಿಗೆ ಅರ್ಪಿಸಿದನಂತೆ.

ವಿಜಯನಗರದ ಶಿಲ್ಪಕಲೆ ಇಲ್ಲಿ ಉನ್ನತಿ

ಯನ್ನು ಮುಟ್ಟಿದೆ. ಒಂದೊಂದು ಕಂಬದಲ್ಲಿಯೂ ಆಳೆತ್ತರದ ಭವ್ಯ ಕೃತಿಗಳನ್ನು ಬಹು ಸುಂದರವಾಗಿ ಕಡೆಯಲಾಗಿದೆ. ದುರ್ಗಿ, ಪದ್ಮಿನಿ, ನಾಟ್ಯ ಗಣಪತಿ, ಶಿವಶಿವೆ ಮುಂತಾದ ಮೂರ್ತಿಗಳ ಪ್ರಮಾಣ ಬದ್ಧತೆ ಶಿಲ್ಪ ಸೌಂದರ್ಯ ಅಚ್ಚರಿಪಡುವಂತಿದೆ. ರಂಗ ಮಂಟಪದ ಕಂಬಗಳಲ್ಲಿ ದಶಾವತಾರ ಮೂರ್ತಿಗಳೂ ಇವೆ. ಇವುಗಳ ಮುಖಭಾವ, ಅಂಗಾಂಗ ಸೌಂದರ್ಯ ಅತ್ಯಂತ ಮೋಹಕ. ಪ್ರತಿ ಕಂಬದಲ್ಲಿಯೂ ಶಿಲ್ಪಿಗಳು ಇಡೀ ಪ್ರಪಂಚವನ್ನೇ ಬಿಡಿಸುವ ಪ್ರಯತ್ನ ಮಾಡಿದ್ದಾರೆ. ಎಲ್ಲಿ ನೋಡಿದರೂ ಪ್ರಾಣಿಗಳು, ಪಕ್ಷಿಗಳು, ಡೊಂಬರಾಟ, ವಿವಿಧ ಬಗೆಯ ವಿನೋದ ಪೂರ್ಣವಾದ ಮಾನವರ ಕೃತಿಗಳು, ಬಗೆಬಗೆಯ ಪಲ್ಲವ ಪಟ್ಟಿಕೆಗಳನ್ನೆಲ್ಲಾ ಒರಟು ಕಲ್ಲಿನಲ್ಲಿ ಕಡೆದಿರುವ ಕೌಶಲ ಅತ್ಯಂತ ವಿಸ್ಮಯಕಾರಿ.

ಹಾಗೆಯೇ ಮುಂದುವರಿದು ದೇವಾಲಯದ ಹಿಂಬದಿಯ ಪೌಳಿಯಲ್ಲಿರುವ ಮೂರಾಳೆತ್ತರದ ನಾಗೇಶ್ವರ ಲಿಂಗದ ಮುಂದೆ ಬಂದು ಕುಳಿತೆ. ಏಳು ಹೆಡೆಯ ಸರ್ಪದಿಂದ ಸುತ್ತಲ್ಪಟ್ಟ ಈ ಅಪೂರ್ವ ವಿಗ್ರಹವನ್ನು ಕಡೆದ ಶಿಲ್ಪಿಗೆ ವಂದಿಸಿ, ಚಿತ್ರ ಬಿಡಿಸಲಾರಂಭಿಸಿದೆ. ಯಾವ ಗಲಾಟೆ ಗದ್ದಲವಿಲ್ಲದ ಆ ಪ್ರಶಾಂತತೆಯಲ್ಲಿ ಚಿತ್ರ ಬರೆಯುವುದು ಬೇಗ ಮುಗಿಯಿತು, ಅನಂತರ ದೇವಾಲಯಕ್ಕೆ ಸ್ವಲ್ಪ ದೂರದಲ್ಲಿರುವ ಬೃಹದಾಕಾರದ ನಂದಿ ವಿಗ್ರಹದ ಬಳಿ ಹೋದೆ. ಒಂದು ವರ್ಷದ ಎಳೆ ಕರುವಿನಂತೆ ತೋರ್ರುವ ಈ ಕೃತಿ 20 ಅಡಿ ಚದರವನ್ನು ಆವರಿಸಿಕೊಂಡು ಕುಳಿತಿದೆ. ಅಷ್ಟು ದೊಡ್ಡದಾದ, ಸ್ವಚ್ಛವಾದ ಕಲ್ಲಿನ ವಿಗ್ರಹ ಭಾರತದಲ್ಲೇ ವಿರಳ. ಅದನ್ನು ಕಡೆದ ಶಿಲ್ಪಿಯ ಕೈಚಳಕಕ್ಕೆ ಮಾರುಹೋದೆ. ಅಷ್ಟರಲ್ಲಿ ಹೊಟ್ಟೆ ತಾಳ ಹಾಕುತ್ತಿತ್ತು. ನನ್ನ ಮನಸ್ಸು ಕೈ ಚೀಲದ ಕಡೆ ಹೋಯಿತು. ಅಲ್ಲಿ ಇರುವ ಕಲ್ಯಾಣಿಯ ದಂಡೆಯ ಮೇಲೆ ಕುಳಿತು ಬುತ್ತಿ ಮುಗಿಸಿದೆ.

ಉತ್ತಮ ಫಲಹಾರ ಮಂದಿರಗಳನ್ನು ನಿರೀಕ್ಷಿಸಿ ಬಂದವರಿಗೆ ಲೇಪಾಕ್ಷಿಯಲ್ಲಿ ನಿರಾಶೆ ಕಾದಿರುತ್ತದೆ. ಕಾಫಿ ಚಟದವನಾದ ನನಗೆ ಅಲ್ಲಿರುವ ಕಾಕಾ ಹೊಟೆಲಿನ ಚಾ ಮಾತ್ರ ದೊರೆಯುತ್ತಿತ್ತು.

ಲೇಪಾಕ್ಷಿ ದೇವಾಲಯದಲ್ಲಿ ಶಿಲ್ಪಕಲೆಗೆ ಕೊಟ್ಟ ಪ್ರಾಶಸ್ತ್ಯವನ್ನು ಚಿತ್ರಕಲೆಗೂ ನೀಡಲಾಗಿದೆ. "ಲೇಪಾಕ್ಷಿ ಚಿತ್ರಕಲೆ ಅಜಂತಾದ ಚಿತ್ರ ಕಲೆಯನ್ನು ಸರಿಗಟ್ಟುತ್ತದೆ: ಧೂಳು ಹಿಡಿದು ಮಸಕಾಗಿದ್ದ ಈ ಚಿತ್ರಗಳನ್ನು ಇತ್ತೀಚೆಗೆ ಕೇಂದ್ರ ಸರಕಾರದವರು ಸ್ವಚ್ಛಗೊಳಿಸಿ ಸ್ಪಷ್ಟವಾಗಿ ಕಾಣುವಂತೆ ಮಾಡಿದ್ದಾರೆ. ಆಗಿನ ವರ್ಣಗಳು ಇನ್ನೂ ಹೊಚ್ಚ ಹೊಸದಾಗಿ ತೋರುತ್ತವೆ. ಒಂದೊಂದು ಚಿತ್ರವೂ ಒಂದೊಂದು ವೈಶಿಷ್ಟ್ಯದಿಂದ ಕೂಡಿದ್ದು ತನ್ನದೇ ಆದ ಸೊಬಗನ್ನು ಬೀರುತ್ತದೆ.

ಹದಿನಾರು ಸ್ತಂಭಗಳ ಮೂಲಾಂಕಣದ ಛಾವಣಿಯಲ್ಲಿ 18-24 ಅಡಿಗಳ ಬೃಹದಾಕಾರದ ಶ್ರೀ ವೀರಭದ್ರಸ್ವಾಮಿಯ ಚಿತ್ರ ನೋಡುತ್ತ ಬೆರಗಾದೆ. ಇಷ್ಟು ದೊಡ್ಡ ಪ್ರಮಾಣದ ಭಿತ್ತಿ ಚಿತ್ರ ಭಾರತದ ಪ್ರಾಚೀನ ಚಿತ್ರಕಲೆಯಲ್ಲಿ ಬಹಳ ವಿರಳ. ಅಲ್ಲದೆ ಪಾರ್ವತಿ ಕಲ್ಯಾಣ, ದಶಾವತಾರ, ವಿವಿಧ ಆಕೃತಿಯ ಪಲ್ಲವಗಳನ್ನು ಸ್ಕಾಂದ ಪುರಾಣದಲ್ಲಿನ ಶಿವ ಲೀಲೆ ವಿನೋದವನ್ನು ಛಾವಣಿಯಲ್ಲಿ ಮೋಹಕವಾಗಿ ಚಿತ್ರಿಸಲಾಗಿದೆ.

ಆದರೆ ಇಲ್ಲಿನ ಚಿತ್ರಗಳಲ್ಲಿನ ಒಂದು ವಿಚಿತ್ರವೆಂದರೆ, ಎಲ್ಲಾ ಮಾನವಾಕೃತಿಗಳಲ್ಲೂ ಮುಖ ಓರೆಯಾಗಿರಲಿ, ನೇರವಾಗಿರಲಿ ಎರಡು ಕಣ್ಣುಗಳನ್ನು ಚಿತ್ರಿಸಲಾಗಿದೆ. ಪ್ರತಿಯೊಂದು ಚಿತ್ರದ ವಸ್ತ್ರಾಭರಣ ಸೌಂದರ್ಯ, ವರ್ಣ ವೈಖರಿ, ಕುಸುರಿನ ಕಲೆ ಮೋಹಕವಾಗಿದೆ. ಕೇಶಾಲಂಕರಣ, ಆಭರಣಗಳ ಮಾಟ ವಿನೂತನವಾಗಿದೆ. ತೀಕ್ಷ್ಣ ರೇಖಾ ವಿನ್ಯಾಸ, ಅಂಗಾಂಗಗಳಲ್ಲೆಲ್ಲಾ ಕಾಣುವ ಚಿತ್ತಾಕರ್ಷಕ ಸೌಂದರ್ಯ ನಾಲ್ಕು ನೂರು ವರ್ಷಗಳ ಹಿಂದಿನ ಭಾರತೀಯ ಚಿತ್ರಕಲೆಯ ಹಿರಿಮೆಯನ್ನು ಸಾರುತ್ತದೆ.

ಅಂದು ರಾತ್ರಿ ಕೇವಲ ಬಿಸ್ಕತ್ತು ತಿಂದು ಮಲಗಿದೆ. ಆದರೂ ನಿದ್ರೆ ಚೆನ್ನಾಗಿಯೇ ಬಂತು. ಮರುದಿನವೂ ಕಲಾವಿದ ಮಿತ್ರರ ಸುಳಿವು ಕಾಣಲಿಲ್ಲ. ಪೆನುಕೊಂಡೆಯಲ್ಲಿ ಶ್ರೀ ಕೃಷ್ಣದೇವರಾಯನ ವರ್ಧಂತಿ ಜರುಗುವ ಸುದ್ದಿ ತಿಳಿಯಿತು. ಸತ್ಯ ಸಾಯಿಬಾಬಾ ಅವರೂ ಆ ಸಮಾರಂಭಕ್ಕೆ ಬಂದು ಸಂದೇಶ ನೀಡು

ವೃಮೂ ಗೊತ್ತಾಯಿತು. ಅಲ್ಲಿಗೆ ಹೋಗಲು ನಿರ್ಧರಿಸಿದೆ. ಪೆನುಕೊಂಡ ವಿಜಯನಗರದ ಉಪ ರಾಜಧಾನಿಯಾಗಿದ್ದಿತು. ಅಲ್ಲಿ ಇನ್ನೂ ಅನೇಕ ಕೋಟೆ ಕೊತ್ತಲಗಳ ಅವಶೇಷಗಳು ಉಳಿದಿವೆ. ಹೊರಡುವ ಮುನ್ನ ಒಂದು ಚಿತ್ರ ಬರೆಯುವ ಮನಸ್ಸಾಯಿತು. ಅಪೂರ್ವ ಚಿತ್ರ-ಶಿಲ್ಪ ಕಲಾಕೃತಿಗಳನ್ನು ಹೊಂದಿರುವ ಈ ದೇಗುಲವನ್ನೇ ಚಿತ್ರೀಕರಿಸಲು ನಿರ್ಧರಿಸಿದೆ. ದೇವಾಲಯದ ಆವರಣದ ಹಿಂಭಾಗದಲ್ಲಿ ಕುಳಿತು ಹೆಬ್ಬಾಗಿಲಿಗೆ ಬಾಗಿಲುಗಳಿಗೆ ಬೀಗ ಮುದ್ರೆ! ನಾನು ಯಾವುದೋ ಮೂಲೆಯಲ್ಲಿ ಚಿತ್ರ ಬಿಡಿಸುವುದು ಅರ್ಚಕರಿಗೆ ತಿಳಿಯದು. ಊಟದ ವೇಳೆಯಾಗಿದ್ದರಿಂದ ಮನೆಗೆ ಹೋಗಿರಬಹುದೆನಿಸಿತು. ಕೂಗಿದರೂ ಯಾರಿಗೂ ಕೇಳಿಸುವಂತಿರಲಿಲ್ಲ. ನನಗೂ ಹಸಿವಾಗಿತ್ತು. ಚೀಲದಲ್ಲಿದ್ದ ಬಿಸ್ಕತ್‌ಗಳು ಖಾಲಿಯಾದವು. ಬೀಗ ಮುದ್ರೆಯಾಗಿರುವ ಮಹಾದ್ವಾರದ ಕಿಂಡಿಗಳ ಬಳಿ ಹಕೆ ಕೂರುವುದೆಂದು ಮತ್ತೆ ದೇವಾಲಯದ ಕಲಾವೈಭವ ಸವಿಯುತ್ತಾ ಸುತ್ತಾಡತೊಡಗಿದೆ. ಅಷ್ಟು ದೊಡ್ಡ ಆವರಣದಲ್ಲಿ ಕಲೆಯನ್ನು ಸೃಜಿಸಲು ಪ್ರೇರಕ ಶಕ್ತಿಯಾದ ಕನ್ನಡಿಗ ವಿರುಪಣ್ಣನ ಅಗಾಧ ಕಲಾ ಪ್ರೇಮವನ್ನು ನೆನೆಯುತ್ತಾ ನನಗುಂಟಾದ ದಿಗಿಲು ಕರಗಿಹೋಯಿತು. ಅರ್ಚಕರು ಬಂದರು. ನನ್ನಿರುವಿಕೆಗೆ ಬೆಚ್ಚಿದ್ದರು. ಆದ ಅನಿವಾರ್ಯ ತೊಂದರೆಗೆ ಯಾರೂ ಕಾರಣರಲ್ಲ!

'ಲೇಪಾಕ್ಷಿ'ಯಿಂದ ಹಿಂದೂಪುರಕ್ಕೆ ಬಂದೆ. ರೈಲಿನಲ್ಲಿ ಪೆನುಕೊಂಡಕ್ಕೆ ಹೊರಟೆ. ಆಂಧ್ರದ ಕಲಾಭಿಮಾನಿಗಳು, ಸಾಹಿತಿಗಳೂ ನನ್ನಂತೆಯೇ ಕೃಷ್ಣದೇವರಾಯನ ವರ್ಧಂತಿ ಉತ್ಸವಕ್ಕೆ ಹೊರಟಿದ್ದರು. ಪೆನುಕೊಂಡ ರೈಲ್ವೆ ನಿಲ್ದಾಣಕ್ಕೆ ಬಂದಿಳಿದೆವು. ಊರಿನ ಸುಳಿವಿಲ್ಲ. ಕೇವಲ ಕೋಟೆ-ಕೊತ್ತಲ, ಗಿರಿಗಳು ಕಾಣಿಸಿದವು. ಆದರೆ ರಾಯರ ಕಲಾ ಪರಿಷತ್ತಿನ ಸ್ವಯಂಸೇವಕರು ಸಮಾರಂಭಕ್ಕೆ ಬಂದವರನ್ನು ಜಟಕಾಗಳಲ್ಲಿ ಕೊಂಚ ದೂರವಿರುವ ನಗರಕ್ಕೆ ಕರೆದೊಯ್ಯುತ್ತಿದ್ದರು. ನಾನಿದ್ದ ರೈಲು ಡಬ್ಬಿಯಲ್ಲಿ ಪರಿಚಯವಾದ ವ್ಯಕ್ತಿಯೊಬ್ಬರು ತಮ್ಮ ಜೊತೆಯಲ್ಲೇ ನನ್ನನ್ನು ಸಮಾರಂಭಕ್ಕೆ ಕರೆದುಕೊಂಡು ಹೋದರು.



ಪೆನಕೊಂಡದ 'ಗಗನ ಮಹಲ್' (ವಿಜಯನಗರ ಅರಸರ ಬೇಸಿಗೆಯ ಅರಮನೆ)

ಪೆನುಕೊಂಡ ಆಂಧ್ರ ಪ್ರದೇಶಕ್ಕೆ ಸೇರಿದ. ಪಿರಿದಾದ ಬೆಟ್ಟದಿಂದ ಕೂಡಿದ ನಗರ. 'ಅಷ್ಟದಿಗ್ಗಜ' ಎಂಬ ಬಿರುದನ್ನು ಹೊಂದಿದ ಕೃಷ್ಣದೇವರಾಯನ ಕಾಲದ ಪ್ರಾಚೀನ ಸಂಪತ್ತಿಗೂ, ಕಲಾ ಕೌಶಲ್ಯಕ್ಕೂ ಸಾಕ್ಷಿಯಾಗಿ ನಿಂತಿರುವ ಗುಡಿಗೋಪುರಗಳು, ಕೋಟೆ ಕೊತ್ತಲಗಳನ್ನು ಕಂಡ ಕಣ್ಣು ಎಂದೂ ಮರೆಯದು.

ಪೆನುಕೊಂಡೆಯ ಹೈಸ್ಕೂಲಿನ ಆವರಣದಲ್ಲಿ ಏರ್ಪಡಿಸಲಾಗಿದ್ದ ಉತ್ಸವದಲ್ಲಿ ಕೇಂದ್ರದ ಮಾಜಿ ವಾರ್ತಾ ಮಂತ್ರಿ ಗೋಪಾಲರೆಡ್ಡಿಯವರು ಅಧ್ಯಕ್ಷತೆ ವಹಿಸಿದ್ದರು. ಸಾವಿರಾರು ಜನ ನೆರೆದಿದ್ದರು. ಸತ್ಯಸಾಯಿ ಬಾಬಾ ಅವರು ಗೊತ್ತಾದ ಕಾಲಕ್ಕೆ ಬಂದು ಪೀಠವನ್ನಲಂಕರಿಸಿದರು. ಸಭೆ ಭಕ್ತಿಭಾವದಿಂದ ಜರುಗಿತು. ಬಾಬಾ ತೆಲುಗಿನಲ್ಲಿ ಸಂದೇಶವನ್ನಿತ್ತರು.

ಸಮಾರಂಭ ಮುಗಿಯಿತು. ಅಂದು ರಾತ್ರಿ ನಾನಿಳಿದಿದ್ದ ಉಡುಪಿ ಹೋಟೆಲಿನಲ್ಲಿ ಕುಳಿತು ಮರುದಿನ ಮುಂಜಾನೆ ಚಿತ್ರಿಸಬೇಕಾದ ನೆಲೆಯ ಬಗ್ಗೆ ವಿಚಾರ ಮಾಡತೊಡಗಿದೆ. ಅಪರಿಚಿತ ವ್ಯಕ್ತಿಯೊಬ್ಬರು ನನ್ನನ್ನು ಪೇಟೆಯ ಬೀದಿಯಲ್ಲಿ ಸುತ್ತಿಸಿ, ಊರ ಹೊರಗಡೆ ಕರೆದೊಯ್ದರು. ಆ ಕತ್ತಲಲ್ಲಿ ಅಷ್ಟು ದೂರ ಹೋಗುವಾಗ ಮನದಲ್ಲಿ ಏನೇನೊ ಕೆಟ್ಟ ಯೋಚನೆಗಳು. ಕೈಬೆರಳಿನ ಉಂಗುರವನ್ನೊಮ್ಮೆ ಜೇಬಿನಲ್ಲಿದ್ದ ನೋಟುಗಳನ್ನೊಮ್ಮೆ ಮುಟ್ಟಿನೋಡಿಕೊಂಡೆ. ದೇಗುಲವನ್ನು ದಾಟಿದಾಕ್ಷಣ ಬೃಹದಾಕಾರದ ಕೃಷ್ಣದೇವರಾಯನ ಅರಮನೆ "ಗಗನ ಮಹಲ್" ಕಾಣಿಸಿತು. ತಕ್ಷಣ ಮನಸ್ಸಿಗೆ ಸಮಾಧಾನವೆನಿಸಿತು. ಬಂದುದು ಸಾರ್ಥಕವಾಯಿತೆನಿಸಿತು.

ಮರುದಿನ ಬೆಳಿಗ್ಗೆ ಆ 'ಗಗನ ಮಹಲ್' ಅರಮನೆಯ ಚಿತ್ರ ಬಿಡಿಸುತ್ತ ಕುಳಿತೆ. ರೇಖಾ ಚಿತ್ರ ಮುಗಿಯಿತು. ಇನ್ನು ಜಲವರ್ಣಗಳನ್ನು ತುಂಬಬೇಕು. ನೀರಿನ ಸೀಸೆ ಇದ್ದಿತಾದರೂ ನೀರು ಇಟ್ಟುಕೊಳ್ಳುವ ಬಟ್ಟಲನ್ನು ತರಲು ಮರೆತು ಬಂದಿದ್ದೆ. ಒಂದೂವರೆ ಕಿಲೋ ಮೀಟರ್ ದೂರದ ಪೇಟೆಗೆ ಹೋಗಿಬರುವ ವೇಳೆಯೂ ಅದಾಗಿರಲಿಲ್ಲ. ಪಕ್ಕದ ಶ್ರೀರಾಮ ದೇವಾಲಯದ ಸುತ್ತ ಪ್ರದಕ್ಷಿಣೆ ಹಾಕಿದೆ. ನನ್ನ ಅದೃಷ್ಟಕ್ಕೆ ಎರಡು ಕರಟಗಳು ದೊರೆತವು. ಚಿತ್ರವೂ ಸೊಗಸಾಗಿ ಮೂಡಿ ಬಂದಿತು. ನನಗಾದ ಸಂತೋಷ ಹೇಳತೀರದು.

ರಾಯರ ಕಲಾಪರಿಷತ್ತಿನ ಆ ಸಮಾರಂಭದಲ್ಲಿ ಆಂಧ್ರ ಮಹಾಕವಿ ಪುಟ್ಟಪರ್ತಿ ನಾರಾಯಣಾಚಾರ್ಯರ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿ ಜರುಗಿತು. ನಾನಿಳಿದಿದ್ದ ಹೋಟೆಲ್ ಮಾಲಿಕ ಕಲಾಭಿಮಾನಿ. ಅವರಿಂದಾಗಿ ನನ್ನ ಚಿತ್ರಗಳ ಸಮೇತ ಆ ಕವಿಗೋಷ್ಠಿಗೆ ಬರುವಂತೆ ಕರೆಬಂದಿತು. ನಾನು ರಚಿಸಿದ್ದ ಹಲವು ಕೃತಿಗಳನ್ನು ಸಮಾರಂಭದ ಸಭಾಂಗಣದಲ್ಲಿ ಇರಿಸಿ ಎಲ್ಲರೂ ವೀಕ್ಷಿಸುವಂತೆ ಅವಕಾಶ ಮಾಡಿಕೊಟ್ಟರು. ಆಂಧ್ರ ಕವಿಗಳ ಜೊತೆ ನನ್ನನ್ನೂ ಸನ್ಮಾನಿಸಿದರು. ನನ್ನ ಜೊತೆ ಸನ್ಮಾನಿತರಾದ ಕನ್ನಡಿಗರಲ್ಲಿ ದಿ. ಕೊರಟಿ ಶ್ರೀನಿವಾಸರಾವ್ ಮತ್ತು 'ರಾಮಕವಿ' ಸಹ ಇದ್ದರು. ಆಂಧ್ರದ ಕಲಾಪ್ರೇಮ ಮರೆಯುವಂತಹದಲ್ಲ.

ಇಷ್ಟು ದೂರ ಬಂದ ಮೇಲೆ ಬಾಬಾ ನೆಲಸಿರುವ ನೆಲೆಯನ್ನಾದರೂ ನೋಡುವ ಆಸೆ ನನಗಾಯಿತು. ಪೆನುಕೊಂಡದಿಂದ ಬಸ್ಸಿನಲ್ಲಿ ಪುಟ್ಟಪರ್ತಿಗೆ ಹೊರಟೆ. ಗಿರಿಗಳ ನಡುವೆ ಸಾಗುವ ಬಸ್ಸು ಕೊಚ್ಚರುಪು ಊರು ತಲುಪಿ ಬುಕ್ಕಪಟ್ಟಣ ಕೆರೆಯ ಕೋಡಿಗೆ ಬಂದು ನಮ್ಮನ್ನು ಇಳಿಸಿತು. ಬುಕ್ಕರಾಯನೇ ಈ ಕೆರೆಯನ್ನು ಕಟ್ಟಿಸಿದನೆಂಬ ಪ್ರತೀತಿಯಿದೆ. ಇಲ್ಲಿಂದ ಕಾಲು ನಡಿಗೆಯಲ್ಲಿ ಸಾಗಿದರೆ ನಲವತ್ತು ನಿಮಿಷದಲ್ಲಿ ಪುಟ್ಟಪರ್ತಿ ತಲುಪುತ್ತೇವೆ. ನನ್ನ ಜೊತೆ ಬೆಳಗಾವಿ ಕಡೆಯ ಭಕ್ತರೂ ಇದ್ದರು. ಕೆರೆಯ ಕಾಲು ದಾರಿಯಲ್ಲಿ ಸಾಗಿದೆವು. ಕೋಟೆ ಕಟ್ಟಿಸಿದಂತೆ ಬೆಟ್ಟದ ಸಾಲುಗಳು ಸುತ್ತುವರಿದಿವೆ. ಪುಟ್ಟಪರ್ತಿ ಗ್ರಾಮದ ಸುತ್ತಲೂ ಚಿತ್ರಾವತಿ ನದಿಯೂ ಸಾಗುತ್ತಿದೆ.

ಬಾಬಾ ಪ್ರವಾಸದಲ್ಲಿರುವುದು ಮೊದಲೇ ತಿಳಿದಿತ್ತು. ಆದರೂ ಅವರು ನೆಲೆಸಿರುವ ಕ್ಷೇತ್ರವನ್ನಾದರೂ ನೋಡುವ ಆಸೆ ನನ್ನದಾಗಿತ್ತು. ಪುಟ್ಟಪರ್ತಿ ಬೆಟ್ಟದ ಬುಡದಲ್ಲಿ ಗಿಡಮರಗಳ ನಡುವೆ ಕಂಗೊಳಿಸಿತು. ಚಿತ್ರಾವತಿ ಬಯಲನ್ನು ತುಳಿದು ಗ್ರಾಮವನ್ನು ಸೇರಿದೆವು. ಮುಂದೆ ಹೋದಾಗ ಹೊಲಗದ್ದೆಗಳ ನಡುವೆ ಸಾಗುವ ಬಂಡಿ ಹಾದಿಯ ಕೊನೆಯಲ್ಲಿ ನಿಸರ್ಗದ

ನಡುವೆ ಪ್ರಶಾಂತ ವಾತಾವರಣದಲ್ಲಿ ಶ್ರೀ ಮಂದಿರ ಕಂಗೊಳಿಸಿತು. ಅದೇ ಬಾಬಾ ಅವರ ಪ್ರಶಾಂತ ಮಂದಿರ. ಅಕ್ಕಪಕ್ಕದಲ್ಲಿ ಭಕ್ತರ ವಸತಿ ಗೃಹಗಳು ಭಕ್ತರಿಂದಲೇ ನಡೆಸಲಾದ ಉಪಾಹಾರಗೃಹ. ಇಲ್ಲಿ ಕಳ್ಳತನದ ಭಯ ವಿಲ್ಲ.

ಪ್ರಶಾಂತ ಮಂದಿರದ ಪಡಸಾಲೆಯಲ್ಲಿ ಕಲಾ ಸಾಮಗ್ರಿಗಳ ಚೀಲ ಇರಿಸಿದೆ. ನನ್ನ ಅತ್ಯಂತ ನೆಚ್ಚಿನ ಹಾಸ್ಯ ಸಾಹಿತಿ ನಾ. ಕಸ್ತೂರಿಯವರನ್ನು ಹುಡುಕಿಕೊಂಡು ಹೋದೆ. ಅವರೂ ಬಾಬಾರ ಜೊತೆ ಪ್ರವಾಸದಲ್ಲಿದ್ದರು. ಬಂದುದಕ್ಕೆ ಎರಡು ಚಿತ್ರಗಳನ್ನು ಬಿಡಿಸಿಕೊಂಡೆ.

ಬೆಳಗಿನ ನಾಲ್ಕೂವರೆಗೆ ಇಲ್ಲಿ ಜರಗುವ ಮೌನ, ಪ್ರಶಾಂತ ಪ್ರಾರ್ಥನೆಯನ್ನು ನಾನೆಂದೂ ಮರೆಯಲಾರೆ. ಮೂರು ದಿನಗಳು ಅಲ್ಲಿದ್ದುದನ್ನು ಈ ಪ್ರಶಾಂತ ವಾತಾವರಣ ಮರೆಸಿತ್ತು.

ಹೀಗೆ ಕಲಾವಿದರ ತಂಡವನ್ನು ನಿರೀಕ್ಷಿಸಿ ಲೇಪಾಕ್ಷಿಗೆ ಬಂದ ನಾನು ಏಕಾಂಗಿಯಾಗಿ ಅಲ್ಲಿನ ಕಲಾವೈಭವವನ್ನು ಸವಿಯುವ ಸದವ ಕಾಶ ದೊರಕಿತು. ಲೇಪಾಕ್ಷಿಯಿಂದ ಪುಟ್ಟಪರ್ತಿ ಯವರೆಗೆ ಪ್ರಸಿದ್ಧ ಐತಿಹಾಸಿಕ ನೆಲೆಗಳನ್ನು, ಪವಿತ್ರ ಯಾತ್ರಾ ಸ್ಥಳಗಳನ್ನು ಕಂಡ ನನ್ನ ಕಣ್ಣು ಗಳು ಧನ್ಯವಾದವು. ಮನಸ್ಸಿಗೆ ಒಂದು ಅಪೂರ್ವ ಶಾಂತಿ ದೊರಕಿತು. ●

## ದೇವರ ಕೈಲಾಗದ ಶಿಕ್ಷೆ

ಒಂದು ದಿನ ಬೀರಬಲ್ ಅಕ್ಬರನನ್ನು "ದೇವರಿಂದಾಗದ ಕೆಲಸ ಕೂಡಾ ನೀವು ಮಾಡುವಿರಿ. ನೀವು ಮಹಾತ್ಮರು ಪ್ರಭು" ಎಂದು ಹೊಗಳಿದನು.

ಆಗ ಪಕ್ಕದಲ್ಲೇ ಬೀರಬಲ್‌ನ ವಿರೋಧಿಯೊಬ್ಬನಿದ್ದನು. ಅವನು ಎದ್ದು, ಅಕ್ಬರನಿಗೆ ನಮಸ್ಕರಿಸಿ, "ಪ್ರಭುಗಳೇ, ಹಾವಿನಿಂದ ಕಡಿಸಿಕೊಂಡವನಿಗೂ ಹೊಗಳಿಕೆಯಿಂದ ಆವಿ ತುಂಬಿಸಿ ಕೊಂಡವನಿಗೂ ಭೇದವಿಲ್ಲ ಎನ್ನುತ್ತಾರೆ. ನೀವು ಮಹಾ ಪ್ರಭುವೆಂಬುದಕ್ಕೆ ಅನುಮಾನವಿಲ್ಲ ದಿದ್ದರೂ ಬೀರಬಲ್ ನಿಮ್ಮನ್ನು ದೇವರಿಗಿಂತ ಹೆಚ್ಚಿನವರೆಂದು ಹೊಗಳಿದ್ದು ಅಪಹಾಸ್ಯವೇ ಸರಿ" ಎಂದನು.

ಅಕ್ಬರನಿಗೂ ಬೀರಬಲ್‌ನ ಹೊಗಳಿಕೆ ಹಿಡಿಸಲಿಲ್ಲ. 'ಮುಖ್ಯವಾಗಿ ದೇವರಿಂದ ಸಾಧ್ಯವಾಗದ ಕೆಲಸವನ್ನು ತಾನೇನು ಮಾಡಬಲ್ಲೆ?' ಎಂಬುದು ಅವನಿಗೆ ತಿಳಿಯಲಿಲ್ಲ.

"ಬೀರಬಲ್! ದೇವರಿಂದಾಗದ ಕೆಲಸ ನಾನೇನು ಮಾಡಬಲ್ಲೆನೆಂಬುದನ್ನು ಹೇಳಿ ನನ್ನನ್ನು ಒಪ್ಪಿಸಿದರೆ ಸರಿ. ಇಲ್ಲದಿದ್ದರೆ ಅರ್ಥವಿಲ್ಲದ ಹೊಗಳಿಕೆಯಲ್ಲಿ ನನ್ನನ್ನು ಮುಳುಗಿಸುವೆಯೆಂದು ತಪ್ಪು ಹಾಕಿ ನಿನ್ನನ್ನು ಶಿಕ್ಷಿಸುತ್ತೇನೆ" ಎಂದನು ಅಕ್ಬರ್.

"ಪ್ರಭೂ, ನೀವು ಅಗತ್ಯಬಿದ್ದರೆ ಯಾರನ್ನಾದರೂ ದೇಶ ಬಹಿಷ್ಕಾರ ಮಾಡಿ ಕಳುಹಿಸಬಲ್ಲಿರಿ. ಅಂತಹ ಶಿಕ್ಷೆ ಕೊಡಲು ದೇವರ ಕೈಲಾಗದು" ಎಂದನು ಬೀರಬಲ್.

"ಅದೇಕಾಗದು?" ಎಂದು ಅಕ್ಬರ್ ಆಶ್ಚರ್ಯದಿಂದ ಕೇಳಿದನು.

"ಈ ವಿಶ್ವವೆಲ್ಲವೂ ದೇವರ ರಾಜ್ಯವೇ ಆದುದರಿಂದ ದೇವರು ದೇಶ ಬಹಿಷ್ಕಾರ ಶಿಕ್ಷೆ ವಿಧಿಸಿದರೂ ಆ ಮನುಷ್ಯನನ್ನು ಎಲ್ಲಿಗೆ ಕಳುಹಿಸಬೇಕೆಂದು ದೇವರಿಗೆ ಗೊತ್ತಿಲ್ಲ. ಅದು ನಿಮಗೆ ಗೊತ್ತಿದೆ. ನೀವು ಖಂಡಿತಾ ಮಾಡಬಲ್ಲಿರಿ" ಎಂದ ಬೀರಬಲ್.

ಅಕ್ಬರ್ ಸಂತೋಷಪಟ್ಟು ಬೀರಬಲ್ಲನ ವಿರೋಧಿಯನ್ನು ನೋಡಿ, "ಇನ್ನು ನೀನು ಸುಮ್ಮನಿರು" ಎಂದ.

ಎನ್.ಆರ್.ಎನ್.

# ಜಟಕಾ ಜಬ್ಬಾರ್ ಸಾಬಿ

*(ವಿ.ಮ. ಶ್ರೀಧರಮೂರ್ತಿ ಅವರ 'ನೆರೆಹೊರೆಯವರು' ಪುಸ್ತಕದಿಂದ.)*

ಮಳೆಗಾಲದ ಒಂದು ಸಂಜೆ. ಮನೆಗೆ ಹೊರಡುವ ಸಿದ್ಧತೆಯಲ್ಲಿದ್ದಾಗ ಜಟಕಾ ಗಾಡಿಯೊಂದು ಬಂದು ಅಂಗಡಿ ಮುಂದೆ ನಿಂತಿತು. ಆಗ ನಾನೊಂದು ಪುಸ್ತಕದ ಅಂಗಡಿ ಇಟ್ಟಿದ್ದೆ. ದಿನವೆಲ್ಲಾ ಕಾದರೂ 5-10 ರೂ. ವ್ಯಾಪಾರವಾಗುತ್ತಿರಲಿಲ್ಲ. ಅಂಥದ್ದರಲ್ಲಿ, ಮಳೆಗಾಲದ ಸಂಜೆ, ಬೆಳಗಿನಿಂದ ಜಡಿ, ಆ ಹೊತ್ತಿನಲ್ಲಿ ಜಟಕಾ ಮಾಡಿಕೊಂಡು ಅಂಗಡಿಗೆ ಬರುವಂಥ ಗಿರಾಕಿ ಯಾರಿರಬಹುದು ಎಂಬ ಕುತೂಹಲದಿಂದ, ಕ್ಯಾಷ್ ಬುಕ್ಕನ್ನು ಮತ್ತೆ ಮೇಜಿನ ಡ್ರಾನೊಳಕ್ಕೆ ಸೇರಿಸುತ್ತಿದ್ದ ಹಾಗೇ ಜಟಕಾ ಸಾರಥಿ ಸಾಧಾರಣ ತೂಕದ ಮೂಟೆ ಹೊತ್ತು ತಂದು, ಇಳಿಸಿದ. ಇಳಿಸಿ ನನ್ನತ್ತ ನೋಡಿ "ಅಬೀ ಏಕ್ ಹೈ..." ಎಂದು ಮತ್ತೊಂದನ್ನು ತರಲು ಹೋದ.

ಅದು ಪುಸ್ತಕಗಳ ಮೂಟೆ. ಲೈಬ್ರರಿಯೊಂದಕ್ಕೆ ಸರಬರಾಜು ಮಾಡಲೆಂದು ಬೆಂಗಳೂರಿನಿಂದ ತರಿಸಿದ್ದುದು. ಬೆಂಗಳೂರಿನ ಅಂಗಡಿಯವರು ಮಳೆಗಾಲವೆಂಬುದನ್ನು ಮರೆತೋ, ರೇಲುವೆ. ಇಲಾಖೆಯವರಿಗೆ ಇಲ್ಲದ ಶ್ರದ್ಧೆ ಇದೆ ಎಂದು ಭಾವಿಸಿಯೋ ಕೇವಲ ಹಳೇ ಪೇಪರ್ ಸುತ್ತಿ, ಒಂದೇ ಪದರದ ತೆಳ್ಳನೆಯ ಗೋಣಿಯನ್ನು ಹಾಕಿ ಹೊಲಿಸಿದ್ದರು. ಅದು ಆ ಮುಂಜಾನೆಯೇ ಚಿತ್ರದುರ್ಗಕ್ಕೆ ಬಂದು, ರೇಲುವೆ ನಿಲ್ದಾಣದ ವರಾಂಡದಲ್ಲಿ ಎಸೆಯಲ್ಪಟ್ಟು, ಇರಚಲು ಬಿದ್ದು ಗೋಣಿ ಎಲ್ಲಾ ನೆಂದು ಹೋಗಿತ್ತು.

ಜಟಕಾಸಾಬಿ ಇನ್ನೂ ಒಂದು ಅಂಥ ಸ್ಥಿತಿಯಲ್ಲೇ ಇದ್ದ ಮೂಟೆ ತಂದಿಳಿಸಿ, ಬೋಳು ತಲೆಗೆ ಸುತ್ತಿದ್ದ ಹರಕಲು ಟವಲನ್ನು ತೆಗೆದು, ಕೊಡವಿ, ಮುಖ ಒರಿಸಿಕೊಂಡು.

"ಆಪ್‌ಕಾ ನೈ ಕ್ಯಾ ಸಾಬ್ ಎ ಪಾರ್ಸಲ್?"

—ಎಂದು ಪ್ರಶ್ನಿಸಿದ. ನನಗೆ ಉರ್ದು ಬರದು. ಆದರೆ ಜಟಕಾ ಸಾಬಿ ಮಾತು ಅರ್ಥ ಮಾಡಿಕೊಳ್ಳಬಲ್ಲಷ್ಟು ಪಾಂಡಿತ್ಯವಿದೆ.

"ನಂದೇ ಸರಿ, ರಶೀತಿ ಎಲ್ಲಿತ್ತು ನಿನಗೆ ಇದನ್ನು ತರಲು?"

—ಎಂದು ಕೇಳಿದೆ. ರೇಲುವೆ ರಶೀತಿ ಬ್ಯಾಂಕ್ ಮೂಲಕ ಬರಬೇಕಾಗಿತ್ತು. ಅದು ಬಂದಿದೆ ಎಂದು ನನಗೆ ಬ್ಯಾಂಕಿನಿಂದ ತಿಳುವಳಿಕೆ ಬಂದಿರಲಿಲ್ಲ. ಅದು ಬರದೆ ಪಾರ್ಸಲ್ ಬಂದದ್ದು ನನಗೆ ತಿಳಿಯುವಂತಿರಲಿಲ್ಲ. ತಿಳಿಯದೆ



(ಚಿತ್ರಕೃಪೆ: ಆರ್. ಮೂರ್ತಿ)

"...ಎಷ್ಟು ಗಾಡಿ ಇಟ್ರೂ ನನ್ಗೆ ರಾಗಿ ಮುದ್ದೆ... ನನ್ನ ಗೋಡಾಗೆ ಹುಳ್ಳೀನೇ ಗತಿ ಅಲ್ವ"

ನಾನವುಗಳನ್ನು ತಂದುಕೊಳ್ಳಲೂ ಸಾಧ್ಯವಿರಲಿಲ್ಲ. ಎಂಥ ವಿಚಿತ್ರ ಪರಿಸ್ಥಿತಿ.

"ರಶೀತಿ ನಿಮ್ಗೆ ಬಂದಿಲ್ಲಾ?"—ಎಂದ ಸಾಬಿ.

"ಇಲ್ಲ..."

"ಬತ್ತೈತಿಬಿಡಿ...ನಾಳೆ, ನಾಳೆ ತೀನ್ ಬಜೇಗೆ ಬತ್ತೀನಿ...ರಶೀತಿ ತಗೊಂಡು ಹೋಗೋಕೆ" —ಎಂದು ಹೊರಟ.

"ತಡೆಯಯ್ಯ, 'ರಶೀತಿ ಇಲ್ದೆ ಅದ್ಹ್ಯಾಗೆ ಕೊಟ್ರಯ್ಯ ನಿನಗೆ ಈ ಪಾರ್ಸಲ್ಲು? ನಂದೂ ಅಂತ ನಿಂಗೆ ಹ್ಯಾಗೆ ಗೊತ್ತಾಯ್ತು...?"

—ಎಷ್ಟೋ ಸಂದೇಹಗಳು ನನಗೆ.

"ಇಂದು ಬೆಳಗ್ಗೆ ರೈಲಿನಾಗೆ ಬಂದೈತೆ; ಇಸ್ಟೇಷನ್ ಮುಂದೆ ಬಿಸಾಕಿದ್ರು...ಸಂಜೆವರ್ಗೂ ನೋಡ್ದೆ... ಯಾರೂ ಬರ್ಲಿಲ್ಲ... ಮಳ್ಳಾಗೆ

ಕಿತಾಬ್ ಖರಾಬಾಗ್ತವೆ ಅಂತ ಮಾಷ್ಟರ್ಗೆ ಕೇಳ್ಲಿ ...ರಶೀತಿ ತಂದು ಕೊಡ್ತೀನಿ ಕೊಡ್ರಿ ಅಂತ... ಕೊಟ್ರು... ತಂದೆ... ನೀವು ಗೊತ್ತಿಲ್ಲ ನಂಗೆ... ಎಷ್ಟು ಸಾರಿ ಹೊಡ್ದಿಪ್ನಿ ಗಾಡಿ ನಿಮ್ಗೆ"—ಎಂದ.

"ನಾನ್ ರಶೀತಿ ಕೊಡ್ಲಿಲ್ಲ ಇದ್ರೆ ಏನ್ ಮಾಡ್ತಿ?"

—ಎಂದು ಕೇಳಿದೆ.

"ಅರೆ... ಎಲ್ಲಿ ವೋಗ್ತದೆ ಸಾಮಿ... ಈ ಗರೀಬನ್ಗೆ ವೊಟ್ಟೆಮೇಲೆ ಬಡೀತಿರಾ?... ನೀವು ಅಂತೋರಲ್ಲ ಅಂತಾನೆ ತಂದಿದ್ನಿ... ಬತ್ತೀನಿ ಸಾಮಿ..."

—ಎಂದು ಸಲಾಮ್ ಹೊಡೆದು ಹೋದ.

ನಾನು ಆ ರಾತ್ರಿ ಬಹಳ ಹೊತ್ತು ಇವನ ವಿಷಯವನ್ನೇ ಯೋಚಿಸಿದೆ. ಎಂಥ ವ್ಯಕ್ತಿ ಇವನು?

ಪುಸ್ತಕ ಮಳೆಯಲ್ಲಿ ನೆನೆಯುತ್ತವೆ ಎಂದು ರಶೀತಿ ಇಲ್ಲದೆ, ಪುಸ್ತಕದ ಮಾಲಿಕರು ಕೇಳದೆಯೇ ಅಪಾಯಕಾರಿಯಾದಂಥ ಜವಾಬ್ದಾರಿಯನ್ನು ಹೊತ್ತಿದ್ದಾನಲ್ಲ?... ಇವನ ಆಸಕ್ತಿ ಏನಿರಬಹುದು? ಕೇವಲ ಉಪಕಾರ ಮಾಡಬೇಕೆಂಬ ಇಚ್ಛೆಯೆ? ನಂಬಿಸಿ ದ್ರೋಹ ಬಗೆವ ಸಂಚೆ? ಎಂದೆಲ್ಲ ಯೋಚಿಸಿದೆ. ಆದರೆ ಕಾಲಕ್ರಮದಲ್ಲಿ ಅವನು ಶ್ರದ್ಧಾಶೀಲ ಉಪಕಾರಿ ಎಂಬುದು ಅರಿವಾಯಿತು.

ಅನಿರೀಕ್ಷಿತವಾಗಿ ರಶೀತಿ ಬರುವುದು 3-4 ದಿನ ತಡವಾಗಿ ಬಿಟ್ಟಿತು. ಜಬ್ಬಾರ್ ಏನೂ ಕಳವಳವನ್ನಾಗಲಿ, ಭೀತಿಯನ್ನಾಗಲಿ ತೋರಿಸಿಕೊಳ್ಳಲಿಲ್ಲ. ಮೂರನೆಯ ದಿನವೂ ರಶೀತಿ ಬರಲಿಲ್ಲವೆಂದು ಅವನಿಗೆ ಹೇಳಬೇಕಾದಾಗ, ನನಗೇ ಸಂಕೋಚವಾಯಿತು.

"ಅರೆ ಬೇಪಾರ್ದಾಗೆ ಆಗ್ತೈತೆ... ಹಿಂಗೆಲ್ಲ... ಬತ್ತೈತೆ ಬಿಡಿ"— ಎಂದು ಬಿಟ್ಟ.

ಆಗಿನಿಂದ ಜಬ್ಬಾರ್ ಜಟಕಾ ನನ್ನ ಖಾಸಾ ಜಟಕಾ ಆದಂತಾಗಿ ಬಿಟ್ಟಿತು. ಎಲ್ಲಿ ಹೋಗಲಿ, ಬರಲಿ ಅವನಿಗೇ ಹೇಳಿ ಕಳಿಸುತ್ತಿದ್ದೆ. ಇದರಿಂದ ನನ್ನ ಮಿತ್ರರು, ಬಂಧುಗಳ ಪರಿಚಯವೂ ಅವನಿಗಾಯಿತು. ಪರಸ್ಥಳಗಳಿಂದ ಬರುವವರನ್ನು ಗುರ್ತಿಸಿ,

"ನಮ್ಮ ಮೂರ್ತಿಸಾಬ್ ಮನೇಗೆ ಅಲ್ವ ಸಾಮಿ? ಬನ್ನಿ"

—ಎಂದು ಕರೆತಂದು ಬಿಡುತ್ತಿದ್ದ-ಬಾಡಿಗೆಗೆ ತಕರಾರು ಮಾಡದೆ. ಒಮ್ಮೆ ನನ್ನ ಮಿತ್ರ ಅತಿಥಿಗಳೊಬ್ಬರು ಕೀಟಲೆ ಮಾಡಲೆಂದೋ, ಪರೀಕ್ಷಿಸಲೆಂದೋ, ರೂಪಾಯಿ ಕೊಡುವ ಸಂದರ್ಭದಲ್ಲಿ ಆರೇ ಅಣೆ ಕೈಗೆ ಹಾಕಿ "ಅಷ್ಟೇ ಹೋಗು" —ಎಂದು ಬಿಟ್ಟರಂತೆ. "ತಮ್ಮ ಖುಷಿ ಸಾಮಿ" —ಎಂದು ಅಸಮಾಧಾನವನ್ನೇ ತೋರದೆ ಸಲಾಮ್ ಹಾಕಿ ಹೋದನಂತೆ. ಅವರೇ ನನ್ನಲ್ಲಿ ಈ ವಿಷಯ ಹೇಳಿದರೂ, ಇವನು ಬಾಯಿ ಬಿಡಲಿಲ್ಲ.

"ಹೀಗೆ ಮಾಡಿದರೆ, ನೀನು ಬದುಕೋದು ಹೇಗೆ? ನನ್ನ ಸ್ನೇಹಿತರಾದರೆ ಅಷ್ಟು ದಾಕ್ಷಿಣ್ಯ ವೇಕೆ?"—ಎಂದೆ.

"ಅಲ್ಲಾ ದೊಡ್ಡೋನು ಸಾಮಿ... ನಮ್ಮ ಬದುಕು ಅವನ್ದು ಅಲ್ವ ಜವಾಬ್ದಾರಿ... ಆ ಸಾಮಿ ಆರಾಣೆ ಕೊಟ್ರು... ಮತ್ತೊಬ್ರು ಆರಾಣೆ ಕೊಡೋವಾಗ ಎಂಟಾಣೆ ಕೊಡ್ತಾರೆ ...ನಮ್ಗೆ ಬರೋದು ಧರ್ಮ ಹೆಂಗೋ ಬರ್ತದೆ."

—ಎಂದ ಅನಾಸಕ್ತನಾದ ಕರ್ಮಯೋಗಿಯಂತೆ.

ಆರು ಮಕ್ಕಳು, ಪತ್ನಿ ಮತ್ತು ಎರಡು ಕುದುರೆಗಳ ದೊಡ್ಡ ಸಂಸಾರ ಜಬ್ಬಾರನದು. ಮುಂಜಾನೆ ಆರರಿಂದ ರಾತ್ರಿ ಹತ್ತರವರೆಗೂ ಅವಿಶ್ರಾಂತ ದುಡಿಮೆ. ಮಧ್ಯಾಹ್ನ ಎರಡು ಗಂಟೆ ರೈಲಿಗೆ ನಿಲ್ದಾಣಕ್ಕೆ ಹೋಗುವಾಗ ಕುದುರೆ ಬದಲಾಯಿಸುವನು; ಆದರೆ ತಾನು ಮಾತ್ರ ಅವಿಶ್ರಾಂತವಾಗಿ ದುಡಿಯುವನು. ಅಷ್ಟು ದುಡಿದರೂ ಆ ಕುದುರೆಗಳಿಗೂ ತನ್ನ ಮಕ್ಕಳಿಗೂ ಸಾಕಾಗುತ್ತಿತ್ತೊ ಇಲ್ಲವೋ. ಮಗ ಪ್ರಾಪ್ತವಯಸ್ಕನಾಗುತ್ತಿದ್ದ ಹಾಗೆ—

"ಇನ್ನೊಂದು ಜಟಕಾ ತಗೋ. ಬೇಕಾದರೆ ಸೊಸೈಟಿಯಲ್ಲಿ ಸಾಲ ಕೊಡಿಸುತ್ತೇನೆ" —ಎಂದು ಒಮ್ಮೆ ಹೇಳಿದೆ.

"ಸಾಬ್, ನಿಮ್ದು ಪಿರೀತಿ... ಇರ್ಲಿ. ಸಾಲ ಮಾಡಿ ಗಾಡಿ ಮಡಗೋದು ಅಂದ್ರೆ... ಯಾವಾಗ್ಲೂ ಸಾಲದ್ದು ಚಿಂತೆ ಆಗಿ, ಕೆಟ್ಟ ಕೆಲಸ ಮಾಡ್ಬೇಕು ಅನ್ನೊ ಬುದ್ಧಿ ಹುಟ್ಟತೈತೆ...

ಬೇಡ ಸಾಮಿ... ಅಲ್ಲಾ ನಂದು ಎಷ್ಟು ಅಸ್ತಿ ಮಡಿಗವ್ನೆ ಅಷ್ಟೇ ನಂಗೆ ಸಿಕ್ತೈತೆ... ಎಷ್ಟು ಗಾಡಿ ಇಟ್ರೂ ನನ್ಗೆ ರಾಗಿಮುದ್ದೆ... ನನ್ನ ಗೋಡಾಗೆ ಹುಳ್ಳೀನೇ ಗತಿ ಅಲ್ವ? ರೂಪಾಯಿ ತಿನ್ನೋಕೆ ಬರ್ತದಾ?"—ಎಂದು ಬಿಟ್ಟ.

ಬಡತನ, ಕಾಯಕಷ್ಟಗಳು ಅವನ ಮಾನವೀಯತೆ, ಹಾಸ್ಯಪ್ರಿಯತೆಗಳಿಗೆ ಒಂದು ರೀತಿಯ ಮೆರಗು ಕೊಟ್ಟಿದ್ದವೆಂದೇ ನನ್ನ ಭಾವನೆ. ಒಮ್ಮೆ ಅವನ ಕುದುರೆಯೊಂದನ್ನು ಸೀನೀರು ಹೊಂಡದ ಬಳಿ ಪುಲಿ ಹೊಡೆದು ಬಿಟ್ಟಿತು. ಜರೂರು ಬೇರೆ ಕುದುರೆ ಕೊಂಡುಕೊಳ್ಳಬೇಕಾಯಿತು ಅವನು.

ನಮ್ಮೂರಿನ ಶಾಸ್ತ್ರಿಗಳೊಬ್ಬರು ಸಮೀಪದ ಹಳ್ಳಿಯ ಬಳಿಯ ತಮ್ಮ ಜಮೀನಿಗೆ ಹೋಗಿ ಬರಲೆಂದು ಒಂದು 'ಕುದುರೆ' ಇಟ್ಟುಕೊಂಡಿದ್ದರು. ಅದು ಉಚ್ಚೈಃಶ್ರವವೂ ಅಲ್ಲ; ಜಟಕಾ ಕುದುರೆಯೂ ಅಲ್ಲ. 'ಆಚಾರ್ರ ತಟ್ಟು' ಎಂಬ ಪ್ರಾಣಿ ವಿಶೇಷಕ್ಕಿಂತ ಸ್ವಲ್ಪ ಉತ್ತಮವೆನ್ನಬಹುದಾದರೂ, ಸವಾರಿ ಕುದುರೆಯೂ ಆಗಿರಲಿಲ್ಲ. ಶಾಸ್ತ್ರಿಗಳು ಈ ಕುದುರೆಯ ಮೇಲೆ ಕುಳಿತು ಹೊರಟರೆ, ದಾರಿಯುದ್ದಕ್ಕೂ, ಯಾರೇ "ನಮಸ್ಕಾರ" ಎನ್ನಲಿ, ಕುದುರೆ ನಿಲ್ಲಿಸಿ, ಮಾತನಾಡಿಸಿದವರ ಯೋಗಕ್ಷೇಮ ವಿಚಾರಿಸಿ, ಪುನಃ "ನಮಸ್ಕಾರ" ಪೂರ್ವಕ ಬೀಳ್ಕೊಟ್ಟು ಮುಂದೆ ಹೊರಡುವರು—ಈ ಪದ್ಧತಿ ಕುದುರೆಗೂ ಚೆನ್ನಾಗಿ ಅಭ್ಯಾಸವಾಗಿ ಬಿಟ್ಟು ಅದು ಹೋಗುತ್ತಿರುವಾಗ ದಾರಿಯಲ್ಲಿ "ನಮಸ್ಕಾರ" ಎಂಬ ಶಬ್ದ ಕಿವಿಗೆ ಬಿದ್ದ ಕೂಡಲೇ ನಿಂತು ಬಿಡುತ್ತಿತ್ತು. ಪುನಃ "ನಮಸ್ಕಾರ ಬರ್ತೀನಿ" ಎಂದು ಕೇಳಿಸಿದ ಮೇಲೆಯೇ ಮುಂದೆ ಹೊರಡುತ್ತಿತ್ತು. ಜಬ್ಬಾರ್ ಈ ಕುದುರೆ ಕೊಂಡ. ಇದನ್ನು ಜಟಕಾಕ್ಕೆ ಹೂಡಿ ಅವನ ನಿತ್ಯಯಾತ್ರೆ ಆರಂಭಿಸಿದ ಮೇಲೆಯೇ ಅವನಿಗೆ ಅದರ "ನಮಸ್ಕಾರ"ದ ಚಾಳಿ ಗೊತ್ತಾದುದು. ಬಹಳ ಅವಸರವೆಂದು ಎಲ್ಲಾದರೂ ಹೋಗುತ್ತಿರುವಾಗ, ರಸ್ತೆಯಲ್ಲಿ ಯಾರಾದರೂ "ನಮಸ್ಕಾರ" ಅಂದದ್ದು ಕಿವಿಗೆ ಬಿದ್ದರೆ ಸಾಕು-ನಿಂತುಬಿಡುತ್ತಿತ್ತು. ಪುನಃ "ನಮಸ್ಕಾರ ಹೋಗಿ ಬರ್ತೀನಿ"—ಅಂದರೇನೆ ಅದು ಮುಂದಕ್ಕೆ ಹೆಜ್ಜೆ ಇಡುತ್ತಿದ್ದುದು.

ಈ ಕುದುರೆ ಕಟ್ಟಿದ ಜಟಕಾದಲ್ಲಿ ಒಮ್ಮೆ ರೇಲುವೇ ಸ್ಟೇಷನ್ನಿನಿಂದ ಕೆಲ ಮಿತ್ರರೊಂದಿಗೆ ಬರ್ತಾ ಇದ್ದೆ. "ಹೇಗೆ ಜಬ್ಬಾರ್ ನಿನ್ನ ಹೊಸ ಕುದುರೆ?" ಎಂದು ಕೇಳಲು, "ಐತೆ ಸಾಮಿ, ಪರವಾಗಿಲ್ಲ..." ಎಂದ. ಅಷ್ಟರಲ್ಲೇ ರಸ್ತೆ ಅಂಚಿನಲ್ಲಿ ಯಾರೋ ಯಾರಿಗೋ ಗಟ್ಟಿಯಾಗಿ, "ನಮಸ್ಕಾರ ರಾಯ್ರೆ" ಎಂದರು. ನಮ್ಮ ರಥ ನಿಂತು ಬಿಟ್ಟಿತು. ಜಪ್ಪಯ್ಯ ಅಂದರೂ ಮುಂದಕ್ಕೆ ಹೋಗದೆ. ಜಬ್ಬಾರ್ ಬಹುಶಃ ನಾವಿರುವುದನ್ನು ಮರೆತೋ, ಅಥವಾ ಅವನಿಗೂ ಅಂಟಿದ್ದ ಅಭ್ಯಾಸ ಬಲದಿಂದಲೋ —"ಅರೆ, ಬೊಮ್ಮನ್‌ಕೆ ಬಚ್ಚೆ...ತೇರಿ..." ಧಾರಾಳವಾಗಿ ಹೊಗಳಿ, ಕೆಳಕ್ಕಿಳಿದು, ಅದರ ಕಿವಿಯ ಹತ್ತಿರ "ನಮಸ್ಕಾರ ಬರ್ತೀನಿ" —ಎಂದು ಕೂಗಿದ. ಕೂಡಲೇ ಹೊರಟಿತಲ್ಲ, ರಥ!

ಇದನ್ನು ಕಂಡು ನಮಗೂ ಬಹಳ ನಗು ಬಂದುಬಿಟ್ಟಿತು. ನಮ್ಮ ನಗೆ ಅವನನ್ನೂ ಎಚ್ಚರಿಸಿತು. "ಮಾಫ್ ಕರ್‍ನಾ ಸಾಬ್..." ಎಂದು ಆರಂಭಿಸಿ, "ಬೊಮ್ಮನ್ಕೆ ಬಚ್ಚೆ"ಯ ಕತೆ ಹೇಳಿ ಮತ್ತಿಷ್ಟು ನಗಿಸಿದ. "ಇದನ್ನು ಶಾಸ್ತ್ರಿಗಳಿಗೇ ಕೊಟ್ಟುಬಿಟ್ಟು—ಬೇರೆ ಕುದುರೆ ತಗೋ"—ಎಂದೆ.

"ಉಂಟೇ ಸಾಬ್...ಜಾತಿ ಬಿಟ್ಟು ಜಾತೀಗೆ ಸೇರಿದ್ಮೇಲೆ ಮತ್ತೆ ಸೇರಿಸಿಕೊಳ್ತಾರಾ?... ನಿಮ್ಮೋರು..." ಎಂದು ನಕ್ಕ. ●



*ಒಂದು ಕೆಲಸವನ್ನು ಹೇಗೆ ಮಾಡಬೇಕೆಂದು ನಿಮಗೆ ಗೊತ್ತಿದ್ದು, ಅದನ್ನೇ ಇನ್ನೊಬ್ಬ ತಪ್ಪುತಪ್ಪಾಗಿ ಮಾಡುವುದನ್ನು ನೋಡುತ್ತ ಟೀಕಿಸದೆ ಸುಮ್ಮನಿರುವಷ್ಟು ಕಷ್ಟದ ಕೆಲಸ ಬೇರೊಂದಿಲ್ಲ.*

● ಟಿ.ಎಚ್. ವೈಟ್ ●

# ಪರಿವರ್ತನ



● ಜಿ.ವಿ. ಕಂಚುಗಾರ ●

ಬ್ರೆಬೋರ್ನ್ ಸ್ಟೇಡಿಯಂ ಹತ್ತಿರ ಭಾರಿ ಗದ್ದಲ. ಎಲ್ಲಿ ನೋಡಿದರೂ ಬಿಳಿ ಉಡುಪಿನ ಸಮವಸ್ತ್ರಧಾರಿಗಳು. ತಲೆಗೊಂದು ಟೋಪಿ ಬೇರೆ. ಕಾಂಗ್ರೆಸ್ ಸೆಂಟಿನರಿಗಾಗಿ ದೇಶದ ಮೂಲೆ ಮೂಲೆಯಿಂದ ಬಂದ ಇವರೆಲ್ಲಾ ಸರದಿ ಪ್ರಕಾರ ಬ್ರೆಬೋರ್ನ್ ಸ್ಟೇಡಿಯಂನ ಒಳ ಪ್ರವೇಶಿಸಲು ಆತುರರಾಗಿದ್ದರು. ಸ್ಪೆಷಲ್ ವಿಸಿಟರ್ಸ್, ಲೋಕಲ್ ವಿಸಿಟರ್ಸ್ ಇನ್ನೂ ಏನೇನೋ ಅಂತ ಎಲ್ಲಾ ವಿಂಗಡಿಸಿ ಒಂದೊಂದು ವರ್ಗದವರನ್ನು ಒಂದೊಂದು ಗೇಟಿನ ಮುಖಾಂತರ ಒಳಗೆ ಬಿಡುವ ವ್ಯವಸ್ಥೆ ಮಾಡಿಯೂ ಜನಸಂದಣಿ ನೂಕು ನುಗ್ಗಲು ಮಾತ್ರ ಏರುತ್ತಲೇ ಇತ್ತು. ಕಾಂಗ್ರೆಸ್ ಸೆಂಟಿನರಿಯ ಅದ್ದೂರಿ ವೈಭವವನ್ನು ನೋಡುವುದರೊಂದಿಗೆ ರಾಜೀವ ಗಾಂಧಿಯವರ ಭಾಷಣ ಕೇಳುವ ತವಕ ಜನರ ಮನಸ್ಸಿನಲ್ಲಿ ಒಂದು ರೀತಿಯ ಕುತೂಹಲ ಕೆರಳಿಸಿರಬೇಕು. ಜನ ಸಾಗರವೇ ಪ್ರವಾಹದೋಪಾದಿಯಾಗಿ

ಸ್ಟೇಡಿಯಂನತ್ತ ಮುನ್ನುಗ್ಗುತ್ತಿತ್ತು. ನಾನೂ ಅಷ್ಟೇ. ಕಾಂಗ್ರೆಸ್ ಕಾರ್ಯಕರ್ತರೊಬ್ಬರನ್ನು ಬಡಿದು ಗಿಟ್ಟಿಸಿಕೊಂಡಿದ್ದ ಸ್ಪೆಷಲ್ ಕಾರ್ಡಿನ ಆಧಾರದ ಮೇಲೆ ರಾಜೀವಗಾಂಧಿ ತಥಾ ಇನ್ನಿತರ ಕೆಲವು ಪ್ರಮುಖ ರಾಜಕೀಯ ಮುಖಂಡರನ್ನು ಬಹಳಷ್ಟು ಹತ್ತಿರದಿಂದ ನೋಡುವ, ಸಾಧ್ಯವಾದರೆ ಮಾತನಾಡಿಸುವ ಅವಕಾಶ ಹೊಂದಿದ ಸಂತೋಷದಲ್ಲಿ ಸ್ಟೇಡಿಯಂನ ಮೈನ್‌ಗೇಟಿನತ್ತ ಹೆಜ್ಜೆ ಹಾಕತೊಡಗಿದ್ದೆ. ಬ್ರೆಬೋರ್ನ್ ಸ್ಟೇಡಿಯಂ, ಮಹಾಲಕ್ಷ್ಮಿ ರೇಸ್ ಕೋರ್ಸ್ ಮುಂತಾದವುಗಳು ತಮ್ಮದಾದ ರೂಪು ಕಳಕೊಂಡು ತಿಂಗಳಿಗೂ ಮುಂಚಿನಿಂದ ಕಾಂಗ್ರೆಸ್ ಸೆಂಟಿನರಿಗಾಗಿ ಸಜ್ಜುಗೊಳ್ಳುತ್ತಿದ್ದುದು ಲಕ್ಷಾಂತರ ಜನರಂತೆ ನನ್ನಲ್ಲೂ ಒಂದು ರೀತಿಯ ಉತ್ಸುಕತೆ ಕೆರಳಿಸಿತ್ತು. ಮಹಾಲಕ್ಷ್ಮೀ ಹಾಗೂ ಚರ್ಚ್‌ಗೇಟ್ ಸ್ಟೇಷನ್‌ಗಳ ನಡುವೆ ಈ ಸಮಾರಂಭಕ್ಕಾಗಿಯೇ ಸ್ಪೆಷಲ್ ಟ್ರೈನ್ ಓಡಿಸಲಾಗುತ್ತದೆ ಅನ್ನುವುದನ್ನು ಬೇರೆ ಕೇಳಿದ್ದೆ. ಆದ್ದರಿಂದಲೇ ಇರಬೇಕು. ಇಂತಹ ಯಾವೊಂದೂ ಸಭೆ ಸಮಾರಂಭಗಳಲ್ಲೂ ಆಸಕ್ತಿಯಿಲ್ಲದ ನಾನು ಈ ಸಲ ಮಾತ್ರ ಚುರುಕಾಗಿದ್ದೆ.

ಸಾಲಿನಲ್ಲಿ ನಿಧಾನವಾಗಿ ಒಂದೊಂದೇ ಅಡಿ ಮುಂದಿಡುತ್ತಾ ಮುನ್ನುಗ್ಗುತ್ತಿದ್ದ ನಾನು ಒಂದೇ ಸಮನೆ ಕಿರುಚಿಕೊಳ್ಳುವ ವಾಹನಗಳ ಶಬ್ದಕ್ಕೆ ವಿಚಲಿತನಾಗಿ ರಸ್ತೆಯತ್ತ ಕಣ್ಣು ಹಾಯಿಸಿದೆ. ಸಿಗ್ನಲ್ ಸಿಕ್ಕಿದ ಭರದಲ್ಲಿ ರಸ್ತೆಯ ಮೇಲೆ ಇರುವೆ ಮುತ್ತಿದಂತಿದ್ದ ವಾಹನಗಳು ನಿಧಾನವಾಗಿ ಚಲಿಸಲಾರಂಭಿಸಿದ್ದವು. ರಸ್ತೆಯುದ್ದಕ್ಕೂ ಕಣ್ಣಾಡಿಸುತ್ತಿದ್ದಂತೆಯೇ ಇಂಪೋರ್ಟೆಡ್ ಕಾರೊಂದು ನನ್ನ ಗಮನ ಸೆಳೆಯಿತು. ಈ ತನಕ ನೋಡಿರದ ಹೊಸ ನಮೂನೆಯ ಕಾರು. ಬೂದು ಬಣ್ಣ. ಬಹುಶಃ ಒಳಗಡೆ ಟೆಲಿಫೋನಿನಿಂದ ಹಿಡಿದು ಎಲ್ಲಾ ಆಧುನಿಕ ಸೌಕರ್ಯಗಳೂ ಇರಬೇಕು ಎಂದು ಅಂದುಕೊಳ್ಳುತ್ತಿದ್ದಂತೆಯೇ ಕಾರು ಕಣ್ಮರೆಯಾಯಿತು. MAY-86 ಕಾರ್ ನಂಬರ್ ಮಾತ್ರ ಮನಸ್ಸಿನಲ್ಲುಳಿಯಿತು.

ನಾನು ನಿಂತ ಕ್ಯೂನ ಉದ್ದಕ್ಕೂ ಒಮ್ಮೆ ದೃಷ್ಟಿ ಹರಿಸಿ ಮಧ್ಯಾಹ್ನದೊಳಗೆ ಸ್ಟೇಡಿಯಂನ ಒಳಗೆ ಪ್ರವೇಶ ದೊರೆಯಿತೆಂದರೆ ನಾನೇ ಧನ್ಯ ಅಂತ ಒಂದೊಂದೇ ಅಡಿ ಮುಂದಿಡತೊಡಗಿದೆ. ಎಲ್ಲಿಗೂ ಹೋಗುವುದಿರಲಿ, ಟೈಮ್ ಪಾಸಿಗಾಗಿ ಯಾವಾಗಲೂ ಒಂದಲ್ಲ ಒಂದು ಪುಸ್ತಕ ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿದ್ದ ನನಗೆ ಆ ದಿನ ಬರಿಗೈಯಲ್ಲಿ ಹೋದದ್ದು ನಿಜಕ್ಕೂ ಮೂರ್ಖತನವಾಗಿ ಕಂಡಿತು. ಇಷ್ಟುದ್ದದ ಕ್ಯೂನಲ್ಲಿ ನಿಂತು ಸ್ಟೇಡಿಯಂನ ಒಳ ಪ್ರವೇಶಿಸುವುದರೊಳಗೆ ಏನಿಲ್ಲವೆಂದರೂ ಗಂಟೆ ಹತ್ತೋ ಹನ್ನೆರಡೋ ಆದೀತು. ಏನು ಮಾಡುವುದು ಅಂತ ಅತ್ತ ಇತ್ತ ಕಣ್ಣಾಡಿಸುತ್ತಿದ್ದಂತೆಯೇ ಪುನಃ ಅದೇ ಕಾರು ಹಸಿರು ಸಿಗ್ನಲ್‌ಗಾಗಿ ರಸ್ತೆಯ ಮೇಲೆ ನಾನಿಂತ ಸ್ಥಳದಿಂದ ಕೆಲವೇ ಅಡಿ ಅಂತರದಲ್ಲಿ ನಿಂತಿರುವುದು ಕಂಡುಬಂತು. ಕಾರಿನ ಕೂಲಿಂಗ್ ಗ್ಲಾಸಿನ ಸ್ಲೈಡಿಂಗ್ ಡೋರ್ ಸರಿಸಿ ಡ್ರೈವರ್ ಹೊರಗಡೆ ನಿಧಾನವಾಗಿ ಇಣುಕಿ ನೋಡುತ್ತಿದ್ದ. ಕಪ್ಪಗಿನ ದಪ್ಪ ಗುಂಗುರು ಕೂದಲುಳ್ಳ ನೀಗ್ರೋ ಡ್ರೈವರ್‌ನ ಕಪ್ಪು ಮುಖವನ್ನು ಸರಿಯಾಗಿ ಗಮನಿಸುವ ಮೊದಲೇ ಸಿಗ್ನಲ್ ಸಿಕ್ಕಿ ಕಾರುಗಳ ಕಿರುಚಾಟ ಪ್ರಾರಂಭವಾದ್ದರಿಂದ ಸ್ಲೈಡಿಂಗ್ ಡೋರ್ ಮುಚ್ಚಿಕೊಂಡಿತು. ಎರಡನೇ ನಿಮಿಷದಲ್ಲಿ ಕಾರು ಮತ್ತೆ ಕಣ್ಮರೆಯಾಯಿತು. ನಾನು ಮೂಕ ವಿಸ್ಮಿತನಾದೆ. ಹತ್ತು ಹದಿನೈದು ನಿಮಿಷಗಳ ಹಿಂದೆ ಇದೇ ರೋಡಿನಲ್ಲಿ ಹಾದು ಹೋದ ಈ ಕಾರು ಪುನಃ ಈ ರಸ್ತೆಯಲ್ಲಿ ಅದೂ ಇಷ್ಟೊಂದು ಅಲ್ಪ ಕಾಲಾವಧಿಯಲ್ಲಿ ಯಾಕೆ ಬಂದಿರಬೇಕು ಅಂತ ಯೋಚನೆಗಿಟ್ಟುಕೊಂಡಿತು.

ಆಪರೇಷನ್ ಡೇ ಬ್ರೇಕ್ ಇದ್ದೀತೇ? ಮೈನ್ ಗೇಟಿಗೆ ಇಷ್ಟೊಂದು ಸಮೀಪದಲ್ಲಿ ಬಂದು ನಿಂತುಕೊಂಡಿದೆಯೆಂದರೆ ಏನಾದರೂ ಕುತಂತ್ರ ಇರಬೇಕು. ಯಾರಾದರೂ ಪೊಲಿಟಿಕಲ್ ಲೀಡರ್‌ನ ಕೊಲೆಗೆ ಸಂಚು ನಡೆದಿರಬಹುದು. ಇತ್ತೀಚೆಗೆ ಇಂತಹ ಹೇಯ ಕೃತ್ಯಗಳು ದೇಶದುದ್ದಕ್ಕೂ ವಿಪರೀತವಾಗಿವೆ. ಭಯೋತ್ಪಾದಕ ತಂಡ ಸತತ ಚಟುವಟಿಕೆಯಲ್ಲಿದೆ. ಮೊನ್ನೆ ಮೊನ್ನೆ ಮೇಡಮ್ ಕಾಮಾ ರೋಡಿನಲ್ಲಿ ಬ್ರಿಟಿಶ್ ಡೆಪ್ಯೂಟಿ ಹೈ ಕಮೀಷನರನ್ನು ನಸುಕಿನಲ್ಲೇ ಗುಂಡಿಕ್ಕಿ ಕೊಂದಮು

ಮನಸ್ಸಿನಲ್ಲಿ ಇನ್ನೂ ಅಚ್ಚ ಹಸುರಾಗಿಯೇ ಇದೆ. ಗುಂಡಿಕ್ಕಿ ಕೊಂದವರು ಯಾವ ರೀತಿಯಲ್ಲಿ ತಮ್ಮ ಕಾರ್ಯದಲ್ಲಿ ಯಶಸ್ವಿಯಾದರು ಎನ್ನುವುದು ಯಾರಿಗೆ ಗೊತ್ತಿಲ್ಲ. ಮೆಟಲ್ ಡಿಟೆಕ್ಟರ್ ಅದು ಇದು ಅಂತ ಪೊಲೀಸ್ ಪಡೆ ಎಷ್ಟು ಮುತುವರ್ಜಿ ವಹಿಸಿದರೂ ದೇಶದ್ರೋಹಿ ಹಂತಕರ ಕೈಯಿಂದ ಪಾರಾಗುವುದೆಂದರೆ ಅಷ್ಟು ಸುಲಭದ ಮಾತಲ್ಲ. ಪ್ರಧಾನಿಯವರ ಮೇಲೆ ಮೊದಲೇ ಹಲವರಿಗೆ ಕಣ್ಣಿದೆ. ಯಾವುದೂ ಅರ್ಥವಾಗುತ್ತಿಲ್ಲ. ಕಾರಿನಲ್ಲಿ ಇನ್ನೂ ಯಾರ್‍ಯಾರಿದ್ದಾರೋ, ಏನೇನಿದೆಯೋ, ಸ್ಟೆನ್‌ಗನ್ ಇಟ್ಟುಕೊಂಡಿದ್ದಾರೋ ಏನು ಕತೆಯೋ ಯಾರಿಗೆ ಗೊತ್ತು.

ಹೀಗೆಯೇ ನನ್ನ ಯೋಚನಾ ಲಹರಿ ಹರಿಯುತ್ತಿದ್ದಂತೆಯೇ ನಂಬಲಿಕ್ಕೇ ಸಾಧ್ಯವಾಗದಂತೆ ಮೂರನೆಯ ಸಲ ರೊಯ್ಯನೇ ಅದೇ ಕಾರು MAY-86 ಪಾಸಾಗಿ ಹೋಯಿತು. ಈ ಸಲ ಹಸಿರು ಸಿಗ್ನಲ್ ಇದ್ದುದರಿಂದ ಕಾರು ನಿಲ್ಲುವ ಗೋಜಿಗೆ ಹೋಗಲಿಲ್ಲ. ನೇರವಾಗಿ ಮುಂದಕ್ಕೆ ಓಡಿತು.

ಯಾರೋ ಪೊಲಿಟಿಕಲ್ ಲೀಡರ್‌ನ ಮೇಲೆ ಇದರ ಕಣ್ಣು ಇದ್ದದ್ದು ಸ್ಪಷ್ಟ. ಇನ್ನು ನಾನು ಸುಮ್ಮನಿರುವುದು ತರವಲ್ಲ. ಪೊಲೀಸರಿಗೆ ರಿಪೋರ್ಟ್ ಮಾಡಬೇಕು. ಅಜಾದ್ ಮೈದಾನ್ ಪೊಲೀಸ್ ಸ್ಟೇಷನ್ನಿಗೆ ಇನ್‌ಫಾರ್ಮ್ ಮಾಡುವುದು ಒಳ್ಳೆಯದು. ಇಲ್ಲ ಕಂಟ್ರೋಲ್ ರೂಮಿಗೆ ತಿಳಿಸಬೇಕು. ಹಗಲು ಹೊತ್ತಿನಲ್ಲಿ ನನ್ನ ಕಣ್ಣೆದುರಿನಲ್ಲೇ ನಡೆಯಬಹುದಾದ ಅಮಾನುಷ ಕೃತ್ಯವೊಂದನ್ನು ತಡೆದು ನಿಲ್ಲಿಸಬೇಕು. ನೀಚರಿಗೆ ಶಿಕ್ಷೆಯಾಗಬೇಕು. ಈ ಕೃತ್ಯದ ಹಿಂದೆ ಅಡಗಿರುವ ಕಾಣದ ಕೈಗಳಿಗೆ ಕೋಳ ಬೀಳಬೇಕು.

ಯೋಚಿಸುತ್ತಾ ಸಾಗಿದ್ದ ನನ್ನ ಮನಸ್ಸು ಸೀಮಿತದಲ್ಲಿರಲಿಲ್ಲ. ಸ್ಟೇಡಿಯಂನ ಒಳ ಹೋಗಲಿಕ್ಕಾಗಿ ನಿಂತಿದ್ದ ಲೈನನ್ನು ಬಿಟ್ಟು ಅದಾಗಲೇ ಹೊರಬಂದಿದ್ದೆ. ಮೈನ್ ಗೇಟಿನಿಂದ ಅಷ್ಟು ದೂರದಲ್ಲಿ ಟೆಂಪರರಿಯಾಗಿ ಕಟ್ಟಿದ್ದ ಪೊಲೀಸ್ ಚೌಕಿ ಕಣ್ಣಿಗೆ ಬಿದ್ದು, ಇವರಿಗೆ ತಿಳಿಸಿ ಮುಂದಿನ ವಿಷಯ ಅನಂತರ ವಿಚಾರಿಸುವುದು ಅಂತ ಅತ್ತ ಧಾವಿಸಿದೆ. ಕಳೆದ ಒಂದರ್ಧ ಗಂಟೆಯಲ್ಲಿ ನಾನು ಕಂಡದ್ದನ್ನೆಲ್ಲಾ ಸವಿಸ್ತಾರವಾಗಿ ವಿವರಿಸಿದೆ. ನಾವು ಈ ವಿಷಯದಲ್ಲಿ ಅಲಕ್ಷ್ಯ ತೋರಿಸುವುದು ಸರಿಯಲ್ಲ. ಆಮೇಲೆ ಪಶ್ಚಾತ್ತಾಪ ಪಡಬೇಕಾದೀತು ಅಂತ ಅವರಿಗೆ ಮನದಟ್ಟಾಗಿರಬೇಕು. ಪ್ರಧಾನಿ ಇಂದಿರಾಗಾಂಧಿಯವರು ಕಾವಲು ಭಟರ ಕೈಯಿಂದಲೇ ಹತ್ಯೆಗೊಂಡದ್ದು ಅವರಿಗೂ ಗೊತ್ತಿದ್ದ ವಿಷಯ ತಾನೆ? ತಡ ಮಾಡಲಿಲ್ಲ. ನನ್ನ ಹೆಸರು ಹಾಗೂ ವಿಳಾಸ ನೋಟ್ ಮಾಡಿಕೊಂಡು ಕುಳಿತುಕೊಳ್ಳಲಿಕ್ಕೆ ಆಸನವೊಂದನ್ನು ನೀಡಿ ತಕ್ಷಣ ಕಾರ್ಯ ಪ್ರವೃತ್ತರಾದರು.

ನೇತಾಜಿ ಸುಭಾಸಚಂದ್ರ ರೋಡ್ ಹಾಗೂ ವೀರ ನರಿಮನ್ ರೋಡ್ ಕೂಡುವಲ್ಲಿನ ಮೈನ್ ಸಿಗ್ನಲ್ ಹತ್ತಿರ ಕಾರು ಪೊಲೀಸರ ಕೈಗೆ ಸಿಕ್ಕಿಬಿಟ್ಟಿತು. ಪರೀಕ್ಷಿಸಲಾಗಿ ಒಳಗಡೆ ಸ್ಟೆನ್‌ಗನ್‌ವುಳ್ಳ ಸಿಖ್ ಭಯೋತ್ಪಾದಕರಿಬ್ಬರು ಕುಳಿತಿರುವುದು ಗೋಚರಿಸಿ ಕ್ಷಣಾರ್ಧದಲ್ಲಿ ಅವರನ್ನು ಬಂಧಿಸಲಾಯಿತು. ಯಾರನ್ನೋ ಕೊಲ್ಲಲು ಹೊಂಚು ಹಾಕಿಕೊಂಡಿರುವುದು ಸಾಬೀತಾದರೂ ಇಂಥವರೇ ಅಂತ ಅವರು ಹೆಸರು ಹೇಳಲು ನಿರಾಕರಿಸಿದುದರಿಂದ ಬಾಯಿ ಬಿಡಿಸಲಿಕ್ಕಾಗಿ ಅವರಿಬ್ಬರನ್ನೂ ಕಸ್ಟಡಿಗೆ ಕರೆದೊಯ್ಯಲಾಯಿತು. ಡ್ರೈವರನನ್ನು ದಸ್ತಗಿರಿ ಮಾಡಲಾಯಿತು. ಒಂದು ಬಹುದೊಡ್ಡ ಗಂಡಾಂತರದಿಂದ ಪಾರು ಮಾಡಿದ ಕಾರಣಕ್ಕಾಗಿ ಪ್ರಧಾನಿಯವರ ಹಸ್ತದಿಂದ ನನಗೆ ಒಂದು ಲಕ್ಷ ರೂಪಾಯಿಯ ಬಹುಮಾನ ಕೊಡಲಾಗುವುದೆಂದೂ ನಾನು ಕೂಡಲೇ ವೇದಿಕೆಗೆ ಬರಬೇಕೆಂದೂ ಸ್ಟೇಡಿಯಂನ ಹೊರಗೂ ಕೇಳುವಂತೆ ಅನೌನ್ಸ್ ಮಾಡಿದಾಗ ನನಗೆ ಮೈ ಝುಂ ಎಂದಂತಾಗಿ ಮೈ ಕೊಡವಿ ಹೊರಡಲನುವಾದೆ. ನನಗರಿವಿಲ್ಲದಂತೆ ಕಾವಲಾಗಿದ್ದ ಪೊಲೀಸರಿಬ್ಬರು ನನ್ನನ್ನು ಬಂದು ತಡೆದರು.

"ನಮ್ಮಿಬ್ಬರನ್ನು ನಿನಗೆ ಕಾವಲಾಗಿರಲು ಹೇಳಿದ್ದಾರೆ. ಹೊರಗೆ ಹೋಗುವುದಿದ್ದಲ್ಲಿ ನಾವೂ ಬರುತ್ತೇವೆ" ಅಂತ ಕುಳಿತು ಕುಳಿತು ಬೇಸರಗೊಂಡವರಂತೆ ಅವರೂ ಹೊರಡಲನುವಾದರು. ಇಷ್ಟೊಂದು ಮಾಹಿತಿ ಕೊಟ್ಟ ನನ್ನ ಜೀವಕ್ಕೆ ಅಪಾಯವಿದೆ ಅಂತ ಇವರಿಬ್ಬರನ್ನು

ನನ್ನ ಕಾವಲಿಗಾಗಿ ನೇಮಿಸಿರಬೇಕೆಂದುಕೊಳ್ಳು ತ್ತಿದ್ದಂತೆಯೇ ನನಗೆ ಒಂದೊಂದಾಗಿ ಎಲ್ಲವೂ ಅರ್ಥವಾಗಲಾರಂಭಿಸಿತು. ಏನೇನೋ ಎಲ್ಲಾ ಕನಸು ಕಾಣುತ್ತಿದ್ದ ನಾನು ಅಷ್ಟು ಹೊತ್ತಿಗೆ ವಾಸ್ತವಕ್ಕೆ ಬಂದಿದ್ದೆ.

ಸಿಐಡಿಗಳೊಂದಿಗೆ ಪೊಲೀಸ್ ವ್ಯಾನೊಂದು ನನ್ನ ಮಾತಿನ ಮೇರೆಗೆ ಹೊರಟು ಹೋದ ಕೆಲವೇ ಕ್ಷಣಗಳಲ್ಲಿ ಕುಳಿತಲ್ಲಿಯೇ ನನಗೆ ಜೋಂಪು ಹತ್ತಲಾರಂಭಿಸಿತ್ತು. ಜೋಂಪಿನಲ್ಲೇ ಕನಸು ಕಾಣಲಾರಂಭಿಸಿದ್ದೆ. ನಾನು ಕೊಟ್ಟ ಮಾಹಿತಿ ನಿಜವಾದಲ್ಲಿ ನನಗೆ ಭಾರಿ ಜನ ಸಮೂಹದೆದುರು ಸನ್ಮಾನ ಸಿಕ್ಕೀತು. ಪ್ರಧಾನಿಯವರು ಸ್ವತಃ ಮೈದಡವಿ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿಯಾರು. ಮರುದಿನ ದೇಶ ವ್ಯಾಪ್ತಂತ ಪ್ರಮುಖ ಪತ್ರಿಕೆಗಳೆಲ್ಲಾ ಮುಖ ಪುಟಗಳಲ್ಲೇ ನನ್ನ ಫೋಟೋ ಹಾಕಿ ನನ್ನ ಸಾಹಸ ಕಾರ್ಯವನ್ನು ಕೊಂಡಾಡಿಯಾವು. ರಾತ್ರಿ ಬೆಳಗಾಗುವುದರೊಳಗೆ ನಾನು ಲಕ್ಷಾಧೀಶನಾದೇನು. ಹೀಗೆಯೇ ನನ್ನ ಮನಸ್ಸು ಎತ್ತೆತ್ತಲೋ ಹರಿದು ಭಯೋತ್ಪಾದಕರನ್ನು ಹಿಡಿದಂತೆ, ನನ್ನ ಹೆಸರನ್ನು ವೇದಿಕೆಯಲ್ಲಿ ಅನೌನ್ಸ್ ಮಾಡಿದಂತೆ... ಎಲ್ಲಾ ಕಂಡದ್ದು ಬರಿ ಕನಸು ಅಂತ ತಿಳಿವಳಿಕೆಗೆ ಬರಲು ಹೆಚ್ಚು ಸಮಯ ತಾಗಲಿಲ್ಲ. ನನ್ನ ಮೂಢತನಕ್ಕೆ ಮನಸ್ಸಿನಲ್ಲೇ ಶಪಿಸಿಕೊಂಡು ಹೊರಡಲನುವಾದವ ಪೊಲೀಸರಿಬ್ಬರು ನನ್ನ ಹಿಂದೆಯೇ ಹೊರಡುತ್ತಿದ್ದುದನ್ನು ನೋಡಿ ಮತ್ತೆ ಸಿಟ್ಟಿಗೊಳಗಾದೆ.

ಕುಳಿತಲ್ಲೇ ಕುಳಿತು ಮೈ ಜಡ್ಡು ಹಿಡಿದಂತಾಗಿದ್ದ ನನಗೆ ಏಕಾದರೂ ಬೇಕಿತ್ತು ಈ ಅಧಿಕ ಪ್ರಸಂಗತನ ಅಂತ ಒಂದೆರಡು ಸಲ ಅನ್ನಿಸದೇ ಹೋಗಲಿಲ್ಲ. ಕಾಂಗ್ರೆಸ್ ಶತಮಾನೋತ್ಸವ ನೋಡಲಿಕ್ಕೆ ಅಂತ ಬಂದ ನನಗೆ ಯಾಕೆ ಬೇಕಿತ್ತು ಈ ಇಲ್ಲದ ಉಸಾಬರಿ. ತೆಪ್ಪನೆ ಹೋಗಿ ಒಳಗಿನ ಚಟುವಟಿಕೆಗಳನ್ನು ನೋಡಿ ಬಂದರಾಗಿತ್ತು. ಈಗ ನೋಡಿದರೆ ದಾರಿಯಲ್ಲಿ ಹೋಗುತ್ತಿದ್ದ ಮಾರಿಯನ್ನು ಮನೆಗೆ ಕರೆಸಿದಂತಾಯಿತು. ಪೊಲೀಸರ ಸಹವಾಸ ಈ ಜನ್ಮದಲ್ಲಿ ಬೇಡ ಅಂತ ನನ್ನ ಕೆಲವು ಆಪ್ತ ಮಿತ್ರರು ಹೇಳಿದ್ದ ಮಾತಿನಲ್ಲಿ ಉತ್ಪ್ರೇಕ್ಷೆ ಇಲ್ಲ ಅಂತ ಈಗ ಅರ್ಥವಾಗುತ್ತಿದೆ......

ಪೊಲೀಸ್ ಜೀಪೊಂದು ನಾನು ಕುಳಿತ ಪೊಲೀಸ್ ಚೌಕಿಯ ಹತ್ತಿರ ಬಂದು ನಿಲ್ಲುತ್ತಿದ್ದಂತೆಯೇ ನನ್ನ ಯೋಚನೆಗೆ ಭಂಗ ಬಂತು. ಜೀಪಿನಿಂದ ಇಳಿದ ಸಿಐಡಿ ಗಳನ್ನು ಕಾಣುತ್ತಿದ್ದಂತೆಯೇ ನಾನು ತಿಳಿಸಿದ ವಿಷಯವಾಗಿ ಪತ್ತೆಹಚ್ಚಲು ಹೋದವರು ಇವರೇ ಅನ್ನುವುದು ಮನದಟ್ಟಾಯಿತು. ನಗುನಗುತ್ತಾ ಬರುತ್ತಿ ಅವರನ್ನು ನೋಡಿ ಹೋದ ಕೆಲಸ ಆಗಿರಬೇಕು ಅಂತ ಮನಸ್ಸಿನಲ್ಲೇ ಲೆಕ್ಕ ಹಾಕತೊಡಗಿದೆ.

ನನ್ನ ಲೆಕ್ಕ ಮಾತ್ರ ತಲೆಕೆಳಗಾಗಿತ್ತು.

ಕಾಂಗ್ರೆಸ್ ಸೆಂಟಿನರಿಗಾಗಿ ಯು.ಎಸ್.ಎ. ಯಿಂದ ಬಂದ ಮಹಾಶಯರೊಬ್ಬರು ಕಾರ್ ಪಾರ್ಕ್ ಮಾಡಲು ಹತ್ತಿರದಲ್ಲೆಲ್ಲೂ ಸ್ಥಳ ಸಿಗದಿದ್ದುದರಿಂದ, 'ಅರ್ಧ ಗಂಟೆಯಲ್ಲಿ ಬರುತ್ತೇನೆ, ಇಲ್ಲೇ ತಿರುಗಾಡಿಕೊಂಡಿರು' ಅಂತ ತಮ್ಮ ಡ್ರೈವರನಿಗೆ ಹೇಳಿ ಹೋಗಿದ್ದರಂತೆ. ಡ್ರೈವರ್ ಅವರ ಮಾತಿಗನುಗುಣವಾಗಿ ಸ್ಟೇಡಿಯಂನ ಸುತ್ತ ತಿರುಗುತ್ತಿರುವುದು ನನ್ನ ಕಣ್ಣಿಗೆ ಬಿದ್ದು ಇಷ್ಟೆಲ್ಲಾ ರಾದ್ಧಾಂತಕ್ಕೆ ಎಡೆಮಾಡಿ ಕೊಟ್ಟದ್ದು ಅಂತ ನನ್ನ ಮನಸ್ಸಿಗೆ ಹೊಳೆದಾಗ ನಾಚಿಕೆಯಿಂದ ನನಗೆ ಮುಖಭಂಗವಾದಂತಾಯಿತು. ಮತ್ತೊಂದು ಕ್ಷಣವೂ ನನಗೆ ಅಲ್ಲಿ ನಿಲ್ಲಲು ಮನಸ್ಸಾಗಲಿಲ್ಲ. ನಿಧಾನ ಅಲ್ಲಿಂದ ಕಾಲ್ಕಿತ್ತೆ. *



ಜಗತ್ತೆಂಬುದು, ಪ್ರತಿಯೊಬ್ಬ ವ್ಯಕ್ತಿಯ ಮುಖವನ್ನು ಪ್ರತಿಬಿಂಬಿಸುವ ಕನ್ನಡಿ. ಅದರತ್ತ ನೋಡಿ ಹುಬ್ಬುಗಂಟಿಕ್ಕಿದರೆ ಅದೂ ನಿಮ್ಮ ಕಡೆಗೆ ಕೆಟ್ಟ ನೋಟ ಬೀರುತ್ತದೆ. ಅದನ್ನು ನೋಡಿ, ಅದರೊಂದಿಗೇ ನಕ್ಕು ಬಿಡಿ. ಆಗ, ಅದು ನಿಮಗೆ ಸಂತೋಷ ಕೊಡುವ ಸಂಗಾತಿಯಾಗುತ್ತದೆ.

● ಥ್ಯಾಕರೇ

# ಇದುವೆ ಜೀವ ಇದು ಜೀವನ

ಚೆಗೆ ಕಲಕತ್ತಕ್ಕೆ ಹೋಗಿದ್ದಾಗ ನಡೆದ ಘಟನೆ. ಅಲೀಪುರ್ ಜೂನಲ್ಲಿ ಪ್ರಾಣಿಗಳನ್ನು ನೋಡುತ್ತ ಸಾಗಿದ್ದೆವು. ನೆತ್ತಿಯ ಮೇಲೆ ಸುಡು ಬಿಸಿಲು. ಒಂದು ಬಿಲದಲ್ಲಿ ಪ್ರಾಣಿ ಪಕ್ಷಿಗಳಾವುವೂ ಕಾಣಲಿಲ್ಲವಾದ್ದರಿಂದ ಬಗ್ಗಿ ಬಗ್ಗಿ ನೋಡುತ್ತಿದ್ದೆವು. "ವಂಹಾ ದೇಖೋ ಚಿಡಿಯಾ" ಎಂದು ನಮ್ಮ ಹಿಂದೆ ನಿಂತವರೊಬ್ಬರು ಒಂದು ಮೂಲೆಗೆ ಕೈ ಮಾಡಿ ತೋರಿಸಿದರು. ನಾವೆಲ್ಲ ಅದರತ್ತಲೇ ಇನ್ನೂ ಬಗ್ಗಿ ನೋಡಲೆತ್ನಿಸಿದೆವು. ಹಾಗೆಯೇ ಕಂಡದ್ದನ್ನೆಲ್ಲ ನೋಡುತ್ತ ಸುಮಾರು ಒಂದು ಫರ್ಲಾಂಗು ನಮ್ಮ ಮುಂದೆ ಹೋಗಿದ್ದಾಗ ನನ್ನ ತಂದೆಯವರನ್ನು ಹಿಂಬಾಲಿಸುವ ತಟ್ಟಿ ಒಂದು ಪರ್ಸನ್ನು ಅವರ ಕೈಗಿತ್ತ. ಪರ್ಸು ಅವರದೇ ಆಗಿತ್ತು. ಕೆಳಗೆ ಬಿದ್ದಿತ್ತು. ತಾನು ಎತ್ತಿಕೊಟ್ಟೆ ಎಂಬುವಂತೆ ಆತ ಸಂಜ್ಞೆ ಮಾಡಿ ತೋರಿಸಿದ. "ಪಾಪ ಮೂಕ, ಪರ್ಸು ಮರಳಿ ತಂದುಕೊಟ್ಟಿದ್ದಾನೆ, ಅವನಿಗೊಂದೆರಡು ರೂಪಾಯಿನಾದರೂ ಕೊಡಿ" ಎಂದು ತಾಯಿ ಹೇಳಿದಾಗ ದುಡ್ಡು ತೆಗೆಯಲು ಜೇಬಿಗೆ ಕೈ ಹಾಕಿದರು ತಂದೆ. ಬೇಡ ಎಂದು ಸಂಜ್ಞೆಯ ಮೂಲಕ ತೋರಿಸಿ ಆ ಮೂಕ ಹೊರಟು ಹೋದ.

ನನ್ನ ಮಾವ ಕಲಕತ್ತದಲ್ಲೇ ಇರುವವರು. ನಮ್ಮಿಂದ ತುಸು ದೂರದಲ್ಲಿ ನಡೆದಿದ್ದ ಅವರಿಗೆ ಈ ಘಟನೆಯನ್ನು ಹೇಳಿದಾಗ, "ಪರ್ಸನ್ನು ಎಲ್ಲಿಟ್ಟುಕೊಂಡಿದ್ದಿರಿ?" ಎಂದು ಕೇಳಿದರು. "ಪ್ಯಾಂಟಿನ ಹಿಂದಿನ ಜೇಬಿನಲ್ಲಿ." "ದುಡ್ಡಿತ್ತು?" "ಏನೂ ಇರಲಿಲ್ಲ." ಈಗ ಅವರಿಗೆ ನಗು ತಡೆಯುವಾಗಲಿಲ್ಲ. "ಹಿಂದಿನ ಜೇಬಿನಲ್ಲಿಟ್ಟ ಪರ್ಸು ಬೀಳಲು ಹೇಗೆ ಸಾಧ್ಯ? ಅವನು ಪಿಕ್ ಪಾಕೆಟ್ ಮಾಡಿದ್ದಾನೆ. ಪರ್ಸಿನಲ್ಲಿ ಹಣವೇನೂ ಇಲ್ಲದ್ದರಿಂದ ಅದನ್ನು ಹಿಂತಿರುಗಿಸಿ ತಾನು ಸಾಚಾ ಮನುಷ್ಯ ಎಂಬ ಅಭಿಪ್ರಾಯವನ್ನು ನಿಮ್ಮಲ್ಲಿ ಮೂಡಿಸಿ ಕಾಲ್ತೆಗೆದಿದ್ದಾನೆ!" ಎಂದರು ಮಾವ.

● ನಂದಿತ ನಾಗರಾಜ ●

ನಾನು ಚಿಕ್ಕವಳಿದ್ದಾಗ ನಡೆದ ಘಟನೆ ಇದು. ನನ್ನ ಗೆಳತಿಯ ತಂದೆ ನಾವುಗಳು ಓದುತ್ತಿದ್ದ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ಅವರು ತೀರ ಮೃದು ಸ್ವಭಾವದವರು ಹಾಗೂ ಸರಳ ವ್ಯಕ್ತಿಯೂ ಆಗಿದ್ದುದರಿಂದ ಅವರ ಕೈ ಕೆಳಗಿನ ಸಿಬ್ಬಂದಿಗಳಾರೂ ಅವರಿಗೆ ಹೆದರುತ್ತಲೇ ಇರಲಿಲ್ಲ.

ಒಮ್ಮೆ ಶಾಲೆಗೆ ತನಿಖಾ ಅಧಿಕಾರಿಗಳು ಬಂದರು. ಅವರ ಆಗಮನದ ಬಗ್ಗೆ ಪೂರ್ವಭಾವಿಯಾಗಿ ಸುತ್ತೋಲೆ ಬಂದಿತ್ತಾದ್ದರಿಂದ ಮುಖ್ಯೋಪಾಧ್ಯಾಯರು ಶಾಲೆಯ ಆವರಣವನ್ನು ಚೊಕ್ಕಟಗೊಳಿಸಲು ಕಸಗುಡಿಸುತ್ತಿದ್ದರು. ಅದೇ ವೇಳೆ ಅಧಿಕಾರಿಗಳೂ ಬಂದಿಳಿದರು. ತನಿಖಾ ಅಧಿಕಾರಿಗಳು ತರಗತಿ, ಪಠ್ಯಕ್ರಮ, ಪಾಠಪ್ರವಚನ ಮತ್ತಿತರ ವಿಷಯಗಳ ಕಾರ್ಯ ನಿರ್ವಹಣೆಯನ್ನು ಪರಿಶೀಲಿಸಿದರು. ಅದೇ ಸಾಯಂಕಾಲ ಅಧಿಕಾರಿಗಳಿಂದ ನಮಗೆ

ಹಿತವಚನ ಹೇಳುವ ಒಂದು ಪುಟ್ಟ ಸಮಾರಂಭವನ್ನು ಮುಖ್ಯೋಪಾಧ್ಯಾಯರು ಏರ್ಪಡಿಸಿದ್ದರು. ಅಧಿಕಾರಿಗಳು ಸಮಾರಂಭದಲ್ಲಿ ಮಾತನಾಡುತ್ತಾ ಮುಖ್ಯೋಪಾಧ್ಯಾಯರ ಬಗ್ಗೆ ಎರಡು ಮೆಚ್ಚಿಗೆಯ ಮಾತುಗಳನ್ನಾಡಿದರು. 'ಅವರಿಗೆ ಯಾವುದೇ ಕೆಲಸದಲ್ಲಿ ಗೌರವವಿದೆ. ಕೆಲಸದಲ್ಲಿ ಮೇಲು ಕೀಳು ಇಲ್ಲ. ಶಾಲೆಯನ್ನು ಗುಡಿಸುವುದರಲ್ಲಿಯೂ ಅವರು ತಮ್ಮ ಕರ್ತವ್ಯವನ್ನು ಕಾಣುತ್ತಾರೆ. ಅವರು ಹಾಕಿದ ಮೇಲ್ಪಂಕ್ತಿಯನ್ನು ನೀವೆಲ್ಲರೂ ಅನುಸರಿಸಬೇಕು' ಎಂದರು.

ಮುಖ್ಯೋಪಾಧ್ಯಾಯರಿಗೆ ತುಂಬ ಸಂತೋಷವಾಯಿತು. ಅಧಿಕಾರಿಗಳನ್ನು ಸಂಭ್ರಮದಿಂದ ಬೀಳ್ಕೊಟ್ಟು ಆಫೀಸ್ ರೂಂಗೆ ಬಂದು ರಿಪೋರ್ಟ್ ಏನು ಬರೆದಿದ್ದಾರೆ ಎಂದು ವರದಿ ಪುಸ್ತಕ ತೆರೆದು ನೋಡಿದರು. ರಿಪೋರ್ಟ್ ಹೀಗಿತ್ತು: 'ಮುಖ್ಯೋಪಾಧ್ಯಾಯರಾಗಿ ಶಾಲೆಯನ್ನು ಸಮರ್ಥವಾಗಿ ನಡೆಸಲು ನಿಮ್ಮಿಂದ ಸಾಧ್ಯವಿಲ್ಲ. ಯಾರನ್ನು ಯಾವ ಕೆಲಸಕ್ಕಾಗಿ ನೇಮಿಸಲಾಗಿದೆಯೋ ಆ ಕೆಲಸವನ್ನು ಅವರೇ ಮಾಡಬೇಕು. ಅದನ್ನು ನೀವು ಮಾಡಬೇಕಾದ್ದಿಲ್ಲ: ನೀವು ಮೇಲ್ವಿಚಾರಕರಾಗಿ ನಿಂತು ಅವರುಗಳಿಂದ ಕೆಲಸ ಮಾಡಿಸಬೇಕು.''

● ಶಾರದಾ ಶಾಮಣ್ಣ ●

ಆತ ಸರ್ಕಾರಿ ನೌಕರನಾದರೂ ಬಿಡುವು ಸಿಕ್ಕಾಗ ನಮ್ಮ ಕೈದೋಟದ ಉಸ್ತುವಾರಿಯನ್ನು ಮಾಡುತ್ತಿದ್ದ ಮಾಲಿ. ಆತ ಒಮ್ಮೆ ಹೇಳಿದ ತನ್ನ ಅನುಭವವನ್ನು ಅವನ ಮಾತಿನಲ್ಲೇ ಕೇಳಿ.

"ಎಂಟು ಕೇಜಿ ದಾರ. ಒಂದು ಲಾರಿ ಮಾವಿನ ಸೊಪ್ಪು ತರಿಸಿ ಒಂದು ಫರ್ಲಾಂಗುದ್ದಕ್ಕೂ ತೋರಣ. ರಾತ್ರಿ ಮನೇ ಸೇರೋಕೆ ಹನ್ನೆರಡು ಹೊಡೆದೋಯ್ತು ಸಾರ್. ಮಧ್ಯೆ ಕರೆಂಟ್ ಬೇರೆ ಫೇಲಾಯ್ತು. ಮತ್ತೆ ಹತ್ತು ಪೆಟ್ರೋಮ್ಯಾಕ್ಸ್ ತರಿಸಿ ಕೆಲಸ ಮಾಡಿಸಿದ್ವಿ. ಆದ್ರೇನು ಸಾರ್, ಎಲ್ಲಾ ವೇಸ್ಟಾಯ್ತು. ಮಿನಿಸ್ಟ್ರು ತೋರಣ ಕಟ್ಟಿದ ದಾರಿಯಿಂದ ಬರಲೇಯಿಲ್ಲ. ದಾರಿ ತಪ್ಪಿಸಿಕೊಂಡು ಎಲ್ಲೆಲ್ಲೋ ಬಳಸಿಕೊಂಡು ಪ್ಲಾಟ್‌ಫಾರಂ ಹಿಂದುಗಡೆಯಿಂದ ಬಂದುಬಿಟ್ರು ಸಾರ್. ಅವರು! ಪುಡಾರಿಗಳೆಲ್ಲ ಹಾರ ಹಿಡ್ಕೊಂಡು ಮಹಾದ್ವಾರದ ಬಳಿ ನಿಂತವ್ರೆ. ಮಿನಿಸ್ಟ್ರು ಬಂದವ್ರೆಂದು ಒಂದೇ ಏಟಿಗೆ ಎಲ್ರೂನೂವೆ ಓಡಿ ಬಂದ್ ಹಾರ ಹಾಕಾಕ್ ನುಗ್ಗಿದ್ರು. ಅವರ ಕಾಲ್ಕೆಳಗೊಂದು ಮಗು ಸಿಕ್ಕು ಬಾಯ್ ಬಾಯ್ ಬಿಡ್ತಿತ್ತು. ತಕ್ಷಣ ಆಸ್ಪತ್ರೆಗೆ ಸೇರ್ಸಿದ್ವಿ. ಸದ್ಯ ಮಗು ಬದುಕಿಕೊಂಡ್ತು ಬಿಡಿ. ವನ ಮಹೋತ್ಸವ ನೋಡಿ. ಮಂತ್ರಿಗಳು ಒಂದು ಸಸಿ ನೆಟ್ರು. ಇವತ್ ಬೆಳಗ್ಗೆ ನೋಡಿದ್ರೆ ಹಾಳಾದ್ದು ಆ ಸಸಿ ಎಲ್ಲೋ ಕಿತ್ಗಂಡ್ಹೋಗಿತ್ತು. ಮೊಡ್ಡೋರು ನೆಟ್ಟಿದ್ದು ಹಂಗಾಗಬಾರ್ದು ನೋಡಿ ಸಾರ್. ನಾವೇ ನಾಲ್ಕು ಜನ ಹೋಗಿ, ಅದೇ ಜಾಗದಲ್ಲಿ ಮತ್ತೊಂದು ಸಸಿ ನೆಟ್ಟು, ಸುತ್ತ ಬೇಲಿ ಕಟ್ಟಿ, ನೀರು ಹಾಕಿ ಬಂದ್ವಿ ನೋಡಿ ಸಾರ್. ಎಂತ ಜನ ಇವ್ರು!''

● ಎನ್.ಆರ್. ಬಾಲೇಹೊಸೂರ ●

ಅಂದು ನನ್ನ ಸ್ನೇಹಿತ ಬಾಲುವನ್ನು ಕಾಣಲು ಹೋಗಿದ್ದೆ.

ಬಾಲು ಮನೆಯಲ್ಲಿರಲಿಲ್ಲ. ಆತನ ಅಜ್ಜ ಹೊಸ ಟ್ರಾನ್ಸಿಸ್ಟರ್‌ದಿಂದ ಯಾವುದೋ ಪಾಶ್ಚಾತ್ಯ ಸಂಗೀತವನ್ನು ಆಲಿಸುತ್ತ ಕುಳಿತಿದರು.

"ಅಜ್ಜಾ, ನಿಮಗೆ ವಿದೇಶಿ ಸಂಗೀತವೇ ಹೆಚ್ಚು ಇಷ್ಟವಿರಬೇಕು—ಅಲ್ಲವೇ?'' ಎಂದು ಕೇಳಿದೆ.

"ಥತ್... ಇದು ಸ್ವಲ್ಪನೂ ಇಷ್ಟ ಇಲ್ಲ. ಬೇಸರ ಕಳೆಯಲು ರೇಡಿಯೋ ಹಚ್ಚಿಕೊಂಡಿದ್ದೇನಷ್ಟೆ'' ಎಂದು ಅಜ್ಜ ಗೊಣಗುತ್ತ— "ನೋಡು... ಆಚೆ ಮನೆಯಲ್ಲೂ ರೇಡಿಯೋ ಇದೆ. ಅದರಲ್ಲಿ ಕನ್ನಡ ಬರುತ್ತೆ. ನಮ್ಮ ಬಾಲು ಈ ಅಜ್ಜನಿಗಾಗಿಯೇ ಅಂತ ಯಾರಿಂದಲೋ ಇಂಗ್ಲಿಷ್ ರೇಡಿಯೋ ತರಿಸಿಬಿಟ್ಟಿದ್ದಾನೆ. ಇದರಲ್ಲಿ ಒಂದು ವಾರ್ತೆಯೂ ಇಲ್ಲ, ಕನ್ನಡ ಚಿತ್ರಗೀತೆಯೂ ಇಲ್ಲ. ಯಾವಾಗ ಹಚ್ಚಿದರೂ ಇಂಗ್ಲಿಷ್! ಬಾಲು ಇವತ್ತು ಬಂದ ಕೂಡಲೇ ಈ ಇಂಗ್ಲಿಷ್ ರೇಡಿಯೋ ಕೊಟ್ಟು, 'ಕನ್ನಡ' ರೇಡಿಯೋ ತರಲು ಹೇಳಬೇಕು...'' ಅಂದರು.

● ಮೇಘಭೂಷಣ

# ಹಸ್ತಾಕ್ಷರ ಮಹಿಮೆ

● ವೆಂಕಟೇಶ ಗಂಗಾವತಿ ●

**1927**ರಲ್ಲಿ ಪ್ರಪ್ರಥಮ ಬಾರಿಗೆ ನ್ಯೂಯಾರ್ಕಿನಿಂದ ಪ್ಯಾರಿಸ್‌ವರೆಗೆ ಒಬ್ಬಂಟಿಗನಾಗಿ ಪ್ರಯಾಣ ಮಾಡಿದ ಚಾರ್ಲ್ಸ್ ಲಿಂಡ್‌ಬರ್ಗ್ ಪ್ರಪಂಚದ ಮಹಾಸಾಹಸಿಗರ ಸಾಲಿಗೆ ಸೇರಿದ. ಆದರೆ ಈ ಮಹಾತ್ಸಾಧನೆಯ ಒಂದಯೇ ಒಂದು ಪೇಚು ಅವನಿಗೆದುರಾಯಿತು. ಅವನು ಎಲ್ಲಿಯೇ ಹೋಗಲಿ, ಜನ ಅವನ ಹಸ್ತಾಕ್ಷರ ಪಡೆಯಲು ಮುತ್ತುತ್ತಿದ್ದರು. ಕೊನೆಗೆ ಅವನು ಬೇಸತ್ತು ಇನ್ನು ಮುಂದೆ ತಾನು ಯಾರಿಗೂ ಹಸ್ತಾಕ್ಷರ ನೀಡುವುದಿಲ್ಲವೆಂದು ಸಾರಿದ. ಆದರೆ ಜನ ಬಿಡಲಿಲ್ಲ. ಓರ್ವ ವ್ಯಾಪಾರಿಯಂತೂ ಒಂದು ವಿಚಿತ್ರ ಉಪಾಯ ಹೂಡಿ ಲಿಂಡ್‌ಬರ್ಗ್‌ನಿಗೆ ಒಂದು ರಿಜಿಸ್ಟರ್ಡ್ ಪತ್ರವನ್ನು ಕಳಿಸಿದ ರಿಜಿಸ್ಟರ್ಡ್ ಪತ್ರದ ಪಾವತಿಯ ಮೇಲೆ ತೆಗೆದುಕೊಂಡವರ ಸಹಿಯಿರುತ್ತದಲ್ಲವೆ!

ಅಮೆರಿಕದ ಪ್ರಥಮ ಅಧ್ಯಕ್ಷ ಜಾರ್ಜ್ ವಾಷಿಂಗಟನ್ ಸೇನೆಯಿಂದ ನಿವೃತ್ತನಾಗುವ ಪ್ರತಿಯೊಬ್ಬ ಸೈನಿಕನಿಗೂ ತಮ್ಮ ಹಸ್ತಾಕ್ಷರವುಳ್ಳ ಪ್ರಶಂಸಾ ಪತ್ರವನ್ನು ಕಳುಹಿಸುತ್ತಿದ್ದರು. ಇಂಗ್ಲಿಷ್ ಕವಿ ಲಾಂಗ್‌ಫೆಲೊ ಒಮ್ಮೆ ಒಂದೇ ದಿನದಲ್ಲಿ ತನ್ನ ಹಸ್ತಾಕ್ಷರವುಳ್ಳ ಎಪ್ಪತ್ತು ಪತ್ರಗಳನ್ನು ಪ್ರಶಂಸಕರಿಗೆ ಕಳಿಸಿದ. ವಾರೆನ್ ಹಾರ್ಡಿಂಗನ ನಂತರ ಆಗಿಹೋದ ಅಮೆರಿಕದ ಅಧ್ಯಕ್ಷರಲ್ಲಿ ಐಸೆನ್ ಹಾವರರನ್ನೂ ಬಿಟ್ಟರೆ ಉಳಿದವರ ಹಸ್ತಾಕ್ಷರ ಓದಲು ಸಾಧ್ಯವಿಲ್ಲ.

ಹಸ್ತಾಕ್ಷರಗಳ ಬೆಲೆ ವ್ಯಕ್ತಿಯ ಪ್ರಸಿದ್ಧಿಗಿಂತ ಹೆಚ್ಚು ಅವುಗಳ ಲಭ್ಯತೆಯ ಮೇಲೆ ಅವಲಂಬಿಸಿರುತ್ತದೆ. ಅಮೆರಿಕದಲ್ಲಿ ಬ್ಯೂಟನ್ ಗ್ರ್ಯಾಂಟನ ಹಸ್ತಾಕ್ಷರದ ಬೆಲೆ ಹತ್ತು ಸಾವಿರ ಡಾಲರಗಳಾಗಿವೆ. ಅವನು ಜಾರ್ಜಿಯಾದ ಸ್ವಾತಂತ್ರ್ಯ ಘೋಷಣಾ ಪತ್ರದ ಮೇಲೆ ಹಸ್ತಾಕ್ಷರ ಹಾಕಿದ್ದ. ಈಗ ಅಮೆರಿಕದಲ್ಲಿ ಸುಮಾರು ಐವತ್ತಾರು ಪ್ರಸಿದ್ಧ ವ್ಯಕ್ತಿಗಳ ಹಸ್ತಾಕ್ಷರ ದೊರೆಯುತ್ತವೆ. ಅವರಲ್ಲಿ ಬ್ಯೂಟನ್ ಗ್ರ್ಯಾಂಟನ ಹಸ್ತಾಕ್ಷರ ಅತ್ಯಂತ ದುರ್ಲಭವಾಗಿದೆಯೆಂದು ಹೇಳಬಹುದು. ಆದ್ದರಿಂದ ಅದಕ್ಕೆ ಅತ್ಯಧಿಕ ಬೆಲೆ.

ಹಸ್ತಾಕ್ಷರ ಸಂಗ್ರಹಿಸುವುದು ಬಹಳ ಹಳೆಯ ಅಭ್ಯಾಸವಾಗಿದೆ. ಆದರೆ ಅತಿ ಪುರಾತನವಾದ ಹಸ್ತಾಕ್ಷರ ಯಾರದೆಂಬುದು ಯಾರಿಗೂ ಇದುವರೆಗೂ ತಿಳಿದಿಲ್ಲ. ಕೆಲವರು ಬಾಬುಲ್‌ನ ಓರ್ವ ವ್ಯಾಪಾರಿಯ ಹಸ್ತಾಕ್ಷರ ಬಹಳ ಪುರಾತನವಾದದ್ದೆಂದು ಹೇಳುತ್ತಾರೆ. ಅದನ್ನು ಕ್ರಿ.ಪೂ. 3100ರಲ್ಲಿ ಒಂದು ಮಣ್ಣಿನ ಹಲಗೆಯ ಮೇಲೆ ಕಲ್ಲಿನ ಮುದ್ರೆಯಿಂದ ಒತ್ತಲಾಗಿದೆ. ಈಗ ಈ ಹಲಗೆಯು ಬ್ರಿಟಿಶ್ ಮ್ಯೂಜಿಯಂನಲ್ಲಿ ಸುರಕ್ಷಿತವಾಗಿದೆ.

ಹಸ್ತಾಕ್ಷರದ ಮೌಲ್ಯ ಆ ಕಾಗದದಲ್ಲಿರುವ ವಿಷಯದ ಮೇಲೆಯೂ ಅವಲಂಬಿಸಿರುತ್ತದೆ. ಎಷ್ಟೋ ಬಾರಿ ಬೇಡಿಕೆಯೂ ಹಸ್ತಾಕ್ಷರದ ಬೆಲೆ ನಿರ್ಧರಿಸುತ್ತದೆ. ಕ್ರಿಸ್ಟೋಫರ್ ಕೊಲಂಬಸ್‌ನ ಹಸ್ತಾಕ್ಷರದ ಬೆಲೆ ಮೂರು ಸಾವಿರ ಅಪನ

ಪತ್ರಕ್ಕೆ ಇಪ್ಪತ್ತೈದು ಸಾವಿರ ಮತ್ತು ಹಾಂಡು ಲಿಪಿಗೆ ಐವತ್ತು ಸಾವಿರ ಇದೆ. ಎಷ್ಟೋ ಜನ ವ್ಯಾಪಾರಿಗಳ ಬಳಿಯಲ್ಲಿ ನಾಲ್ಕು ಸಾವಿರ ವರ್ಷ ಪೂರ್ವದ ಇಜಿಪ್ತಿನ ಹಸ್ತಾಕ್ಷರಗಳ ನಮೂನೆಗಳಿವೆ. ಇವುಗಳಲ್ಲಿಯ ಒಂದರ ಬೆಲೆ ಒಂದು ಸಾವಿರ ಡಾಲರ್‌ಗಳಿಗಿಂತ ಹೆಚ್ಚಾಗ ಬಹುದು. ಬೈಬಲ್ ಕಾಲದ ಹಸ್ತಾಕ್ಷರಗಳ ಬೆಲೆ ಎಣಿಕೆಗಿಂತ ಕಡಿಮೆಯಾಗಿದೆ. ಅವು ಕೇವಲ ಹತ್ತು ಸಾವಿರ ಡಾಲರ್‌ಗಳಿಗೆ ದೊರೆ ಯುತ್ತವೆ. ಎಂಟನೆಯ ಶತಮಾನದ. ಚರ್ಮದ ಮೂರುಪದರುಗಳ ಮೇಲೆ ಅಂಕಿತ ವಾದ ಶಾರ್ಲ ಮಾನನ ಹಸ್ತಾಕ್ಷರ ಬೆಲೆ ಇಪ್ಪತ್ತು ಸಾವಿರ ಡಾಲರ್. ಮಹಾಕವಿ ಶೇಕ್ಸ್ ಪಿಯರ್‌ನ ಹಸ್ತಾಕ್ಷರಗಳು ಬಹಳ ಬೆಲೆಯುಳ ದ್ದಾಗಿವೆ. ಅವುಗಳ ಮೌಲ್ಯ ಎರಡು ಲಕ್ಷ ಡಾಲರ್‌ಗಳಿಗಿಂತ ಅಧಿಕ.

ಅಮೆರಿಕನರಿಗೆ ಹಸ್ತಾಕ್ಷರಗಳನ್ನು ಸಂಗ್ರಹಿ ಸುವ ಹುಚ್ಚು ಬಹಳ. ಈಗ ಸುಪ್ರಸಿದ್ಧ ಜನರ ಹಸ್ತಾಕ್ಷರಗಳನ್ನು ಸಂಗ್ರಹಿಸುವವರ ಸಂಖ್ಯೆ ಅಮೆರಿಕಾವೊಂದರಲ್ಲೇ ಸುಮಾರು ಎರಡು ಕೋಟಿಗಿಂತಲೂ ಹೆಚ್ಚಾಗಿದೆ. ಹಸ್ತಾಕ್ಷರ ಗಳನ್ನು ಪಡೆಯಲು ಈ ಜನ ಸಾಕಷ್ಟು ತೊಂದರೆ ತಾಪತ್ರಯಗಳನ್ನು ಅನುಭವಿಸಲೂ ಸಿದ್ಧರಿದ್ದಾರೆ. ಇವರ ಪೈಕಿ ಸುಮಾರು ಎಂಟು ಹತ್ತು ಸಾವಿರ ಜನರು ದುರ್ಲಭ ಹಸ್ತಾಕ್ಷರಗಳ ಒಡೆಯರಾಗಿದ್ದಾರೆ.

ಹಸ್ತಾಕ್ಷರ ಪಡೆಯುವವರ ಸ್ವಭಾವವನ್ನು ಅವರು ಯಾರ ಹಸ್ತಾಕ್ಷರ ಪಡೆಯಲಿಚ್ಛಿಸು ತ್ತಾರೆ ಎಂಬುದರ ಮೂಲಕ ತಿಳಿಯಬಹುದು. ಅಮೆರಿಕದ ಅಧ್ಯಕ್ಷ ಫ್ರಾಂಕ್ಲಿನ್ ರೂಜ್‌ವೆಲ್ಟ್ ರಿಗೆ ಕಾದಂಬರಿ ಓದುವ ಅಭಿರುಚಿ ಬಹಳ ವಾಗಿತ್ತು. ಅವರು ಪ್ರಶಸ್ತಿ ವಿಜೇತ ಕಾದಂಬರಿ ಕಾರರ ಹಸ್ತಾಕ್ಷರಗಳನ್ನು ಸಂಗ್ರಹಿಸಿದ್ದರು. ಕೆಲ ವರು ವಿಜ್ಞಾನಿಗಳ, ಸಂಶೋಧಕ, ಲೇಖಕರ ಮತ್ತು ಕುಸ್ತಿಪಟುಗಳ ಹಸ್ತಾಕ್ಷರಗಳನ್ನು ಸಂಗ್ರ ಹಿಸಲಪೇಕ್ಷಿಸುತ್ತಾರೆ. ವಿನಸ್ಟನ್ ಚರ್ಚಿಲರಿಗೆ ರಾಷ್ಟ್ರನಾಯಕರ ಹಸ್ತಾಕ್ಷರಗಳನ್ನು ಸಂಗ್ರಹಿ ಸುವ ಚಟವಿತ್ತು. ಎರಡನೆಯ ಮಹಾಯುದ್ಧದ ಸಮಯದಲ್ಲಿ ಯಾರೋ ಒಬ್ಬರು ಅವರನ್ನೂ ಕೇಳಿದರಂತೆ, ನೀವು ಈಗ ಯಾರ ಹಸ್ತಾಕ್ಷರ ಗಳನ್ನು ಸಂಗ್ರಹಿಸಲು ಉತ್ಸುಕರಾಗಿರುವಿರಿ.

"ಅಡಾಲ್ಫ್ ಹಿಟ್ಲರ್" ಎಂದು ಚರ್ಚಿಲರು ಉತ್ತರಿಸಿದರು!

ದುರ್ಲಭ ಅಂಚೆಚೀಟಿಗಳಂತೆಯೇ ಹಸ್ತಾಕ್ಷರ ಗಳೂ ಹಣಗಳಿಸುವ ಸಾಧನಗಳಾಗಿವೆ. ಹಸ್ತಾ ಕ್ಷರ ಸಂಗ್ರಹಿಸುತ್ತಿದ್ದ ಓರ್ವನಿಗೆ 1955ರಲ್ಲಿ ಪೂರ್ವ ಜರ್ಮನಿಯಲ್ಲಿದ್ದ ಕಾರಖಾನೆಯನ್ನು ಮುಚ್ಚಲು ಆದೇಶ ನೀಡಲಾಯಿತು. ಒಂದು ವರ್ಷದ ನಂತರ ಅವನಿಗೆ ಪಶ್ಚಿಮ ಜರ್ಮನಿಗೆ ಹೋಗಲು ಅನುಮತಿ ದೊರಕಿತು. ಆಗ ಅವನು ತನ್ನ ಕೆಲವು ಕಾಗದ ಪತ್ರಗಳನ್ನು ತೆಗೆದುಕೊಂಡು ಹೋಗಲನುವಾದ. ಅವು ಗಳಲ್ಲಿ ಅವನಿಗೆ ಹೆಸರಾಂತ ಧರ್ಮಸುಧಾರಕ ಮಾರ್ಟಿನ್ ಲೂಥರ್ ಕಿಂಗ್‌ನ ಎರಡು ಹಸ್ತಾ ಕ್ಷರಗಳು ದೊರೆತವು. ಅವುಗಳನ್ನು ಮಾರಿ ಅವನು ಮೂವತ್ತು ಸಾವಿರ ಡಾಲರುಗಳನ್ನು ಸಂಪಾದಿಸಿದ.

ಪ್ರತಿಯೊಂದು ಅಮೂಲ್ಯ ವಸ್ತುವಿನ ನಕಲಿ ಮಾಲನ್ನು ತಯಾರಿಸಿ ಮೋಸ ಮಾಡುವ ಜನಗಳ ಸಂಖ್ಯೆ ದಿನದಿನಕ್ಕೆ ಹೆಚ್ಚುತ್ತಲಿದೆ. ಸುಪ್ರಸಿದ್ಧ ವ್ಯಕ್ತಿಗಳ ಹಸ್ತಾಕ್ಷರಗಳೂ ಈ ಜನ ಗಳ ಕೃಪಾ ದೃಷ್ಟಿಯಿಂದ ದೂರವಾಗಿಲ್ಲ. ಅಮೆ ರಿಕಾದಲ್ಲಿ ಒಬ್ಬ ಬೆಂಜಾಮಿನ್ ಫ್ರಾಂಕ್ಲಿನ್ ಅಬ್ರಾಹಂಲಿಂಕನ್ ಮತ್ತು ಎಡ್ಗರ್ ಅಲೆನ್ ಪೋ ಅವರ ಖೊಟ್ಟಿ ಹಸ್ತಾಕ್ಷರ ಮತ್ತು ಕಾಗದ ಪತ್ರಗಳನ್ನು ಮಾರಿದನು. ಅವನು ಸುಮಾರು ಹತ್ತು ವರ್ಷಗಳವರೆಗೆ ಈ ಖೊಟ್ಟಿ ವ್ಯಾಪಾರ ದಲ್ಲಿದ್ದ ನಂತರ ಒಮ್ಮೆಂದೊಮ್ಮೆಲೆ ಮಾಯ ವಾಗಿಬಿಟ್ಟ. ಎಷ್ಟೋ ದಿನಗಳ ನಂತರ ಅವನ ಮೋಸ ಗೊತ್ತಾಯಿತು.

ಹದಿನೆಂಟನೆಯ ಶತಮಾನದಲ್ಲಿ ಮಹಾಕವಿ ಶೇಕ್ಸ್‌ಪಿಯರ್‌ನ ಹಸ್ತಾಕ್ಷರಗಳು ಕೇವಲ ಐದು ಮಾತ್ರ ಇದ್ದವು. ನಂತರ ವಿಲಿಯಮ್ ಹೆನ್ರಿ ಎಂಬ ವ್ಯಕ್ತಿ ಅವನ ಇನ್ನೊಂದು ಹಸ್ತಾಕ್ಷರ ವನ್ನೂ ತಯಾರಿಸಿದ. ಲಂಡನ್ನಿನ ಬ್ರಿಟಿಶ್ ಮ್ಯೂಜಿಯಂನಿಂದ ಅದು ಮೂಲ ಹಸ್ತಾಕ್ಷರ ವೆಂಬ ಪ್ರಮಾಣ ಪತ್ರವನ್ನೂ ಪಡೆದ. ಅಷ್ಟೇ ಅಲ್ಲ ಶೇಕ್ಸ್‌ಪಿಯರ್‌ನ ಹ್ಯಾಮ್ಲೆಟ್ ಮತ್ತು ಕಿಂಗ್‌ಲೀಯರ್, ನಾಟಕಗಳನ್ನು ಹಾಂಡುಲಿಪಿ ಯಲ್ಲಿ ಶೇಕ್ಸ್‌ಪಿಯರ್‌ನ ಬರಹದಲ್ಲಿಯೇ

ತಯಾರಿಸಿ ಪ್ರದರ್ಶಿಸಿದ. ಎಷ್ಟೋ ದಿನಗಳ ನಂತರ ಈ ಮೋಸ ಹೊರಬಿತ್ತು.

ಹಸ್ತಾಕ್ಷರಗಳ ವಿಷಯದಲ್ಲಿ ಎಲ್ಲಕ್ಕಿಂತ ಹೆಚ್ಚು ಉದ್ವಿಗ್ನಗೊಳಿಸುವ ಖೊಟ್ಟಿತನದ ಅಪರಾಧವನ್ನು ಸ್ವತಃ ಅಮೆರಿಕಾದ ಅಂಚೆ ವಿಭಾಗವು ಎಸಗಿತೆಂದು ಹೇಳಬಹುದು. ಒಮ್ಮೆ ಅಂಚೆಚೀಟಿಯೊಂದರ ಪ್ರಚಾರಕ್ಕಾಗಿ ಅದರ ಮೇಲೆ ಜಾರ್ಜ್ ವಾಷಿಂಗ್‌ಟನರ ಹಸ್ತಾಕ್ಷರವನು ಮುದ್ರಿಸಲಾಗಿತ್ತು. ಆದರೆ ಇದರಲ್ಲಿ 'ಜಿ' ಅಕ್ಷರವು ಜೊತೆಗಿದ್ದ 'ಓ' ಅಕ್ಷರವಿರಲಿಲ್ಲ. ಸುಪ್ರಸಿದ್ಧ ಕಲಾವಿದ ಫ್ರಾಂಕ್‌ಕೊನಲಿ ಈ ಟಿಕೆಟ್ಟಿನ ವಿನ್ಯಾಸ ತಯಾರಿಸುವಾಗ ಅಂಚೆ ಅಧಿಕಾರಿಗಳ ಹೇಳಿಕೆಯ ಮೇರೆಗೆ 'ಓ' ಅಕ್ಷರವನ್ನು ತೆಗೆದು ಹಾಕಿದ್ದ. ಹಸ್ತಾಕ್ಷರವನ್ನು ಸುಲಭವಾಗಿ ಓದಲು ಸಾಧ್ಯವಾಗಲೆಂದು ಆ ರೀತಿ ಮಾಡಲಾಗಿತ್ತು. ಅಂಚೆ ವಿಭಾಗದ ಈ ದುಸ್ಸಾಹಸದಿಂದ ಸಾಕಷ್ಟು ಗೊಂದಲವುಂಟಾಯಿತು.

ಮಹಾಪುರುಷರೊಂದಿಗೆ ಇರುವ ನಮ್ಮ ಸಂಬಂಧಗಳ ಏಕೈಕ ಪ್ರತೀಕವೆಂದರೆ ಹಸ್ತಾಕ್ಷರ. ನನಗೆ ಯಾರಾದರೂ ನೆಪೋಲಿಯನ್‌ನ ಖಡ್ಗ ಇಲ್ಲವೆ ಎಡ್ಗರ್ ಅಲೆನ್‌ಪೋನ ಲೆಕ್ಕಣಿಕೆಯನ್ನು ತಂದು ತೋರಿಸಿದರೆ ಸಂತೋಷವಾಗುವುದು. ಆದರೆ ಅದನ್ನು ಅವರು ಉಪಯೋಗಿಸಿದ್ದರೋ ಇಲ್ಲವೋ ಎಂಬ ಬಗ್ಗೆ ಪೂರ್ಣ ಭರವಸೆಯಾಗದು. ಆದರೆ ಹಸ್ತಾಕ್ಷರಗಳು ಇಂತಹ ಸಂಶಯಕ್ಕೆ ಎಡೆಮಾಡಿಕೊಡುವುದಿಲ್ಲ ಎಂದು ಹಸ್ತಾಕ್ಷರ ವ್ಯಾಪಾರಿ ಚಾರ್ಲ್ಸ್‌ಹೆಮಿಲ್ಟನ್ ಹೇಳುತ್ತಾರೆ.

ಎಷ್ಟೋ ಬಾರಿ ಈ ಹಸ್ತಾಕ್ಷರಗಳ ವ್ಯವಹಾರದಲ್ಲಿ ಮೋಜಿನ ಘಟನೆಗಳೂ ಜರುಗುತ್ತವೆ. ಉದಾಹರಣೆಗೆ ಒಮ್ಮೆ ಓರ್ವ ಮಹಿಳೆ ಸುಪ್ರಸಿದ್ಧ ನಟ ಬ್ಯೆರಿ ಮೂರನ ಹಸ್ತಾಕ್ಷರ ಪಡೆಯಲು ಪತ್ರ ಬರೆದಳು. ಕೆಲವು ವಾರಗಳ ನಂತರ ಅವಳಿಗೆ ಸಂಕ್ಷಿಪ್ತ ಉತ್ತರ ಬಂದಿತು. ಅದರಲ್ಲಿ ಹೀಗೆ ಬರೆಯಲಾಗಿತ್ತು; ಮಾಸ್ತರೆ ನನ್ನ ಅಮೂಲ್ಯ ಹಸ್ತಾಕ್ಷರವನ್ನು ಬಯಸಿದವರಿಗೆಲ್ಲ ಕಳಿಸುವ ಸ್ವಭಾವ ನನ್ನದಲ್ಲ. ಕೊನೆಗೆ ಬ್ಯೆರಿ ಮೂರನ ಹಸ್ತಾಕ್ಷರವಿತ್ತು! ●

*ಕಳೆದ ವರ್ಷ ಸಾಹಿತ್ಯಕ್ಕಾಗಿ ನೋಬೆಲ್ ಬಹುಮಾನ ಪಡೆದ ಕವಿ ಜೋಸೆಫ್ ಬ್ರಾಡ್ಸ್ಕಿ. ರಶಿಯಾದ ಲೆನಿನ್ ಗ್ರಾಡಿನಲ್ಲಿ ಯಹೂದ್ಯ ಕುಟುಂಬವೊಂದರಲ್ಲಿ ಜನಿಸಿದ ಅವರಿಗೆ ಶಾಲೆಯ ಶಿಕ್ಷಣ ಒಗ್ಗಲಿಲ್ಲ, ಯಾವ ಕೆಲಸವೂ ರುಚಿಸಲಿಲ್ಲ. ಆದರೆ ಏನೂ ಮಾಡುತ್ತಿಲ್ಲವೆಂಬ ಕಾರಣಕ್ಕಾಗಿ ಶಿಕ್ಷೆಯನ್ನು ಅನುಭವಿಸಬೇಕಾಯಿತು. ಆದರೆ ಆ ಹೊತ್ತಿಗಾಗಲೆ ಅವರು ಪದ್ಯಗಳನ್ನು ಬರೆಯತೊಡಗಿದ್ದರು. ತಮ್ಮ ರಾಜಕೀಯ ಧೋರಣೆಗಳಿಂದಾಗಿ ಮಾತೃಭೂಮಿಯನ್ನು ತೊರೆದು ಅಮೇರಿಕಕ್ಕೆ ಬಂದು ನೆಲಸಿರುವರಾದರೂ ಈಗಲೂ ಕಾವ್ಯವನ್ನು ರಶಿಯನ್‌ನಲ್ಲೇ ಬರೆಯುತ್ತಾರೆ. ವಿಮರ್ಶೆಯನ್ನು ಮಾತ್ರ ಇಂಗ್ಲಿಷ್‌ನಲ್ಲಿ ಬರೆಯುತ್ತಾರೆ. ಕ್ರಾಂತಿಗಾಗಿ ಸಂಸ್ಕೃತಿಯನ್ನು ತಿರುಚುವ ಸೋವಿಯತ್ ಪ್ರಯತ್ನವನ್ನು ತಮ್ಮ ಜೀವನದುದ್ದಕ್ಕೂ ಪ್ರಶ್ನಿಸುತ್ತಲೇ ಬಂದಿದ್ದಾರೆ. ವ್ಯಕ್ತಿಸ್ವಾತಂತ್ರ್ಯವಾದಿಯೆಂದು ಅಮೇರಿಕದಲ್ಲಿ ಇವರನ್ನು ಗೌರವಿಸಲಾಗುತ್ತಿದೆಯಾದರೆ ರಶಿಯಾದ 'ಅಧಿಕೃತ' ವಲಯಗಳು ಕ್ರಾಂತಿ ವಿರೋಧಿಯೆಂದು ಇವರನ್ನು ಜರೆಯುತ್ತಿವೆ. ನೋಬೆಲ್ ಬಹುಮಾನ ಸ್ವೀಕರಿಸುವ ಮುನ್ನ ಅವರು ಮಾಡಿದ ಭಾಷಣವೇ 'ಕಾವ್ಯದ ರಾಜಕೀಯ'.*

# ಕಾವ್ಯದ ರಾಜಕೀಯ

● ಜೋಸೆಫ್ ಬ್ರಾಡ್ಸ್ಕಿ ●

ಸರ್ವಾಧಿಕಾರತ್ವದಲ್ಲಿ ಹುತಾತ್ಮನೋ ಪ್ರವ್ರಾತನೋ ಆಗುವುದಕ್ಕಿಂತ ಪ್ರಜಾಪ್ರಭುತ್ವದಲ್ಲಿ ಪೂರ್ಣ ಸೋಲನ್ನು ಅನುಭವಿಸುವುದು ಒಳ್ಳೆಯದು. ತನ್ನನ್ನು ತಾನು ಅರಿತುಕೊಳ್ಳಲು ತಾಯಿನಾಡಿನಿಂದ ಹೊರಹೋದ ಸಂಕೋಚದ ವ್ಯಕ್ತಿಯೊಬ್ಬನಿಗೆ ಇದ್ದಕ್ಕಿದ್ದಂತೆ ಈ ವೇದಿಕೆಯ ಮೇಲೆ ಬರಬೇಕಾಗಿರುವುದು ಮುಜುಗರದ ಮತ್ತು ಕಷ್ಟದ ಅನುಭವ.

ನನ್ನಂಥವನಿಗೆ ವ್ಯವಸ್ಥಿತವಾಗಿ ಚಿಂತಿಸುವುದು ಸಾಧ್ಯವಿಲ್ಲ. ಒಂದು ವೇಳೆ ಸಾಧ್ಯವಿದ್ದರೂ ಆ ವ್ಯವಸ್ಥೆ ಒಂದು ಸಾಮಾಜಿಕ ಆವರಣದಿಂದಲೋ ಬಾಲ್ಯದಲ್ಲಿ ಓದಿದ ತತ್ತ್ವಶಾಸ್ತ್ರದಿಂದ ಎರವಲು ಪಡೆದುಕೊಂಡದ್ದೋ ಆಗಿರುತ್ತವೆ. ಒಬ್ಬ ಕಲಾವಿದನಿಗೆ ತನ್ನ ಗುರಿಯನ್ನು ಸಾಧಿಸಲು ತಾನು ಬಳಸುವ ಮಾರ್ಗದ ನಿರಂಕುಶತೆಯನ್ನು ಸೃಜನಶೀಲ ಪ್ರಕ್ರಿಯೆ ಮತ್ತು ಬರೆಯುವ ಪ್ರಕ್ರಿಯೆಗಳಷ್ಟು ಇನ್ನಾವುದೂ ದೃಢೀಕರಿಸುವುದಿಲ್ಲ. ಆನಾ ಅಖ್ಮತೋವಾ ಹೇಳುವಂತೆ ಕಾವ್ಯ ಬೆಳೆಯುವುದು ಕೊಳಚೆಯಿಂದ; ಗದ್ಯದ ಮೂಲವೂ ಇದಕ್ಕಿಂತ ಹೆಚ್ಚಿನ ಗೌರವಾಸ್ಪದವಾದದ್ದೇನಲ್ಲ.

ಕಲೆ ಏನನ್ನಾದರೂ ಬೋಧಿಸುತ್ತವಾದರೆ ಅದು ಮನುಷ್ಯ ಸ್ಥಿತಿಯ ಖಾಸಗಿತನ. ಮನುಷ್ಯನ ಖಾಸಗಿ ಪ್ರಯತ್ನದ ಅತ್ಯಂತ ಹಳೆಯ ಮತ್ತು ಅತ್ಯಂತ ಸಹಜ ರೂಪವೇ ಕಲೆ. ತಿಳಿದೋ ತಿಳಿಯದೆಯೋ ಇದು ಮನುಷ್ಯನ ಅನನ್ಯತೆಯನ್ನೂ ವ್ಯಕ್ತಿತ್ವವನ್ನೂ ಭಿನ್ನತೆಯನ್ನೂ ಪೋಷಿಸುತ್ತದೆ. ಹೀಗಾಗಿ ಇದು ಅವನ ಸಾಮಾಜಿಕತೆಯನ್ನು 'ನಾನು' ಎಂಬುದಕ್ಕೆ ತಿರುಗಿಸುತ್ತದೆ. ಅನೇಕ ವಸ್ತುಗಳನ್ನು ಮನುಷ್ಯರು

ಹಂಚಿಕೊಳ್ಳಬಹುದು; ಹಾಸಿಗೆ, ಬ್ರೆಡ್‌ನ ತುಣುಕು, ತಾತ್ತ್ವಿಕ ನಂಬಿಕೆಗಳು, ಹೆಣ್ಣು; ಆದರೆ ಒಂದು ಪದ್ಯವನ್ನು ಹೀಗೆ ಹಂಚಿಕೊಳ್ಳಲಾಗುವುದಿಲ್ಲ. ಯಾವುದೇ ಕಲೆ, ಮುಖ್ಯವಾಗಿ ಸಾಹಿತ್ಯ, ಇನ್ನೂ ನಿರ್ದಿಷ್ಟವಾಗಿ ಕಾವ್ಯ ಮನುಷ್ಯನನ್ನು ಉದ್ದೇಶಿಸುತ್ತದೆ, ಅವನೊಡನೆ ನೇರ ಸಂಬಂಧದಲ್ಲಿ ತೊಡಗುತ್ತದೆ.

ಭಾಷೆ ಮತ್ತು ಸಾಹಿತ್ಯ ಸಾಮಾಜಿಕ ವ್ಯವಸ್ಥೆಯ ಯಾವುದೇ ರೂಪಕ್ಕಿಂತ ಹೆಚ್ಚು ಪ್ರಾಚೀನವಾದವು. ಅನಿವಾರ್ಯವಾದವು. ಮತ್ತು ಹೆಚ್ಚು ಕಾಲ ಉಳಿಯುವವು. ಸರ್ಕಾರದ ಬಗ್ಗೆ ಸಾಹಿತ್ಯ ವ್ಯಕ್ತಪಡಿಸುವ ಹೇಸಿಗೆ, ವ್ಯಂಗ್ಯ ಮತ್ತು ನಿರ್ಲಕ್ಷ್ಯಗಳು ಮೂಲಭೂತವಾಗಿ ಕ್ಷಣಿಕ ಮತ್ತು ಪರಿಮಿತವಾದದ್ದರ ವಿರುದ್ಧ ಶಾಶ್ವತ ಮತ್ತು ಅನಂತವಾದದ್ದು ತೋರಿಸುವ ಪ್ರತಿಕ್ರಿಯೆ. ಎಲ್ಲಿಯತನಕ ಸಾಹಿತ್ಯದಲ್ಲಿ ಸರ್ಕಾರ ಮಧ್ಯ ಪ್ರವೇಶಿಸುತ್ತದೋ ಅಲ್ಲಿಯತನಕ ಸರ್ಕಾರದಲ್ಲಿ ಮಧ್ಯ ಪ್ರವೇಶಿಸಲು ಸಾಹಿತ್ಯಕ್ಕೆ ಹಕ್ಕಿದೆ.

ಸರ್ಕಾರದ ತಾತ್ತ್ವಿಕತೆ ಮತ್ತು ನೀತಿ (ಅದರ ಸೌಂದರ್ಯ ತತ್ತ್ವವನ್ನು ಬಿಟ್ಟು ಬಿಡೋಣ) ಯಾವತ್ತೂ 'ನಿನ್ನೆ'; ಭಾಷೆ ಮತ್ತು ಸಾಹಿತ್ಯ ಯಾವತ್ತೂ 'ಇಂದು'; ಸಾಂಪ್ರದಾಯಿಕ ರಾಜಕೀಯ ವ್ಯವಸ್ಥೆ ಇರುವೆಡೆ ಇವು 'ನಾಳೆ' ಕೂಡಾ. ಸಾಹಿತ್ಯದ ಒಂದು ಮುಖ್ಯ ಗುಣವೆಂದರೆ ಮನುಷ್ಯನಿಗೆ ತನ್ನ ಅಸ್ತಿತ್ವದ ಕಾಲವನ್ನು ಹೆಚ್ಚು ಖಚಿತಗೊಳಿಸುವುದು ಮತ್ತು ಅವನನ್ನು ತನ್ನ ಪೂರ್ವಿಕರ ಗುಂಪಿನಿಂದ ಪ್ರತ್ಯೇಕಿಸುವುದು.

ಕಲೆ–ನಿರ್ದಿಷ್ಟವಾಗಿ ಸಾಹಿತ್ಯ–ಮಹತ್ತರವಾಗಿರುವುದು ಮತ್ತು ಜೀವನದಿಂದ ಭಿನ್ನವಾಗಿರುವುದು ಏಕೆಂದರೆ ಅದು ಪುನರಾವರ್ತನೆಯನ್ನು ತಿರಸ್ಕರಿಸುತ್ತದೆ. ಒಂದು ಜೋಕನ್ನು ಮೂರು ಸಲ ಹೇಳಿ, ಪ್ರತಿಯೊಂದು ಸಲವೂ ನಗುವನ್ನು ಉಕ್ಕಿಸಿ, ಒಬ್ಬ ಒಂದು ಪಾರ್ಟಿಯ ಜೀವವಾಗಿಬಿಡಬಹುದು. ಆದರೆ ಇದು ಕಲೆಯಲ್ಲಿ 'ಕ್ಲೀಷೆ'ಯಾಗುತ್ತದೆ. ಕಲೆ ಎಂದೂ ಹಿಮ್ಮೆಟ್ಟದ ಒಂದು ಅಸ್ತ್ರ; ಇದರ ಬೆಳವಣಿಗೆಯನ್ನು ನಿರ್ಧರಿಸುವುದು ವಸ್ತುವಿನ ಕ್ರಿಯಾಶೀಲತೆ ಮತ್ತು ತರ್ಕವೇ ಹೊರತು ಕಲಾವಿದನ ವ್ಯಕ್ತಿತ್ವವಲ್ಲ. ತನ್ನದೇ ಆದ ಪರಂಪರೆ, ಕ್ರಿಯಾಶೀಲತೆ, ತರ್ಕ ಮತ್ತು ಭವಿಷ್ಯವನ್ನು ಹೊಂದಿರುವ ಕಲೆ ಚರಿತ್ರೆಗೆ ಸಮಾಂತರವಾಗಿರಬಹುದೇ ವಿನಾ ಪರ್ಯಾಯವಲ್ಲ. ಆದ್ದರಿಂದಲೇ ಇದು ಪ್ರಗತಿಗಿಂತ ಎಂದೂ ಮುಂದಿರುತ್ತದೆ: ಕ್ಲೀಷೆಯನ್ನೇ ಸಾಧನವಾಗಿಟ್ಟುಕೊಳ್ಳುವ ಚರಿತ್ರೆಗಿಂತಲೂ ಮುಂದಿರುತ್ತದೆ.

ಬರಹಗಾರ, ಅದರಲ್ಲೂ ಕವಿ ಬೀದಿಯ ಭಾಷೆಯನ್ನು ಬಳಸಬೇಕೆಂಬ ವಿಚಾರ ಈಚೀಚೆಗೆ ಪ್ರತಿಪಾದನೆಯಾಗುತ್ತಿದೆ. ಮೇಲ್ನೋಟಕ್ಕೆ ಜನಪರವಾಗಿ ತೋರುವ ಈ ಮಾತು ಅರ್ಥಹೀನವಾದುದು. ಇದು ಕಲೆಯನ್ನು –ಈ ಸಂದರ್ಭದಲ್ಲಿ ಸಾಹಿತ್ಯವನ್ನು– ಚರಿತ್ರೆಗೆ ಅಡಿಯಾಳಾಗಿಸುವ ಪ್ರಯತ್ನ. ಮನುಷ್ಯನಿಗೆ ಇನ್ನು ಬೆಳವಣಿಗೆಯ ಅಗತ್ಯವೇ ಇಲ್ಲವೆಂಬ ತೀರ್ಮಾನಕ್ಕೆ ಬಂದ ಮೇಲಷ್ಟೇ ಸಾಹಿತ್ಯ ಜನರ ಭಾಷೆಯನ್ನಾಡಬೇಕು. ಇಲ್ಲವಾದಲ್ಲಿ, ಜನರೇ ಸಾಹಿತ್ಯದ ಭಾಷೆಯನ್ನಾಡಬೇಕು.

ಒಟ್ಟಿನಲ್ಲಿ, ರಸಾಭಿಜ್ಞ ವಾಸ್ತವತೆ (aesthetic realism) ಮನುಷ್ಯನ ನೈತಿಕ ವಾಸ್ತವವನ್ನು ಹೆಚ್ಚು ನಿರ್ದಿಷ್ಟಗೊಳಿಸುತ್ತದೆ. ಏಕೆಂದರೆ, ರಸಾಭಿಜ್ಞತೆ ನೈತಿಕತೆಯ ತಾಯಿ. ನೈತಿಕತೆಯಲ್ಲಿ ಯಾವುದಕ್ಕಾದರೂ ನಿಷೇಧವಿದ್ದರೆ ಅದಕ್ಕೆ ಕಾರಣ ರಸಾಭಿಜ್ಞತೆಯಲ್ಲೂ ಅದಕ್ಕೆ ನಿಷೇಧವಿರುತ್ತದೆ. ಚಿಕ್ಕ ಮಗು ಅಪರಿಚಿತನನ್ನು ಕಂಡಾಗ ಸಹಜವಾಗಿಯೇ ಅಳುತ್ತದೆ, ಹಿಂಜರಿಯುತ್ತದೆ. ಇದು ಮಗುವಿನ ರಸಾಭಿಜ್ಞ ಆಯ್ಕೆ, ನೈತಿಕ ಆಯ್ಕೆ ಅಲ್ಲ.

ಒಬ್ಬ ವ್ಯಕ್ತಿಯ ರಸಾಭಿಜ್ಞ ಅನುಭವ ಗಟ್ಟಿಯಾಗಿದ್ದಷ್ಟೂ, ಅವನ ಅಭಿರುಚಿಯ ಮಟ್ಟ, ನೈತಿಕತೆಯ ಮೊನಚು, ಸ್ವಾತಂತ್ರ್ಯ (ಈ ಪಟ್ಟಿಗೆ ಸಂತೋಷ ಸೇರದಿರಬಹುದಾದರೂ) ಹೆಚ್ಚಾಗಿರುತ್ತದೆ. ಈ ಅರ್ಥದಲ್ಲಿ–ದಾರ್ಶನಿಕ ಅರ್ಥದಲ್ಲಲ್ಲ ದಾಸ್ತೊವಸ್ಕಿಯ "ಸೌಂದರ್ಯ ಪ್ರಪಂಚವನ್ನು ಕಾಪಾಡುತ್ತದೆ" ಎಂಬ ಮಾತನ್ನೂ ಮ್ಯಾಥ್ಯೂ ಅರ್ನಾಲ್ಡನ "ಕಾವ್ಯ ನಮ್ಮನ್ನು ಕಾಯುತ್ತದೆ" ಎಂಬ ನಂಬಿಕೆಯನ್ನೂ ನಾವು ತಿಳಿದುಕೊಳ್ಳಬೇಕು. ಪ್ರಾಯಶಃ ಜಗತ್ತಿಗೆ ಈಗಾಗಲೇ ನಿಧಾನವಾಗಿ ಹೋಗಿದೆಯಾದರೂ ವ್ಯಕ್ತಿಗೆ ಇನ್ನೂ ಅವಕಾಶವಿದೆ. ವ್ಯಕ್ತಿಯಲ್ಲಿ ರಸಾಭಿಜ್ಞ ಅಭಿರುಚಿ ಶೀಘ್ರವಾಗಿ

ಬೆಳೆಸುತ್ತದೆ. ತಾನು ಯಾರೆಂಬ, ತನ್ನ ಅಗತ್ಯಗಳೇನೆಂಬ ಪೂರ್ಣ ತಿಳುವಳಿಕೆ ಇಲ್ಲದಿದ್ದರೂ ಅವನಿಗೆ ತಾನು ಏನು ಇಷ್ಟಪಡುವುದಿಲ್ಲ, ತನಗೆ ಏನು ಹೊಂದಿಕೊಳ್ಳುವುದಿಲ್ಲ ಎಂಬುದು ತೀರ ಸಹಜವಾಗಿ ಗೊತ್ತಾಗುತ್ತದೆ. ಮನುಷ್ಯ ನೈತಿಕ ಜೀವಿಗಿಂತ ಮೊದಲು ರಸಾಭಿಜ್ಞ ಜೀವಿ. ಈ ಮಾತನ್ನು ಪುನಃ ಹೇಳಬಯಸುತ್ತೇನೆ.

ಆದ್ದರಿಂದಲೇ ಕಲೆ ಮನುಷ್ಯ ಜನಾಂಗದ ಬೆಳವಣಿಗೆಯ ಉಪೋತ್ಪನ್ನವಲ್ಲ; ಇದು ತಿರುಗುಮುರುಗಾಗಬೇಕು. ಇತರ ಪ್ರಾಣಿಗಳಿಗಿಂತ ನಮ್ಮನ್ನು ಭಿನ್ನವಾಗಿಸುವುದು ಭಾಷೆ ಮತ್ತು ಸಾಹಿತ್ಯ. ಭಾಷೆಯ ಅತ್ಯಂತ ಶ್ರೇಷ್ಠ ರೂಪವಾದ ಕಾವ್ಯವೇ ಮನುಷ್ಯ ಜನಾಂಗದ ಗುರಿ.

ಕಲೆ ಒಂದು ಸಮಾಜದ ಅಲ್ಪಸಂಖ್ಯಾತ ವಿಶೇಷ ಅಧಿಕಾರವಾಗಿಬಿಟ್ಟರೆ ಆ ಸಮಾಜದ ಸ್ಥಿತಿ ಅನಾರೋಗ್ಯಕರವಷ್ಟೇ ಅಲ್ಲ, ಅಪಾಯಕಾರಿಯೂ ಆಗಿರುತ್ತದೆ. ಒಂದು ಸರ್ಕಾರವನ್ನು ಗ್ರಂಥಾಲಯದಿಂದ ಪಲ್ಲಟಗೊಳಿಸಬೇಕೆಂದು (ಆಗಾಗ ಈ ಯೋಚನೆ ನನಗೆ ಬಂದಿದ್ದರೂ) ನಾನು ಹೇಳುತ್ತಿಲ್ಲ. ಆದರೆ ನಾವು ನಮ್ಮ ನಾಯಕರನ್ನು ಅವರ ರಾಜಕೀಯ ಕಾರ್ಯಕ್ರಮಗಳಿಗೆ ಬದಲಾಗಿ ಅವರ ಓದಿನ ವಿಸ್ತಾರದ ಆಧಾರದ ಮೇಲೆ ಆಯ್ಕೆ ಮಾಡಿದ್ದರೆ, ಪ್ರಪಂಚದಲ್ಲಿ ಇಷ್ಟು ದುಃಖ ಇರುತ್ತಿರಲಿಲ್ಲವೆಂದು ನನ್ನ ದೃಢ ನಂಬಿಕೆ. ನಮ್ಮ ಭವಿಷ್ಯವನ್ನು ರೂಪಿಸುವ ಸಾಮರ್ಥ್ಯವುಳ್ಳ ಯಾವುದೇ ನಾಯಕನನ್ನು ಅವನ ವಿದೇಶಾಂಗ ನೀತಿಯ ಬಗ್ಗೆ ಕೇಳಬಾರದು; ಸ್ತೆಂದಾಲ್, ಡಿಕನ್ಸ್, ದಾಸ್ತೊವೆಸ್ಕಿಯರ ಬಗ್ಗೆ ಅವನ ದೃಷ್ಟಿಕೋನಗಳು ಏನು ಎಂಬುದನ್ನು ನಾವು ಕೇಳಬೇಕು. ಮನುಷ್ಯ ಜನಾಂಗದ ವೈವಿಧ್ಯ ಮತ್ತು ವಕ್ರತೆಗಳೇ ಸಾಹಿತ್ಯದ ಜೀವ. ಮನುಷ್ಯ ಅಸ್ತಿತ್ವದ ಸಮಸ್ಯೆಗಳಿಗೆ ಸಾರಾಸಗಟು ಪರಿಹಾರವನ್ನು ನೀಡುವ ಪ್ರಯತ್ನಕ್ಕೆ ಇದು ಸರಿಯಾದ ಔಷಧಿ. ನೈತಿಕತೆಯ ರಕ್ಷಕನಾಗಿ ನಂಬಿಕೆಗಳ ಒಂದು ವ್ಯವಸ್ಥೆಗಿಂತ, ತಾತ್ತ್ವಿಕ ಸಿದ್ಧಾಂತಕ್ಕಿಂತ ಸಾಹಿತ್ಯವೇ ಹೆಚ್ಚು ನಂಬಲರ್ಹವಾದದ್ದು.

ಯಾವುದೇ ಕಾನೂನು ನಮ್ಮನ್ನು ನಮ್ಮಿಂದ ರಕ್ಷಿಸಲು ಸಾಧ್ಯವಿಲ್ಲವಾದ್ದರಿಂದ, ಸಾಹಿತ್ಯದ ವಿರುದ್ಧ ಮಾಡುವ ಅಪರಾಧವನ್ನು ಯಾವ ದಂಡಶಾಸನವೂ ತಪ್ಪಿಸಲಾರದು. ಸಾಹಿತ್ಯವನ್ನು ತುಳಿಯುವುದನ್ನು, ಬರಹಗಾರರನ್ನು ಹಿಂಸಿಸುವುದನ್ನು, ಸೆನ್ಸಾರ್‌ಶಿಪ್ಪನ್ನು, ಪುಸ್ತಕಗಳನ್ನು ಸುಡುವುದನ್ನು ನಾವು ವಿರೋಧಿಸಬಹುದು. ಆದರೆ ಅತ್ಯಂತ ಹೀನವಾದ ಒಂದು ಕ್ರಿಯೆಯ ಮುಂದೆ ನಾವು ನಿಶ್ಶಸ್ತ್ರರಾಗುತ್ತೇವೆ. ಪುಸ್ತಕಗಳನ್ನು ಓದದಿರುವುದೇ ಆ ಹೀನ ಕ್ರಿಯೆ. ಈ ಅಪರಾಧವನ್ನು ಎಸಗುವ ವ್ಯಕ್ತಿ ತನ್ನ ಇಡೀ ಜೀವಮಾನವನ್ನು ಬೆಲೆಯಾಗಿ ತೆರುತ್ತಾನೆ. ಈ ಕೃತ್ಯವನ್ನು ಒಂದು ದೇಶ ಮಾಡಿದರೆ, ಅದು ಚರಿತ್ರೆಯ ಮೂಲಕ ಬೆಲೆಯನ್ನು ತೆರುತ್ತದೆ. ರಷ್ಯಾದ ದುರಂತವೆಂದರೆ ಅಲ್ಲಿ ಸಾಹಿತ್ಯ ಅಲ್ಪಸಂಖ್ಯಾತರ, ಪ್ರಖ್ಯಾತ ಬುದ್ಧಿಜೀವಿಗಳ ವಿಶೇಷ ಅಧಿಕಾರವಾಗಿಬಿಟ್ಟಿದೆ.

ಡಿಕನ್ಸ್‌ನನ್ನು ಓದಿದ ವ್ಯಕ್ತಿಗೆ ತನ್ನ ಸ್ವಂತ ಇಚ್ಛೆಯನ್ನು ಒಂದು ವಿಚಾರದ ನೆಪದಲ್ಲಿ ಮಂಡಿಸುವುದು ಡಿಕನ್ಸ್‌ನನ್ನು ಓದದ ವ್ಯಕ್ತಿಗಿಂತ ಕಷ್ಟಕರವಾದದ್ದೆಂದೇ ನನ್ನ ನಂಬಿಕೆ. ಡಿಕನ್ಸ್, ಸ್ಟರ್ನ್, ಸ್ತೆಂದಾಲ್, ದಾಸ್ತೊವೆಸ್ಕಿ, ಫ್ಲಾಬೆ, ಬಾಲ್ಜಾಕ್, ಮೆಲ್‌ವಿಲ್, ಪ್ರೂಸ್, ಮ್ಯುಸಿಲ್ ಮುಂತಾದವರನ್ನು ಓದುವುದರ ಬಗ್ಗೆ ಹೇಳುತ್ತಿದ್ದೇನೆ: ಅರ್ಥಾತ್, ಸಾಹಿತ್ಯದ ಬಗ್ಗೆ ಹೇಳುತ್ತಿದ್ದೇನೆಯೇ ಹೊರತು ಅಕ್ಷರ ಜ್ಞಾನ ಅಥವಾ ಶಿಕ್ಷಣದ ಬಗ್ಗೆ ಅಲ್ಲ. ಅಕ್ಷರ ಬಲ್ಲ ವಿದ್ಯಾವಂತ ಒಂದು ರಾಜಕೀಯ ಅಥವಾ ಧಾರ್ಮಿಕ ಗ್ರಂಥವನ್ನು ಓದಿದ ಮೇಲೆ ತನ್ನ ವೈಯಕ್ತಿಕ ಇಚ್ಛೆಯನ್ನು ಕೊಲ್ಲಬಹುದು. ಹೀಗೆ ಮಾಡುವಾಗ ಅವನು ಒಂದು ತಾತ್ತ್ವಿಕ ನಿರ್ಧಾರವನ್ನು ತೆಗೆದುಕೊಳ್ಳುತ್ತಿರುವ ಭಾವಾವೇಶದ ಸ್ಥಿತಿಯಲ್ಲಿರಬಹುದು. ಲೆನಿನ್, ಸ್ಟಾಲಿನ್, ಹಿಟ್ಲರ್ ಎಲ್ಲರೂ ಅಕ್ಷರ ಜ್ಞಾನ ಉಳ್ಳವರೇ. ಮಾವೊ ಪದ್ಯಗಳನ್ನು ಬರೆದ. ಆದರೆ ಇವರೆಲ್ಲರೂ ತಮ್ಮ ಪುಸ್ತಕಗಳ ಪಟ್ಟಿಗಿಂತ ಉದ್ದವಾದ ಹೊಡೆ-ಪಟ್ಟಿಯನ್ನು (hit-list) ಇಟ್ಟುಕೊಂಡಿದ್ದರು.

ಈಗಾಗಲೆ ಸರ್ವವೇದ್ಯವಾಗಿರುವ ವಿಷಯದ ಬಗ್ಗೆ ಪ್ರವಚನಗಳನ್ನು ನೀಡುವುದರ ಅಪಾಯವೆಂದರೆ ಅವು ತಮ್ಮ ಸುಲಭತೆಯ ಮೂಲಕ ಆತ್ಮಸಾಕ್ಷಿಯನ್ನು ಕೆಡಿಸುತ್ತವೆ. ನಾವು ಸರಿ

ಯಾಗಿದ್ದೇವೆಂಬ ಮನಃಸ್ಥಿತಿಯನ್ನು ಉಂಟು ಮಾಡಿ ನಮಗೆ ನೈತಿಕ ನೆಮ್ಮದಿಯನ್ನು ಕೊಡುತ್ತವೆ. ಇವು ಇವುಗಳ ಪ್ರಲೋಭನೆ. ಈ ಪ್ರಲೋಭನೆಯ ಸ್ವರೂಪ ಸಾಮಾಜಿಕ ಸುಧಾರಣಾವಾದಿಗಿರುವ ಪ್ರಲೋಭನೆಯ ಸ್ವರೂಪದಂತೆಯೇ ಇರುತ್ತದೆ. "ಆಷ್‌ವಿಟ್ಜ್‌ನಂತೆ ಸಂಗೀತವನ್ನು ರಚಿಸುವುದು ಯಾರಿಂದಾದರೂ ಸಾಧ್ಯವೇ?" ಎಂದು ಅಡಾರ್ನೊ ಕೇಳುತ್ತಾನೆ. ರಷ್ಯಾದ ಚರಿತ್ರೆಯನ್ನು ಬಲ್ಲವರು ಹೆಸರುಗಳನ್ನು ಬದಲಾಯಿಸಿ ಇದೇ ಪ್ರಶ್ನೆಯನ್ನು ಪುನಃ ಪುನಃ ಕೇಳಬಹುದು. ಏಕೆಂದರೆ, ಜರ್ಮನಿಯ ಕ್ಯಾಂಪ್‌ಗಳಲ್ಲಿ ಸತ್ತವರ ಸಂಖ್ಯೆಗಿಂತ ಹೆಚ್ಚು ಜನ ಸ್ಟಾಲಿನ್ ಕಾಲದಲ್ಲಿ ಸತ್ತರು. ಅಮೆರಿಕದ ಕವಿ ಮಾರ್ಕ್ ಸ್ಟ್ರ್ಯಾಂಡ್ ಒಮ್ಮೆ ಕೇಳಿದ: "ಊಟ ಮಾಡುವುದು ಹೇಗೆ ಸಾಧ್ಯ?"

ಒಂದು ಪದ್ಯವನ್ನು ಬರೆಯಲು ಕವಿಗೆ ಹಲವಾರು ಕಾರಣಗಳಿರುತ್ತವೆ: ತನ್ನ ಪ್ರಿಯತಮೆಯನ್ನು ಒಲಿಸಿಕೊಳ್ಳಲು, ಸುತ್ತಣ ವಾಸ್ತವದ ಬಗ್ಗೆ (ಅದು ಪ್ರಕೃತಿಯೇ ಆಗಿರಲಿ) ತನ್ನ ದೃಷ್ಟಿಕೋನವನ್ನು ಅಭಿವ್ಯಕ್ತಿಸಲು, ಒಂದು ನಿರ್ದಿಷ್ಟ ಗಳಿಗೆಯಲ್ಲಿದ್ದ ತನ್ನ ಮಾನಸಿಕ ಸ್ಥಿತಿಯನ್ನು ಸೆರೆಹಿಡಿಯಲು ಮತ್ತು ಪ್ರಪಂಚದಲ್ಲಿ ತನ್ನ ಗುರುತನ್ನು ಬಿಟ್ಟು ಹೋಗಲು. ಅವನು ಪದ್ಯದ ಮೊರೆ ಹೋಗುವುದಕ್ಕೆ ಪ್ರಾಯಶಃ ಅನುಕರಣೆಗೆ ಸಂಬಂಧಪಟ್ಟ ಸುಪ್ತ ಕಾರಣಗಳಿವೆ. ಬಿಳಿ ಹಾಳೆಯ ಮೇಲೆ ಮೇಲಿಂದ ಕೆಳಗೆ ಮೂಡುವ ಪದಗಳು ಅವನಿಗೆ ಪ್ರಪಂಚದಲ್ಲಿ ತನ್ನ ಸ್ಥಿತಿಯನ್ನು ನೆನಪಿಸುತ್ತವೆ. ಪದ್ಯ ಬರೆಯುವ ಪ್ರಯತ್ನದ ತತ್‌ಕ್ಷಣದ ಪರಿಣಾಮವೆಂದರೆ ಪದ್ಯದ ಮೇಲೆಯೇ ಅವಲಂಬಿತನಾಗಿಬಿಡುವ ಮನಃಸ್ಥಿತಿ ಕವಿಗೆ ಉಂಟಾಗುವುದು. ಈ ಅವಲಂಬನೆ ಸಮಗ್ರವಾದದ್ದು ಮತ್ತು ಯಾವ ಅಡೆತಡೆ ಇಲ್ಲದ್ದು. ಏಕೆಂದರೆ ಭಾಷೆಗೆ ಪ್ರಾಪಂಚಿಕ ಸಾಮರ್ಥ್ಯದಿಂದ ಪ್ರಾಪ್ತವಾದ ಅಗಾಧ ಶಕ್ತಿ ಇರುತ್ತದೆ. ಈ ಸಾಮರ್ಥ್ಯ ಪದ್ಯದ ಗುಣಮಟ್ಟದ ಆಧಾರದ ಮೇಲೆ ನಿಲ್ಲುತ್ತದೆಯೇ ಹೊರತು ಆ ಭಾಷೆಯನ್ನಾಡುವ ದೇಶದ ಮೇಲಲ್ಲ.

ಯಾವುದೇ ಭಾಷೆಯಲ್ಲಿ ಇವತ್ತು ಬರೆಯುವುದರಿಂದ ಭವಿಷ್ಯದಲ್ಲಿ ಆ ಭಾಷೆಗೆ ಅಸ್ತಿತ್ವ ದಕ್ಕುತ್ತದೆ. ಆ ಭಾಷೆಯ ಅಸ್ತಿತ್ವದ ಸಾಧನವೇ ಕವಿ ಅಥವಾ ನನ್ನ ಪ್ರಿಯ ಆಡೆನ್ ಹೇಳಿದಂತೆ, ಕವಿಯಿಂದ ಭಾಷೆ ಬದುಕುತ್ತದೆ.

ಕವಿಗೆ ತನ್ನನ್ನು ಮೀರಿ ತನ್ನ ಕಾವ್ಯ ಉಳಿಯುತ್ತದೆ ಎಂಬ ಭರವಸೆ ಇದ್ದರೂ ಭವಿಷ್ಯದಲ್ಲಿ ತನಗೆ ಖ್ಯಾತಿ ಸಿಗಬಹುದೆಂಬುದು ಅವನು ಬರೆಯುವುದಕ್ಕೆ ಕಾರಣವಲ್ಲ. ಅವನ ಭಾಷೆ ಅವನ ಪದ್ಯದ ಸಾಲುಗಳನ್ನು ಪ್ರೇರಿಸುತ್ತದೆ ಅಥವಾ ಆಜ್ಞಾಪಿಸುತ್ತದೆ. ಪದ್ಯ ಹೇಗೆ ಮುಕ್ತಾಯವಾಗಬಹುದೆಂದು ಪ್ರಾರಂಭದಲ್ಲಿ ಅವನಿಗೇ ಗೊತ್ತಿರುವುದಿಲ್ಲ. ಅವನು ಅಂದುಕೊಂಡದ್ದಕ್ಕಿಂತ ಉತ್ತಮವಾದ ಮುಕ್ತಾಯ ಪದ್ಯಕ್ಕೆ ಸಿಕ್ಕಿಬಿಡಬಹುದು; ಇದರಿಂದ ಅವನು ಚಕಿತನಾಗಬಹುದು. ಒಮ್ಮೊಮ್ಮೆ ಅವನ ಚಿಂತನೆಗಳು ಅವನು ಎಣಿಸಿದ್ದಕ್ಕಿಂತ ಮುಂದೆ ಹೋಗಿಬಿಡಬಹುದು. ಇಂತಹ ಗಳಿಗೆಗಳಲ್ಲಿ ಭಾಷೆಯ ಭವಿಷ್ಯ ಅದರ ವರ್ತಮಾನದ ಮೇಲೆ ದಾಳಿ ಮಾಡುತ್ತದೆ.

ಎಲ್ಲರಿಗೂ ತಿಳಿದಿರುವಂತೆ ಮೂರು ರೀತಿಯ ಗ್ರಹಿಕೆಗಳಿವೆ: ವಿಶ್ಲೇಷಣೆ ದರ್ಶನ. ಅಂತರ್ದೃಷ್ಟಿ ಮತ್ತು (ಬೈಬಲ್ಲಿನ ಪ್ರವಾದಿಗಳಿಗೆ ತಿಳಿದಿದ್ದ ದಿವ್ಯಜ್ಞಾನ.) ಕಾವ್ಯ ಈ ಮೂರನ್ನೂ ಒಟ್ಟಾಗಿ ಉಪಯೋಗಿಸುವುದರಿಂದ ಸಾಹಿತ್ಯದ ಇತರ ಪ್ರಕಾರಗಳಿಗಿಂತ ಭಿನ್ನವಾಗಿರುತ್ತದೆ. ಎಲ್ಲಾ ಭಾಷೆಗಳಲ್ಲೂ ಈ ಮೂರು ರೀತಿಯ ಗ್ರಹಿಕೆಗಳಿರುತ್ತವೆ. ಕೆಲವು ಸಲ ಒಂದು ಪದ ಪ್ರಯೋಗದಿಂದ, ಒಂದು ಪ್ರಾಸದಿಂದ ಯಾರೂ ಕಾಣದಂತಹ ಮತ್ತು ತಾನೇ ಅಪೇಕ್ಷೆಪಟ್ಟಿರದಂತಹ ಸ್ಥಿತಿಯನ್ನು ಕವಿ ತಲಪುತ್ತಾನೆ. ಕಾವ್ಯ ರಚನೆ ಅವನ ಆತ್ಮಸಾಕ್ಷಿಯನ್ನೂ ಅವನು ಜಗತ್ತನ್ನು ಪರಿಭಾವಿಸುವುದನ್ನೂ ತೀವ್ರಗೊಳಿಸುವ ಅಸಾಧಾರಣ ಪ್ರಕ್ರಿಯೆ. ಈ ತೀವ್ರತೆಯನ್ನು ಒಮ್ಮೆ ಅನುಭವಿಸಿದವನು ಇನ್ನೊಮ್ಮೆ ಅನುಭವಿಸುವ ಅವಕಾಶವನ್ನು ಬಿಡಲಾರ. ಈ ಪ್ರಕ್ರಿಯೆಯ ಮೇಲೆ ಅವನು ಅವಲಂಬಿತನಾಗುತ್ತಾನೆ. ಮಾದಕದ್ರವ್ಯ ಮತ್ತು ಮದ್ಯದ ಮೇಲೆ ಹಲವಾರು ಅವಲಂಬಿತರಾಗುವಂತೆ. ಭಾಷೆಯ ಮೇಲೆ ಹೀಗೆ ಅವಲಂಬಿತನಾಗುವವನೇ ಕವಿ.

●

ಅನುವಾದ: ಎ.ಆರ್. ನಾಗಭೂಷಣ.

(ಕೃಪೆ: 'ಶೂದ್ರ').

## ಜೀವನ ದರ್ಶನ – 7 ★ ಕೆ.ಟಿ. ಪಾಂಡುರಂಗಿ

# ನಗು – ಕುಚೋದ್ಯ

ನಗು ನಿಸರ್ಗವು ಮನುಷ್ಯನಿಗೆ ಕೊಟ್ಟ ಒಂದು ದೊಡ್ಡ ಕಾಣಿಕೆ. ಮನುಷ್ಯನಿಗೆ ಸಂತೋಷ ವಾದಾಗ ಅವನು ನಗುವನು. ತೊಂದರೆಯನ್ನು ತಪ್ಪಿಸಿಕೊಂಡಾಗಲೂ ನಗುವನು. ಅನಿರೀಕ್ಷಿತವಾಗಿ ಕಾಲು ಜಾರಿದಾಗ ಸಾವರಿಸಿಕೊಂಡವನು ಪಾರಾದೆನು ಎಂಬ ನಗುವನ್ನು ಬೀರುವನು. ಜೀವನದ ರೀತಿನೀತಿಗಳಲ್ಲಿ ಬದಲಾವಣೆಯಾದಾಗ ನಗುವನು. ಒಬ್ಬರು ಟೋಪಿಯನ್ನು ಅಡ್ಡ ತಿಡ್ಡ ಹಾಕಿಕೊಂಡಾಗ ನಾವು ನಗುವೆವು. ಟೋಪಿಯನ್ನು ಒಂದು ರೀತಿಯಾಗಿ ಹಾಕಿ ಕೊಳ್ಳುವದು ನಮ್ಮ ಕಣ್ಣಿಗೆ ರೂಢಿಯಾಗಿರುತ್ತದೆ. ಅದಕ್ಕೆ ಭಿನ್ನವಾದ ರೀತಿಯಲ್ಲಿ ಯಾರಾದರೂ ಹಾಕಿ ಕೊಂಡರೆ ನಾವು ನಗುವೆವು. ಒಂದು ಕಾರ್ಯದಲ್ಲಿ ಓರ್ವರು ಯಶಸ್ವಿಯಾದಾಗಲೂ ನಾವು ನಗುವೆವು. ಅಯಶಸ್ವಿಯಾದಾಗಲೂ ನಗುವೆವು. ಓರ್ವ ಡೊಂಬರವನು ಅಥವಾ ಕ್ರಿಕೆಟ್ ಆಟಗಾರನು ಯಶಸ್ವಿಯಾದಾಗ ನಮ್ಮ ಮನ್ನಣೆಯನ್ನು ಸೂಚಿಸಿ ನಗುವೆವು. ಓರ್ವ ಹುಡುಗನು ಒಂದು ಸಭೆಯಲ್ಲಿ ಮಾತನಾಡಲು ಹೋಗಿ ಮುಗ್ಗರಿಸಿದಾಗ ನಗುವೆವು. ಹೀಗೆ ನಗುವು ನಮಗೆ ಒಂದು ಜೀವನದ ಸಂಗಾತಿಯಾಗಿ ನಮ್ಮ ಸಂತೋಷ ಕಷ್ಟ ಯಶಸ್ಸು ಅಪಯಶಸ್ಸುಗಳಲ್ಲಿ ಒಂದೊಂದು ರೀತಿಯಿಂದ ವ್ಯಕ್ತವಾಗಿ ನಮ್ಮ ಮನಸ್ಸಿಗೆ ಒಂದು ಊರುಗೋಲಿನಂತೆ ಸಹಾಯ ಮಾಡುತ್ತದೆ. ನಮ್ಮ ಭಾವನೆಗಳ ಅಭಿವ್ಯಂಜಕವಾಗಿ ಕಾರ್ಯಮಾಡುತ್ತದೆ.

ಇಷ್ಟೊಂದು ಉಪಯುಕ್ತವಾದ ನಗುವನ್ನು ಹೇಗೆ ಸರಿಯಾಗಿ ಉಪಯೋಗಿಸಿಕೊಳ್ಳ ಬೇಕು ಎಂಬ ಕಲೆಯನ್ನು ಸರಿಯಾಗಿ ಅರಿಯದೆ ಅನೇಕ ಸಲ ನಾವು ಅದನ್ನು ನಿರರ್ಥಕ ವಾಗಿಸುತ್ತೇವೆ. ನಗಲು ಚಿಕ್ಕ ಕಾರಣವಿದ್ದರೂ ಅಥವಾ ಕಾರಣವೇ ಇಲ್ಲದಿದ್ದರೂ ಒಮ್ಮೊಮ್ಮೆ ಗಟ್ಟಿಯಾಗಿ ನಕ್ಕುಬಿಡುತ್ತೇವೆ. ಕೆಲವರು ಮಾತು ಮಾತಿಗೆ ನಿರರ್ಥಕವಾಗಿ ನಗುತ್ತಾರೆ. ಯಾವ ಪ್ರಯೋಜನವೂ ಇಲ್ಲದೆ ದೇಶಾವರೀ ನಗೆಯುವರೂ ಕೆಲವರಿರುತ್ತಾರೆ. ಕೆಲವು ಸಲ ನಗಲು ಯೋಗ್ಯವಾದ ಕಾರಣವಿಲ್ಲದಿದ್ದರೂ ಪ್ರತಿಷ್ಠಿರವನ್ನು ಸಂತೋಷಗೊಳಿಸಲು ಬಲಾತ್ಕಾರದಿಂದ ನಗಬೇಕಾಗುತ್ತದೆ.

ಬೇರೆಯುವರನ್ನು ಕೆರಳಿಸಲು ಕುಚೋದ್ಯದ ನಗೆಯು ಬಹಳ ಉಪಯೋಗಿಸಲ್ಪಡುತ್ತದೆ. ಆ ವ್ಯಕ್ತಿಗಳ ದೋಷಗಳನ್ನು ಎತ್ತಿ ತೋರಿಸುವುದು ಇದರ ಉದ್ದೇಶವಾಗಿರುತ್ತದೆ. ಅಸೂಯೆಯೂ ಕುಚೋದ್ಯದ ನಗೆಯ ಕಾರಣವಾಗಿರುತ್ತದೆ. ಇಲ್ಲದ ಸಲ್ಲದ ಆರೋಪ ನಿಂದೆಗಳನ್ನು ಮಾಡಲೂ ಕುಚೋದ್ಯದ ನಗೆಯು ಉಪಯೋಗಿಸಲ್ಪಡುತ್ತದೆ. ಇಂಥ ಯಾವ ಕಾರಣಗಳೂ ಇಲ್ಲದೆ ಯಾವ ವ್ಯಕ್ತಿಯ ಮನಸ್ಸಿಗೂ ನೋವು ಮಾಡುವ ಉದ್ದೇಶ ವಿಲ್ಲದೆ ಜೀವನದ ಕೆಲವು ವಿಪರ್ಯಾಸಗಳನ್ನು ವಿರೋಧಾಭಾಸಗಳನ್ನೂ ಎತ್ತಿತೋರಿಸಿ ಹಾಸ್ಯವನ್ನುಂಟು ಮಾಡಿದರೂ ನಗು ಬರುತ್ತದೆ. ವ್ಯಂಗ್ಯಮಾತುಗಳು, ವ್ಯಂಗ್ಯಚಿತ್ರಗಳು, ವ್ಯಂಗ್ಯ ಮುಖ ಮುದ್ರೆ, ಕೈಸನ್ನೆಗಳೂ ನಗೆಯನ್ನು ಕುದುರಿಸುತ್ತವೆ.

ನಗೆಯು ಅವರವರ ಸಂಸ್ಕೃತಿ-ಅಭಿರುಚಿ-ಸ್ವಭಾವ ಭೇದ ನಡತೆಯನ್ನು ಸೂಚಿಸುತ್ತದೆ. ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರವರ ನಗೆಯಿಂದ ಅವರವರ ವ್ಯಕ್ತಿತ್ವವನ್ನು ಅಳೆಯಬಹುದು. ●

# ಸುವಾಸಿತ ಹಾಗೂ ಸ್ವಾದಿಷ್ಟ ಮುಖಶುದ್ಧಿಗಾಗಿ




ಚಮನ್ ಇದು ಅತ್ಯಂತ ಸ್ವಾದಿಷ್ಟ ಹಾಗೂ ರುಚಿಕರವಾದ ಚೂರ್ಣವಾಗಿದೆ. ಇದನ್ನು ಸೇವಿಸುವದರಿಂದ ಬಾಯಿಯು ಸುವಾಸಿತವಾಗುತ್ತದೆ.

## ಚಮನದಲ್ಲಿ ಏನೆಲ್ಲ ಇದೆ?



ಈ ಚಮನದಲ್ಲಿ ಜೇಷ್ಠಮಧು, ಕೇಶರ, ಏಲಕ್ಕಿ. ಲವಂಗ, ಪತ್ರಿ, ಜಾಜಿಕಾಯಿ, ಬಡೆಸೋಪ್, ಮೆಂಥಾಲ್‌ಗಳಂಥ ಅನೇಕ ಬಗೆಯ ಸುಗಂಧಿತ ಹಾಗೂ ರುಚಿಕರ ವಸ್ತುಗಳು ಒಳಗೊಂಡಿರುವವು. ಅದಕ್ಕೆಂದೇ ಇದು ಚಿಕ್ಕಮಕ್ಕಳಿಂದ ವೃದ್ಧರವರೆಗೆ ಎಲ್ಲರಿಗೂ ಅಚ್ಚುಮೆಚ್ಚು.

**ಸ್ಟಾರ್ ಕಂಪನಿ, ಬೆಳಗಾಂವ್**

M. K. Publicity

# ಮೀನುಗಳು ಹೇಗೆ ಈಜುತ್ತವೆ?

ಮೀನುಗಳು ಈಜುರೆಕ್ಕೆಗಳಿಂದ ಈಜುತ್ತವೆ ಎಂದು ನೀವು ತಿಳಿದುಕೊಂಡಿರಬಹುದು. ಬಹುತೇಕ ಮೀನುಗಳು ತಮ್ಮ ಈಜುರೆಕ್ಕೆಗಳಿಂದ ಚಲಿಸಿದರೂ ತಮ್ಮ ದೇಹದ ಹಿಂದಿನ ಅರ್ಧಭಾಗ ಮತ್ತು ಬಾಲದಿಂದ ಆಂಗ್ಲಭಾಷೆಯ ಎಸ್ ಆಕಾರದ ಚಲನೆ ಮಾಡುತ್ತಾ ಈಜುತ್ತವೆ. ಈ ಈಜುವ ಚಲನೆ ಮಾಡಲು ಮಾಂಸಖಂಡಗಳು ಬೇಕು. ದೇಹದ ಎರಡೂ ಪಾರ್ಶ್ವದಲ್ಲಿರುವ ಬಿಳಿಯ ಮಾಂಸ ಭಾಗವೇ ಈ ಮಾಂಸಖಂಡಗಳು. ಮಾಂಸಾಹಾರಿಗಳು ಮೀನಿನಲ್ಲಿ ತಿನ್ನುವ ಭಾಗವೇ ಇದು; ಬಾಲದ ಕೊನೆಯನ್ನು ತಿನ್ನಲು ಬರುವುದಿಲ್ಲ. ಇದಕ್ಕೆ ಬಾಲದ ಈಜುರೆಕ್ಕೆ ಎಂದು ಕರೆಯುತ್ತಾರೆ. ಈ ಬಾಲದ ಈಜುರೆಕ್ಕೆಯಲ್ಲಿ ತೆಳುವಾದ ಪದರವಿರುತ್ತದೆ. ಮೂಳೆಯ ಅರೆಯ ಪಂಜರದ ಮೇಲೆ ಈ ತೆಳುಪದರು ಇರುತ್ತದೆ.

ಈಜುವಾಗ ವೇಗವನ್ನು ಹೆಚ್ಚು ಮಾಡಲೋಸುಗ ಅತಿ ಅಗಲವಾದ, ಛಟೀರೆಂದು ಛಡಿಯಂತೆ ಹೊಡೆಯುತ್ತಾ ಚಲನೆ ಮಾಡಲು, ಈ ಮೂಳೆಯ ಅರೆಯ ಪಂಜರ ಸಹಾಯ ಮಾಡುತ್ತದೆ. ತನ್ನ ಬಾಲದಿಂದ ಅಕ್ಕಪಕ್ಕದ ಚಲನೆಗಳ ಸರಣಿಯನ್ನೇ ಮಾಡುತ್ತಾ ಮೀನು ಮುನ್ನುಗ್ಗುತ್ತಿರುತ್ತದೆ.

ಯಾವುದೇ ದಾರಿಯಿಲ್ಲದೆ, ತಂತಾನೇ ಹೆಚ್ಚುದೂರ ಮುಂಚಲಿಸಲು ಮೀನುಗಳಿಗೆ ಸಾಧ್ಯವಿಲ್ಲದೇ ಇದ್ದರೂ, ಅವುಗಳಿಗೆ ಗಮಿಸಲು ಮತ್ತು ಸಮತೋಲನ ಕಾಯ್ದುಕೊಳ್ಳುವ ಅಂಗಗಳು ಬೇಕು. ಇವುಗಳು ಈಜುರೆಕ್ಕೆಯ ರೂಪದಲ್ಲಿವೆ. ಮೀನುಗಳಿಗೆ ಎರಡು ರೀತಿಯ ಈಜುರೆಕ್ಕೆಗಳಿವೆ. ಜೋಡಿಯವು, ಒಂಟಿಯವು ಎಂದು. ಎಲ್ಲವೂ ಈಜುರೆಕ್ಕೆ ಕಿರಣಗಳು ಎಂದು ಕರೆಯಲಾಗುವ ತೆಳ್ಳನೆಯ ಮೂಳೆಗಳಿಂದ ಆಧಾರ ಪಡೆದ ತೆಳು ಚರ್ಮದಿಂದ ಮಾಡಲ್ಪಟ್ಟಿವೆ. ಇವು ಕೆಲ ವೇಳೆ ಎಷ್ಟು ಚೂಪಾಗಿರುತ್ತವೆಂದರೆ ಅನುಭವವಿಲ್ಲದ ಮೀನುಗಾರ ಈ ಮೀನುಗಳನ್ನು ಮುಟ್ಟುವಾಗ ಜಾಗ್ರತೆಯಾಗಿ ಇರದಿದ್ದರೆ, ಬೆನ್ನಿನ ಈಜು ರೆಕ್ಕೆಯಿಂದ ಗಾಸಿಗೊಳ್ಳುತ್ತಾನೆ.

ಜೋಡಿ ರೆಕ್ಕೆಗಳಲ್ಲಿ ಎದೆಯ ಈಜುರೆಕ್ಕೆಗಳು ಸೇರಿವೆ. ಇವು ಜಲಪುಪ್ಪುಸಗಳ ಬಳಿ ಇವೆ. ವಸ್ತಿಕುಹರದ ಈಜುರೆಕ್ಕೆಗಳಿವೆ. ಇವು ಹೊಟ್ಟೆಯ ಕೆಳಗೆ ಅರ್ಧ ದೂರದಲ್ಲಿವೆ. ಇವು ಮೀನಿನ ಚಲನೆಯಲ್ಲಿ 'ಬ್ರೇಕ್'ನಂತೆ ಕೆಲಸ ಮಾಡುತ್ತವೆ. ಮೀನು ನಿಲ್ಲಬೇಕಾದಾಗ, ತನ್ನ ಈ ಜೋಡಿ ಈಜುರೆಕ್ಕೆಗಳನ್ನು ನೀರಿನ ವಿರುದ್ಧ ದಿಕ್ಕಿಗೆ ತಿರುಗಿಸುತ್ತದೆ. ಈ ಜೋಡಿ ಈಜುರೆಕ್ಕೆಗಳು, ಮುಖ್ಯವಾಗಿ ಎದೆಯ ಈಜುರೆಕ್ಕೆಗಳು, ಮೀನು ತನ್ನ ನೆತ್ತಿಯ ನೇರಕ್ಕೆ ಮೇಲೆ, ಕೆಳಕ್ಕೆ ಈಜಲು ಸಹಾಯ ಮಾಡುತ್ತವೆ. ಈ ಕೆಲಸ ಈ ಈಜುರೆಕ್ಕೆಗಳನ್ನು ಸ್ವಲ್ಪ ಓರೆಯಾದ ಕೋನಕ್ಕೆ ತಿರುಗಿಸುವುದರ ಮೂಲಕ ಆಗುತ್ತಿರುತ್ತದೆ.

ಕೆಲ ಮೀನುಗಳಲ್ಲಿನ ಇನ್ನೊಂದು ಬಹುಮುಖ್ಯವಾದ ಈಜುವ ಅಂಗವೆಂದರೆ ಮೀನಿನ ವಾಯು ಚೀಲ. ಈ ವಾಯು ಚೀಲದ ಸಹಾಯದಿಂದ ಮೀನು ವಿವಿಧ ಆಳಗಳಲ್ಲಿ ಈಜಲು ಸಾಧ್ಯವಾಗಿದೆ. ಆಳ ಹೆಚ್ಚಿಲ್ಲದ ನೀರಿನಲ್ಲಿ ಅರ್ಥಾತ್ ನೀರಿನೊತ್ತಡ ಕಡಿಮೆಯಿರುವ ಪ್ರದೇಶದಲ್ಲಿ ಮತ್ತು ಹೆಚ್ಚಿನ ಆಳ ಪ್ರದೇಶದಲ್ಲಿ ಅಂದರೆ ನೀರಿನೊತ್ತಡ ಹೆಚ್ಚಿರುವ ಪ್ರದೇಶದಲ್ಲಿ ಈ ವಾಯು ಚೀಲದ ಸಹಾಯದಿಂದ ಮೀನು ಸುಲಭವಾಗಿ ಈಜಬಹುದಾಗಿದೆ.

ಒಂಟಿ ಈಜು ರೆಕ್ಕೆಯ ಪ್ರಮುಖ ಕೆಲಸವೆಂದರೆ ಮೀನು ನೇರವಾಗಿ ಚಲಿಸಲು ಅನುವಾಗುವದು. ಇವು ದೋಣಿಯ ಅಡಿಗಟ್ಟಿನ ಅಥವಾ ಹಡಗಿನ ಕೆಲಸವನ್ನೇ ಮಾಡುತ್ತಿರುತ್ತವೆ. ಈ ಅಡಿಗಟ್ಟುಗಳು ಹಡಗುಗಳು ಪಕ್ಕಕ್ಕೆ ಉರುಳುವುದನ್ನು ತಪ್ಪಿಸುತ್ತವೆ ಎಂಬುದು ಎಲ್ಲರಿಗೂ ತಿಳಿದದ್ದೇ.

ಮೀನಿಗೆ ಬೆನ್ನಿನ ಈಜುರೆಕ್ಕೆ, ಅದರ ಕೆಳಗಿರುವ ಗುದದ್ವಾರದ ಈಜುರೆಕ್ಕೆ ಹೀಗೆ ಎರಡು ಸ್ಥಿರ ಈಜು ರೆಕ್ಕೆಗಳಿವೆ. ಬಾಲದ ಈಜುರೆಕ್ಕೆ ಒಂಟಿ ಈಜುರೆಕ್ಕೆಗಳಲ್ಲೊಂದು. ●

ಜೆ.ವಿ. ಶಶಿಧರ.

# ಇಮೆಲ್ಡಾ ಮತ್ತು ಭಾರತ

● ಖುಶವಂತಸಿಂಗ್ ●

ಕಳೆದ ಸಲ ನನಗೆ ಬಂದ ದೀಪಾವಳಿ ಕಾಣಿಕೆಗಳಲ್ಲಿ ಕಾರ್ಮನ್‌ನವರೋ ಪೆಡ್ರೋಸಾ ಬರೆದ ಇಮೆಲ್ಡಾ ಮಾರ್ಕೋಸಳ ಜೀವನ ಚರಿತ್ರೆಯೂ ಒಂದು. ಫಿಲಿಪೈನ್ಸಿನ ಹೊರಗೆ ಅದನ್ನು ಮಾರಲು ಅನುಮತಿಯಿಲ್ಲವಾದ್ದರಿಂದ ಮನಿಲಾದಲ್ಲಿ ವಾಸಿಸುವ ಸರೂಪಸಿಂಗ್ ಎಂಬ ನನ್ನ ಸ್ನೇಹಿತ ಅದನ್ನು ಖರೀದಿಸಿ ಕಳಿಸಿಕೊಟ್ಟಿದ್ದ. ನಮ್ಮ ರಾಷ್ಟ್ರದಲ್ಲಿಯೂ ಹೆಣ್ಣು-ಗಂಡುಗಳನ್ನೊಳಗೊಂಡಂತೆ ಸಾಕಷ್ಟು ಇಮೆಲ್ಡಾಗಳಿದ್ದಾರೆ. ಇವರೆಲ್ಲರ ವ್ಯವಹಾರದ ರೀತಿಯೂ ಹೆಚ್ಚು ಕಡಿಮೆ ಒಂದೇ. ಸದ್ಯ ನಾನು ಇಮೆಲ್ಡಾಳ ಜೀವನ ಚರಿತ್ರೆ (ದಿ ರೈಸ್ ಆ್ಯಂಡ್ ಫಾಲ್ ಆಫ್ ಇವೆಲ್ಡಾ ಮಾರ್ಕೋಸ್)ಯ ಬಗ್ಗೆ ಈ ಲೇಖನ ಬರೆಯುತ್ತಿರುವುದಕ್ಕೆ ಇದೂ ಒಂದು ಕಾರಣ.

1929ರಲ್ಲಿ ಹುಟ್ಟಿದ ಇಮೆಲ್ಡಾ ತನ್ನ ತಾಯಿಗೆ ಮೊದಲ ಮಗು. ಅವಳ ತಂದೆಗೆ ಮೊದಲ ಹೆಂಡತಿಯಿಂದ ಐವರು ಮಕ್ಕಳಿದ್ದರು. ಮೊದಲ ಹೆಂಡತಿ ಸತ್ತ ನಂತರ ಅವನು ಇಮೆಲ್ಡಾಳ ತಾಯಿ ರೆಮೆಡಿಯೋಸ್ ಟ್ರಿನಿಡಾಡ್‌ಳನ್ನು ಮದುವೆಯಾಗಿದ್ದ. ಕಾನ್ವೆಂಟಿನಲ್ಲಿ ಅಭ್ಯಸಿಸುತ್ತಿದ್ದ ಆಕೆ ಮೊದಮೊದಲು ಈ ಮದುವೆಗೆ ಸಿದ್ಧಳಿರಲಿಲ್ಲ. ಇಮೆಲ್ಡಾಳ ತಂದೆ ಸಾಕಷ್ಟು ಮನವೊಲಿಸಿದ ನಂತರವೇ ಆಕೆ ಇದಕ್ಕೆ ಒಪ್ಪಿಕೊಂಡಳು. ಅವಳ ಹಿನ್ನೆಲೆಯ ಬಗ್ಗೆ ಸರಿಯಾದ ಮಾಹಿತಿ ದೊರೆತಿಲ್ಲ. ಆಕೆ ಅನೈತಿಕ ಸಂಬಂಧದಿಂದ ಹುಟ್ಟಿದವಳಿರಬೇಕೆಂದು ಹೇಳಲಾಗುತ್ತಿತ್ತು. ಈ ಮದುವೆಗೆ ಇಮೆಲ್ಡಾಳ ತಂದೆಯ ಮೊದಲು ಪತ್ನಿಯ ಮಕ್ಕಳು ಒಪ್ಪಲಿಲ್ಲವಾದ್ದರಿಂದ ರೆಮೆಡಿಯೋಸ್ ಗ್ಯಾರೇಜಿನಲ್ಲಿ ವಾಸಿಸಬೇಕಾಯಿತು. ಅಲ್ಲಿಯೇ ಇಮೆಲ್ಡಾ ಮತ್ತು ಅವಳ ತಮ್ಮ ಹುಟ್ಟಿದ್ದು. ಪತಿ ಮರಣ ಹೊಂದಿದ ನಂತರ ಇಮೆಲ್ಡಾಳ ತಾಯಿ ಮಕ್ಕಳಿಬ್ಬರನ್ನೂ ಕರೆದುಕೊಂಡು ಹಳ್ಳಿಯಲ್ಲಿರುತ್ತಿದ್ದ ಸಂಬಂಧಿಕರ ಮನೆಗೆ ಹೋಗಿ ಇರಲಾರಂಭಿಸಿದಳು. ಆಗ ಅವರ ಜೀವನ ಬಹಳ ದುರ್ಭರವಾಗಿತ್ತು. ಆದರೆ ಇಮೆಲ್ಡಾಳ ಬಳಿ ಒಂದು ಬಹು ದೊಡ್ಡ

ಆಸ್ತಿಯಿತ್ತು. ಅದು ಅವಳ ಸೌಂದರ್ಯ. ಆಕೆ ಹದಿನಾರು ವರ್ಷದವಳಾಗುವುದರೊಳಗೆ ಸ್ಥಳೀಯ ದಿನಪತ್ರಿಕೆಗಳು ಅವಳ "ಸುಂದರ ಮುಖ, ಅಚ್ಚ ಕಪ್ಪು ಬಣ್ಣ ಕೂದಲು, ಹೇಳಿ ಮಾಡಿಸಿದಂಥ ಅಂಗಸೌಷ್ಟವಗಳ" ಬಗೆಗೆ ಬರೆಯತೊಡಗಿದವು.

ಜನರನ್ನು ಮಂತ್ರಮುಗ್ಧರನ್ನಾಗಿಸುವ ಸೌಂದರ್ಯದೊಂದಿಗೆ ಅವಳಿಗೆ ಕೋಗಿಲೆಯಂಥ ಕಂಠವೂ ಇತ್ತು. ಫಿಲಿಪೈನ್ಸ್‌ನಲ್ಲಿದ್ದ ಅಮೆರಿಕದ ಸೈನಿಕರೆದುರು ಕಂಠಪ್ರದರ್ಶನ ನೀಡುವುದರೊಂದಿಗೆ ಆಕೆ ಗಾಯನ ರಂಗವನ್ನು ಪ್ರವೇಶಿಸಿದಳು. ನಂತರ ಮನಿಲಾಕ್ಕೆ ಹೋಗಿ ಅಲ್ಲಿಯ ವಾದ್ಯದಂಗಡಿಯಲ್ಲಿ ಸೇಲ್ಸ್ ಗರ್ಲ್ ಎಂದು ಕೆಲಸ ಮಾಡಲಾರಂಭಿಸಿದಳು. ಅಲ್ಲಿಯವರೆಗೆ ಅವಳಿಗಿದ್ದ ಒಂದೇ ಒಂದು ಮಹದಾಸೆಯೆಂದರೆ ಸುಂದರ ಶ್ರೀಮಂತ ವ್ಯಕ್ತಿಯನ್ನು ಮದುವೆಯಾಗಿ ಮಕ್ಕಳನ್ನು ಪಡೆಯುವುದು. ಆದರೆ ಅವಳ ಕೈಹಿಡಿಯಲು ಮುಂದೆ ಬರುವ ವ್ಯಕ್ತಿಗಳ ಸಂಖ್ಯೆ ಬೆಳೆಯಲಾರಂಭಿಸಿದಂತೆ ಅವಳ ಆಸೆಗಳೂ ಬೆಳೆಯತೊಡಗಿದವು. ಕೊನೆಗೆ ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ತರಬೇತಿ ಪಡೆದಿದ್ದ ಅರಿಸ್ಟನ್ ನೆಕ್‌ಪಿಲ್ ಎಂಬ ವಾಸ್ತುಶಿಲ್ಪಿಯೊಡನೆ ಅವಳ ಮದುವೆ ನಿಶ್ಚಯವಾಯಿತು. ಆದರೆ ಕುಡಿದ ಮತ್ತಿನಲ್ಲಿ ಆತ ಮೊದಲೇ ಒಬ್ಬಳನ್ನು ಮದುವೆಯಾಗಿದ್ದು, ಅವಳಿಂದ ವಿಚ್ಛೇದನ ಪಡೆಯಲು ತೊಳಲಾಡುತ್ತಿದ್ದ. ಪತನ್ಮಧ್ಯೆ ಇಮೆಲ್ಡಾ ಫಿಲಿಪೈನ್ಸ್‌ನ ಸ್ಪರ್ಧೆಯಲ್ಲಿ ಗೆದ್ದು ಸೌಂದರ್ಯ ರಾಣಿಯ ಕಿರೀಟವನ್ನು ಧರಿಸಿದಳು. ಅವಳಿಗೆ ಸಿನೇಟರ್ ಫರ್ಡಿನಾಂಡ್ ಮಾರ್ಕೋಸನ ಪರಿಚಯವಾದದ್ದು ಆಗಲೆ. ಮಾರ್ಕೋಸ್ ಆಗ ಫಿಲಿಪೈನ್ಸಿನ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿದ್ದ. ಆತ ತನ್ನನ್ನು ಮದುವೆಯಾಗುವಂತೆ ಕೇಳಿದಾಗ ಇಮೆಲ್ಡಾ ಒಪ್ಪಿಗೆ ನೀಡಿಬಿಟ್ಟಳು. ಪರಿಚಯವಾದ ಹನ್ನೊಂದು ದಿನಗಳಲ್ಲೆ ಅವರ ಮದುವೆಯಾಯಿತು. ಅದೊಂದು ತಕ್ಕ ಜೋಡಿಯಾಗಿತ್ತೆಂದು ಹೇಳಬೇಕು. ಇಬ್ಬರಿಗೂ ತಮ್ಮ ಹಿನ್ನೆಲೆಯನ್ನು ಮರೆಮಾಚಿ ಜನಸಾಮಾನ್ಯರೆದುರು ತಾವು ಆಢ್ಯ ಕುಲದವರೆಂದು ತೋರಿಸಿಕೊಳ್ಳಬೇಕಾಗಿತ್ತು. ಚುನಾವಣೆಯಲ್ಲಿ ತನ್ನ ಗಂಡನ ಪರವಾಗಿ ಭಾರಿ ಪ್ರಚಾರ ನಡೆಸಿದ ಇಮೆಲ್ಡಾಳ ಯತ್ನ ಯಶಸ್ವಿಯಾಯಿತು. ಮಾರ್ಕೋಸ್ ಫಿಲಿಪೈನ್ಸ್ ಗಣರಾಜ್ಯದ ಹೊಸ ಅಧ್ಯಕ್ಷನಾದ. ಕುಲೀನ ಮನೆತನದವರೆಂಬ ಹೊಸ ಇಮೇಜ್ ಬೆಳೆಸಿಕೊಳ್ಳುವ ಈ ದಂಪತಿಯ ಯತ್ನ ಆರಂಭವಾದದ್ದು ಆಗಲೇ.

ಕೊಲೆಯ ಆಪಾದನೆ ಎದುರಿಸಿದ್ದ ಫರ್ಡಿನಾಂಡ್ ಮಾರ್ಕೋಸ್ ಶಿಕ್ಷೆಯಾಗುವುದನ್ನು ಸ್ವಲ್ಪದರಲ್ಲೇ ತಪ್ಪಿಸಿಕೊಂಡಿದ್ದ. ಯಾವ ನೈತಿಕ ಮೌಲ್ಯಗಳೂ ಇಲ್ಲದ ಹೃದಯಹೀನ ವ್ಯಕ್ತಿಯೆಂದು ಅವನು ಖ್ಯಾತನಾಗಿದ್ದ. ಆದರೆ ಅಧ್ಯಕ್ಷನಾದ ತಕ್ಷಣ ಅವನು 'ಫಿಲಿಪೈನ್ಸಿನ ಜಾನ್ ಎಫ್. ಕೆನಡಿ'ಯಾಗಿಬಿಟ್ಟ. 'ಫಾರ್ ಎವ್ವರಿ ಟಿಯರ್ ಎ ವಿಕ್ಟರಿ' ಎಂಬ ಪುಸ್ತಕದಲ್ಲಿ ಅವನನ್ನು ಅಸಾಧಾರಣ ಬುದ್ಧಿಶಕ್ತಿಯ ವಿದ್ಯಾರ್ಥಿ, ಯಶಸ್ವಿ ರಾಜಕಾರಣಿ ಮತ್ತು ಯುದ್ಧ ವೀರನೆಂದು ವರ್ಣಿಸಲಾಗಿತ್ತು. ಗಳಿಸದಿದ್ದ ಎಷ್ಟೋ ಶೌರ್ಯ ಪದಕಗಳು ಅವನ ಎದೆಯನ್ನಲಂಕರಿಸಿದವು. ತಾನು 1965ರ ಅಧ್ಯಕ್ಷೀಯ ಚುನಾವಣೆಯಲ್ಲಿ ಜಯಗಳಿಸಲು ಈ ಪುಸ್ತಕವೇ ಕಾರಣವೆಂದು ಮಾರ್ಕೋಸ್ ನಂತರ ಒಪ್ಪಿಕೊಂಡ.

ಇಮೆಲ್ಡಾ ಸಹ ಇಂಥ ಪ್ರಚಾರದಲ್ಲಿ ಹಿಂದೆ ಬೀಳಲಿಲ್ಲ. ಜಾಕಲಿನ್ ಕೆನಡಿಗಿಂತ ಹೆಚ್ಚು ಸುಂದರಿಯಾಗಿದ್ದ ಆಕೆ ಚುನಾವಣೆಯ ನಂತರ 'ಸದ್ಗುಣಗಳ ಶಿರೋಮಣಿ'ಯಾದಳು. 'ಶ್ರೀಮಂತ ಮತ್ತು ರಾಷ್ಟ್ರದ ಬಲಿಷ್ಠ ರಾಜಕಾರಣಿಗಳ ವಂಶಸ್ಥೆ' ಎಂದು ಹೇಳಿಕೊಂಡು ತನ್ನ ಬಡತನದ ಹಿನ್ನೆಲೆಯ ನೆನಪನ್ನು ಮರೆಮಾಚಲೆತ್ನಿಸಿದಳು. ತನ್ನ ತಾಯಿಯ ಕುತ್ತು ತನ್ನ ಹಿನ್ನೆಲೆಯ ಗುಟ್ಟನ್ನು ಗಂಡನಿಗೂ ಬಿಟ್ಟುಕೊಟ್ಟಿರಲಿಲ್ಲ. ಪತಿ-ಪತ್ನಿಯರ ನಡುವಣ ಒಂದೇ ಅಂತರವೆಂದರೆ ಫರ್ಡಿನಾಂಡನಿಗೆ ಅಧಿಕಾರದಾಹ, ಇಮೆಲ್ಡಾಗೆ ಧನ ಪಿಪಾಸೆ. ತಮ್ಮ ಈ ಗುರಿಗಳನ್ನು ಸಾಧಿಸಲು ಯಾವುದೇ ಮಾರ್ಗ ಬಳಸಲೂ ಅವರು ಹಿಂದೆ ಮುಂದೆ ನೋಡಲಿಲ್ಲ. ಅಕ್ರಮ ಸಂಪತ್ತು ಅಧಿಕಾರವಿಲ್ಲದೆ ಬರುವುದಿಲ್ಲವೆಂಬುದರ ಅರಿವು ಇಮೆಲ್ಡಾಳಿಗಿತ್ತು. ಆದ್ದರಿಂದ ಆಕೆ ತನ್ನ ಗಂಡನ ಮೂಲಕ ಅಥವಾ ಸ್ವತಃ ಅಧಿಕಾರ

ಚಲಾಯಿಸುತ್ತ ಪ್ರಪಂಚದ ಅತ್ಯಂತ ಶ್ರೀಮಂತ ಮಹಿಳೆಯಾದಳು.

ಮಾರ್ಕೋಸ್ ದಂಪತಿಗಳ ಮೊದಲ ಅಧಿಕೃತ ಅಮೆರಿಕ ಭೇಟಿ ಅತ್ಯಂತ ಯಶಸ್ವಿಯಾಯಿತು. ವಿಯೆಟ್ನಾಮಿನಲ್ಲಿ ಅಮೆರಿಕದ ಹಸ್ತಕ್ಷೇಪವನ್ನು ಬೆಂಬಲಿಸಲು ಮಾರ್ಕೋಸ್ ಒಪ್ಪಿಕೊಂಡ. ಅದಕ್ಕೆ ಬದಲಾಗಿ ಫಿಲಿಪೈನ್ಸಿನಲ್ಲಿದ್ದ ಅಮೆರಿಕದ ನೌಕಾ ನೆಲೆಗಳಿಗೆ ಹೆಚ್ಚಿನ ಬಾಡಿಗೆ ಹಣ ಕೊಡಬೇಕೆಂಬುದು ಅವನ ಕರಾರು. ಇಮೆಲ್ಡಾ ತನ್ನ ಕಂಠ ಪ್ರದರ್ಶನದ ಮೂಲಕ ಅಮೆರಿಕನ್ನರ ಹೃದಯ ಗೆದ್ದಳು. ಫಿಲಿಪೈನ್ಸಿಗೆ ಮರಳಿ ಹೋದ ನಂತರ ಆಕೆ ತನ್ನ ಅರಮನೆಯಲ್ಲಿ ಪತ್ರಿಕಾ ಗೋಷ್ಠಿಯೊಂದನ್ನು ಕರೆದಳು. ಆದರೆ ಈ ಪತ್ರಿಕಾ ಗೋಷ್ಠಿ ರಾಜಕೀಯದಲ್ಲಿ ಆಕೆ ಅಪ್ರಬುದ್ಧಳೆಂಬುದನ್ನು ಎತ್ತಿ ತೋರಿಸಿತು. ಸಂಪತ್ತಿನ ಮೇಲಷ್ಟೆ ಆಕೆಯ ಕಣ್ಣಿದೆ ಎಂಬುದು ಅಲ್ಲಿ ಎಲ್ಲರಿಗೂ ಒಡೆದು ಕಂಡಿತು.

"ಅಮೆರಿಕ ಭೇಟಿಯೊಂದು ಅವರ್ಣನೀಯ ಅನುಭವ. ಆ ದೀಪಸ್ತಂಭಗಳು, ಆ ವರ್ಣ ಕಲಾಕೃತಿಗಳು, ಆ ಪ್ರೇಕ್ಷಕ ವರ್ಗ... ಆಹಾ, ರಾಕ್‌ಫೆಲರ್, ಫೋರ್ಡ್, ಲಿಂಡ್ಸೆ, ಕಲಾಕಾರ ಮಾರ್ಕ್ ಚಾಗರ್ಲರ ಭೆಟ್ಟಿ... ಚಾಗಲ್ ನನ್ನ ವರ್ಣಚಿತ್ರವೊಂದನ್ನು ರಚಿಸಲು ಇಚ್ಛಿಸಿದ್ದ. ಆದರೆ ಇಂಥದಕ್ಕೆಲ್ಲ ನನ್ನ ಪತಿ ಹೇಗೆ ಅನುಮತಿ ಕೊಟ್ಟಾರು?

"ಅಲ್ಲಿಯ ಮಹಿಳೆಯರ ಆಭರಣಗಳನ್ನಂತೂ ವರ್ಣಿಸುವುದೇ ಬೇಡ. ನಾನು ನನ್ನ ವಜ್ರಾಭರಣಗಳ ಬದಲು ಮುತ್ತು ರತ್ನಗಳನ್ನು ಧರಿಸಲು ನಿಶ್ಚಯಿಸಿದ್ದು ಒಳ್ಳೆಯದಾಯಿತು. ಏಕೆಂದರೆ ಅಲ್ಲಿಯ ಮಹಿಳೆಯರ ಕತ್ತುಗಳು ವಜ್ರಾಭರಣಗಳಿಂದಲೇ ತುಂಬಿಹೋಗಿದ್ದವು. ಆ ಎಂಥ ಶ್ರೀಮಂತಿಕೆ ಅಲ್ಲಿ..." ಎಂದಾಕೆ ಪತ್ರಿಕಾ ಗೋಷ್ಠಿಯಲ್ಲಿ ವರ್ಣಿಸಿದಳು.

ಆದರೆ ಎಲ್ಲ ದೇಶಗಳಲ್ಲಿಯೂ 'ಮೇಲೇರುವವರ ಕಾಲು ಹಿಡಿದು ಕೆಳಗೆಳೆಯುವ ಕಿಡಿಗೇಡಿ ಜನರು' ಇದ್ದೇ ಇರುತ್ತಾರೆ. ಹಾಗೆಯೇ ಮನಿಲಾದಲ್ಲಿ ಶ್ರೀಮಂತ ಮನೆತನಗಳಾದ ಈಗಿನ ಅಧ್ಯಕ್ಷೆ ಕೋರಾಝೊನ್‌ಳ ಪತಿ, ಕುಲೀನ ವಂಶಸ್ಥ ಸಿನೇಟರ್ ಅಕ್ವಿನೋ ಇದ್ದ. ಆತ ಇಮೆಲ್ಡಾಳ ಬಡತನದ ಹಿನ್ನೆಲೆಯನ್ನು ಬಯಲಿಗೆಳೆದು ಆಢ್ಯ ಮನೆತನದವಳೆಂದು ಆಕೆ ಹೇಳಿಕೊಳ್ಳುತ್ತಿರುವುದು ಅಪ್ಪಟ ಸುಳ್ಳು ಎಂದು ತೋರಿಸಿಕೊಡುವ 'ಅಕ್ಷಮ್ಯ ಅಪರಾಧ'ವನ್ನೆಸಗಿದ. ಖ್ಯಾತ ಪತ್ರಕರ್ತೆಯಾದ ಪೆಡ್ರೋಸಾ ಸಹ ಸುಮ್ಮನೆ ಕುಳಿತುಕೊಳ್ಳದೆ ಇಮೆಲ್ಡಾಳ ಹಿನ್ನೆಲೆಯನ್ನು ಕೆದಕಲಾರಂಭಿಸಿದಳು. ಆಕೆ ಇಮೆಲ್ಡಾಳ ಸಂಬಂಧಿಕರನ್ನು ಸಂದರ್ಶಿಸಿ 1970ರಲ್ಲಿ 'ದಿ ಅನ್‌ಟೋಲ್ಡ್ ಸ್ಟೋರಿ ಆಫ್ ಇಮೆಲ್ಡಾ ಮಾರ್ಕೋಸ್' ಎಂಬ ಪುಸ್ತಕವನ್ನು ಪ್ರಕಟಿಸಿದಳು. ಅದರಲ್ಲಿ ಅವಳು ಗ್ಯಾರೇಜಿನಲ್ಲಿ ವಾಸವಾಗಿದ್ದ ದಿನಗಳ ವಿವರಣೆಯಿತ್ತು. ಈ ಪುಸ್ತಕದ ಎಲ್ಲ ಪ್ರತಿಗಳನ್ನೂ ತಾವೇ ಖರೀದಿಸಿ ಅದರ ಮಾರಾಟವನ್ನು ಬಹಿಷ್ಕರಿಸಿ, ನಂತರ ಅದರಲ್ಲಿಯ "ತಪ್ಪುಗಳನ್ನು ಸರಿಪಡಿಸಿ" ಮಾರಲು ಮಾರ್ಕೋಸ್ ದಂಪತಿಗಳು ಯತ್ನಿಸಿದರು. ಪೆಡ್ರೋಸಾಳೆದುರು ನಿಜ ಸಂಗತಿಗಳನ್ನು ಬಹಿರಂಗಪಡಿಸಿದವರು ತಮ್ಮ ಹೇಳಿಕೆಗಳನ್ನು ಹಿಂತೆಗೆದುಕೊಳ್ಳುವಂತೆ ಲಂಚ ನೀಡಲಾಯಿತು. ಆದರೆ ಅವರ ಪ್ರಯತ್ನ ಯಶಸ್ವಿಯಾಗಲಿಲ್ಲ. ಆಗ ಈ ರೀತಿ ತನ್ನ ಹಿನ್ನೆಲೆ ಬಹಿರಂಗವಾದುದಕ್ಕೆ ಇಮೆಲ್ಡಾಳ ಪ್ರತಿಕ್ರಿಯೆಯೆಂದರೆ "ಬಡತನದಲ್ಲಿದ್ದದ್ದು ತಪ್ಪೆ?" ಸತ್ಯ ಬಹಿರಂಗವಾದುದಕ್ಕಿಂತ ಹೆಚ್ಚು ಅವಳನ್ನು ಚಿಂತೆಗೀಡುಮಾಡಿದ್ದೆಂದರೆ ತನ್ನ 'ಗ್ಯಾಂಗ್' ಏನು ತಿಳಿದುಕೊಳ್ಳುತ್ತದೋ ಎಂಬುದು. ಅವಳ ಪ್ರಕಾರ ಈ 'ಗ್ಯಾಂಗ್' ಲಿಂಡನ್ ಜಾನ್ಸನ್, ಇಂದಿರಾ ಗಾಂಧಿ, ರಾಣಿ ಸಿರಿಕಿತ್, ಡೇವಿಡ್ ರಾಕ್‌ಫೆಲರ್‌ನ್ನೊಳಗೊಂಡಿತ್ತು.

ಆದರೆ ಈ ಪುಸ್ತಕದ ಪ್ರಕಟಣೆಯಿಂದ ಇಮೆಲ್ಡಾಳಿಗಿಂತ ಅವಳ ಗಂಡನಿಗೇ ಹೆಚ್ಚಿನ ಆಘಾತವಾಗಿತ್ತು. ಆಕೆ ಅವನಿಂದ ಬಚ್ಚಿಟ್ಟಿದ್ದ ಸತ್ಯ ಹೊರಬಿದ್ದಿತ್ತು. ತಾನು ಆಢ್ಯ ಕುಲದವಳೆಂದು ಆಕೆ ಹೇಳಿದಾಗ ಅವನು ಸಂಪೂರ್ಣವಾಗಿ ನಂಬಿದ್ದ. ಆದರೆ ಆಕೆ ಗ್ಯಾರೇಜಿನಲ್ಲಿ ಹರಕು ಚೀಲವೊಂದರ ಮೇಲೆ ಜನಿಸಿರಬಹುದೆಂಬ ಕಲ್ಪನೆ ಅವನಿಗೆ ಈಗ ತೀವ್ರ ನಿರಾಶೆಯನ್ನುಂಟು ಮಾಡಿತು. ಇದಾವುದರ ಪರಿವೆಯಿಲ್ಲದೆ ಇಮೆಲ್ಡಾ ಬೇರೆ-ಬೇರೆ ದೇಶಗಳಲ್ಲಿ ಆಭರಣ, ಬಟ್ಟೆಗಳನ್ನು ಖರೀದಿಸುತ್ತ ಸಂಪ

ತ್ತನ್ನು ಶೇಖರಿಸುತ್ತಿದ್ದಾಗ, ಫರ್ಡಿನಾಂಡ್ ಅಮೆರಿಕಾದ ಎರಡನೇ ದರ್ಜೆಯ ನಟಿ ಡೋವಿ ಭೀಮ್ಸ್ ಎಂಬುವಳೊಂದಿಗೆ ಪ್ರಣಯಾರಾಧನೆಯಲ್ಲಿ ತೊಡಗಿದ್ದ. ಇದು ಇಮೆಲ್ಡಾಳಿಗೆ ಗೊತ್ತಾದಾಗ ಆಕೆ ಅವನಿಗೆ ಏನೂ ಹೇಳುವ ಹಾಗಿರಲಿಲ್ಲ. ಆಕೆ ಅವನಿಗೆ ಸುಳ್ಳು ಹೇಳಿದ್ದಳು. ಅವನೀಗ ಆಕೆಯಿಂದ ಸತ್ಯವನ್ನು ಮರೆಮಾಚಿದ್ದ. ಇಮೇಜ್ ಬೆಳೆಸಿಕೊಳ್ಳುವ ಇಬ್ಬರ ಆಸೆ ನುಚ್ಚು ನೂರಾಗಿತ್ತು. ಆದರೂ ವೈಯಕ್ತಿಕವಾಗಿ ತಮ್ಮ ಆಸೆಗಳನ್ನು ಈಡೇರಿಸಿಕೊಳ್ಳಲು ಪರಸ್ಪರರ ಸಹಾಯ ಇಬ್ಬರಿಗೂ ಅವಶ್ಯವಾಗಿತ್ತು.

ಬೆದರಿಕೆ, ಸೈನ್ಯಾಡಳಿತ ಅಕ್ವಿನೋನನ್ನು ಕೊಂದ ಹಾಗೆ ವಿರೋಧಿಗಳನ್ನು ಕೊಲ್ಲುವುದು ಮುಂತಾದ ವಾಮ-ಮಾರ್ಗಗಳ ಮೂಲಕ ಮಾರ್ಕೋಸ್ ಇಪ್ಪತ್ತು ವರ್ಷಗಳ ಸುದೀರ್ಘ ಅವಧಿಯವರೆಗೆ ಅಧಿಕಾರದಲ್ಲಿದ್ದಾಗ ಇಮೆಲ್ಡಾ ಪ್ರಪಂಚದಾದ್ಯಂತ ತನ್ನ ಹೆಸರಿನಲ್ಲಿ ಕೋಟಿಗಟ್ಟಲೆ ಸಂಪತ್ತು ಶೇಖರಿಸಿದಳು. ಸರಕಾರದ ವ್ಯವಹಾರಗಳಲ್ಲಿ ಲಂಚ ಪಡೆಯುವುದು, ಸರಕಾರಿ ಸಾಲಗಳ ದುರುಪಯೋಗ ಮತ್ತು ಎಷ್ಟೋ ಬಾರಿ ಸರಕಾರಕ್ಕೆ ನೀಡಲಾದ ಸಾಲಗಳನ್ನು ತನ್ನ ಬ್ಯಾಂಕ್ ಖಾತೆಗೆ ಜಮಾ ಮಾಡುವ ಮೂಲಕ ಇಮೆಲ್ಡಾ ಸಂಗ್ರಹಿಸಿಟ್ಟಿದ್ದ ಸಂಪತ್ತಿನ ಒಟ್ಟು ಒಂದೂವರೆ ಕೋಟಿ ಲಕ್ಷ ಅಮೆರಿಕನ್ ಡಾಲರುಗಳಷ್ಟಾಗಬಹುದೆಂಬುದು ಪೆಡ್ರೋಸಾಳ ಅಂದಾಜು.

ಮಾರ್ಕೋಸ್ ಅಧಿಕಾರ ಕಳೆದುಕೊಂಡ ನಂತರ ಅವನ ಅರಮನೆಯನ್ನು ಶೋಧಿಸಿದಾಗ ದೊರೆತ ಕಾಲ್ಪನಿಕ ಕಥೆಯ ಹಸ್ತಪ್ರತಿಯೊಂದು ಈ ದಂಪತಿಗಳ ರಾಜಕೀಯ ಜೀವನದ ಮೇಲೆ ಬೆಳಕು ಚೆಲ್ಲುತ್ತದೆ.

ಈ ಕಾಲ್ಪನಿಕ ಕಥೆ ಇಲೋಕೋಸ್ ಪ್ರದೇಶವನ್ನಾಳಿದ ಕೊನೆಯ ಸ್ಪ್ಯಾನಿಶ್ ರಾಜ ಸಾಲ್ಕೆಡೋನಿಗೆ ಸಂಬಂಧಿಸಿದ್ದು. ಅವನು ಒಮ್ಮೆ ಬಂಗಾರದ ಗುಡ್ಡವೊಂದನ್ನು ಕಂಡು ಹಿಡಿದು ಭೂಮಿಯ ಮೇಲೆ ವಾಸಿಸುವ ಅತಿ ಸಂತೋಷಭರಿತ ವ್ಯಕ್ತಿಯಾಗುತ್ತಾನೆ. ಏತನ್ಮಧ್ಯೆ ಅವನು ಆ ಪ್ರದೇಶದ ಯುವತಿಯೊಬ್ಬಳ ಪ್ರೇಮ ಪಾಶದಲ್ಲಿ ಸಿಲುಕುತ್ತಾನೆ. ಆದರೆ ಒಮ್ಮೆ ಆಕೆ ವಿವಸ್ತ್ರಳಾಗಿ ಅವನನ್ನು ರತಿಕ್ರೀಡೆಗೆ ಆಹ್ವಾನಿಸಿದಾಗ ನಪುಂಸಕನಾಗಿದ್ದ ಅವನು ಅತೀವ ದುಃಖಿತನಾಗಿ ತನ್ನ ರಾಜ್ಯ, ಸಂಪತ್ತನ್ನೆಲ್ಲ ತೊರೆದು ಓಡಿ ಹೋಗುತ್ತಾನೆ. ಕಥೆಯ ಕೊನೆಗೆ ಲೇಖಕ ಒಂದು ಪ್ರಶ್ನೆಯನ್ನು ಕೇಳುತ್ತಾನೆ. "ನಪುಂಸಕತ್ವಕ್ಕೆ ತೆರಬೇಕಾದ ಬೆಲೆ ಚಿನ್ನದ ಬೆಟ್ಟವೆ?"

ಭಾರತದಲ್ಲಿ ತಮ್ಮ ವಂಶ ಸಾಮರ್ಥ್ಯಗಳ ಬಗ್ಗೆ ದಂತ ಕಥೆಗಳನ್ನು ನಿರ್ಮಿಸಿದ ಜನ ಸಾಕಷ್ಟಿದ್ದಾರೆ. ದೊಡ್ಡ ಮನೆತನದವರೆಂಬ ಹುಚ್ಚು ಇನ್ನು ಬಿಟ್ಟಿಲ್ಲ. ಆದ್ದರಿಂದಲೇ ಇಂದು ನಮ್ಮ ರಾಷ್ಟ್ರದಲ್ಲಿ ಲೆಕ್ಕಕ್ಕೆ ಸಿಗದಷ್ಟು ರಾಜಾ ಸಾಹೇಬ, ರಾಣಿ ಸಾಹೇಬ, ನವಾಬ ಮುಂತಾದವರಿದ್ದಾರೆ. ಅದರಂತೆ ಸಾಹಿತ್ಯ, ಕಲೆ, ಮುಂತಾದ ಕ್ಷೇತ್ರಗಳಲ್ಲಿ ನೊಬೆಲ್ ಬಹುಮಾನಗಳನ್ನೊಳಗೊಂಡು ಅಂತಾರಾಷ್ಟ್ರೀಯ ಪುರಸ್ಕಾರಗಳನ್ನು ಪಡೆದವರೂ ಅಸಂಖ್ಯಾತ ಜನ. ಆದರೆ ಅದೇ ಪ್ರಮಾಣದಲ್ಲಿ ವಿದೇಶಗಳಲ್ಲಿ ಅಕ್ರಮ ಸಂಪತ್ತು ಶೇಖರಿಸಿಟ್ಟವರೂ ಇದ್ದಾರೆ. ಆ ಸಂಪತ್ತು ಇಪ್ಪತ್ತು ವರ್ಷಗಳಲ್ಲಿ ಇಮೆಲ್ಡಾ ಸಂಗ್ರಹಿಸಿದಷ್ಟಿರದಿದ್ದರೂ ಕಡಿಮೆಯೇನಿಲ್ಲ. ನಮ್ಮ ದೇಶದಲ್ಲಿ ಈ ರೀತಿ ಹಣವನ್ನು ಲೂಟಿ ಮಾಡಿದವರೆಲ್ಲ ಇಲ್ಲಿಯವರೆಗೆ ಶಿಕ್ಷೆಗೆ ಗುರಿಯಾಗಿಲ್ಲವೆಂಬುದೇ ಇದರಲ್ಲಿ ನನ್ನನ್ನು ಕೆರಳಿಸುವ ಅಂಶ. ●



ಜಿ.ಕೆ. ಚೆಸ್ಟರ್ಟನ್ ಅವರಿಗೆ ಒಂದು ಬಾರಿ ಯಾರೋ ಕೇಳಿದರು: "ಕೇವಲ ಜೇಬಿನೊಳಗೆ ಕೈಹಾಕಿ ತಿರುಗಾಡುವುದರಿಂದ ಯಾರಾದರೂ ಸುಖಮಯ ಜೀವನ ಸಾಗಿಸಬಹುದೇ?"

ಚೆಸ್ಟರ್ಟನ್ ತಮ್ಮ ಸಹಜನಗೆ ಬೀರುತ್ತಾ ಉತ್ತರವಿತ್ತರು.

"ಓಹೋ....ನಿಸ್ಸಂದೇಹವಾಗಿ ಆದರೆ ಕೈಗಳು ಬೇರೆಯವರ ಜೇಬಿನೊಳಗಿರಬೇಕು!"

## ಒಂದು ನೆನಪು

# ನಾ. ಕಸ್ತೂರಿ

● ಎಸ್.ಜೆ. ಸುಜಾತ●

ನವರಸಗಳಲ್ಲಿ ಒಂದಾದ ಹಾಸ್ಯ ನಮ್ಮ ಬದುಕಿನ ಅವಿಭಾಜ್ಯ ಅಂಗ. ಕೆಲವು ಕ್ಷಣಗಳ ಮಟ್ಟಿಗಾದರೂ ನೋವನ್ನು ಮರೆಸುವ ಶಕ್ತಿ ಹಾಸ್ಯಕ್ಕಿದೆ. ಕನ್ನಡದಲ್ಲಿ ಹಾಸ್ಯ ಲೇಖನಗಳು, ಹಾಸ್ಯ ಪತ್ರಿಕೆ, ಹಾಸ್ಯ ಸಾಹಿತಿಗಳು ಅಪರೂಪ. ಅದೇ ಕಾರಣಕ್ಕಾಗಿ ಕೊರವಂಜಿಯ ನಂತರ ಅಂಥ ಇನ್ನೊಂದು ಹಾಸ್ಯ ಪತ್ರಿಕೆ ಕನ್ನಡದಲ್ಲಿ ಹುಟ್ಟಿ ಬರಲಿಲ್ಲ. ಹಾಸ್ಯವನ್ನು ಬರೆಯುವವರ ಸಂಖ್ಯೆಯು ಇಳಿಮುಖವಾಗುತ್ತಿದೆ. ಇಂಥದರ ಮಧ್ಯದಲ್ಲಿಯೇ ಕನ್ನಡಿಗರ ಮನರಂಜಿಸಿದ ಬೀಚಿ, ರಾ.ಶಿ. ಮುಂತಾದ ಹಾಸ್ಯ ಸಾಹಿತಿಗಳ ಸಾಲಿಗೆ ಸೇರಿದ ಇನ್ನೊಂದು ಹೆಸರು ನಾ. ಕಸ್ತೂರಿಯವರದು. 89 ವರ್ಷದ ತುಂಬು ಬಾಳನ್ನು ಬಾಳಿದ ಅಪರೂಪದ ಸಾಹಿತಿ ಕಸ್ತೂರಿಯವರು ಕಳೆದ ವರ್ಷ ಈ ಲೋಕದಿಂದ ಕಣ್ಮರೆಯಾದರು.

ಇವರು ಬರೆದ "ಅನರ್ಥ ಕೋಶ" ಸಾಹಿತ್ಯ ಪ್ರಕಾರದಲ್ಲೆ, ವಿನೂತನವಾದುದು. ಇಂಥ ಒಂದು ವಿಡಂಬನ ಗ್ರಂಥ ಇತರ ಯಾವ ಭಾಷೆಯಲ್ಲೂ ಇಲ್ಲ. ಈ ಗ್ರಂಥದ ಮುನ್ನುಡಿಯಾದ 'ಓದುಗರಿಗೆ ಒಂದು ಮಾತು'ವಿನ ಕೊನೆಯ ಪ್ಯಾರಾದಲ್ಲಿ ಅವರು "ಇದನ್ನು ಒಟ್ಟಿಗೆ ಒಂದೇ ಕೂರಲ್ಲಿ ಓದಿ ಮುಗಿಸಬೇಡಿ. ಗ್ರಂಥವನ್ನು ಕೊಂಡು, ಕೈಗೆ ಎಟುಕುವಷ್ಟು ದೂರದಲ್ಲಿರಿಸಿಕೊಳ್ಳಿ. ಕಣ್ಣಲ್ಲೆನೋ ಬಂದು, ತುಟಿಯಲ್ಲೆನೋ ನಿಂತಾಗ ಸರಕ್ಕನೆಳೆದು ನಾಲ್ಕೈದು ಮಾತುಗಳನ್ನು ಅವುಗಳ ಅರ್ಥವನ್ನು ಓದಿ ಥಟಕ್ಕನೆ ರುಚಿ ಗೊತ್ತಾಗದಿದ್ದರೆ ಎರಡು ಬಾರಿ ಆಕಳಿಸಿ ಗ್ರಂಥವನ್ನು ಇನ್ನೂ ಕೊಂಚ ದೂರದಲ್ಲಿರಿಸಿ ಸಮಾಧಾನವಾಗಿರಿ" ಎಂದು ಹಾಸ್ಯ ಮಾಡಿದ್ದಾರೆ. ಸದಾಕಾಲ ಹಾಸ್ಯದಲ್ಲಿ ತೇಲುತ್ತ ವ್ಯಂಗ್ಯ ವಿಡಂಬನೆಗಳಿಗೆ ಹೆಸರಾಗಿದ್ದ ಇವರನ್ನು ಅಣಕಿಸಲೋಸುಗವೆ ದಿ॥ ಜಿ.ಪಿ. ರಾಜರತ್ನಂರವರು "ಬಣ್ಣದ ತಗಡಿನ ತುತ್ತೂರಿ ಕಾಸಿಗೆ ಕೊಂಡನು ಕಸ್ತೂರಿ" ರಚಿಸಿದ್ದರಂತೆ.

ಆಕಾಶವಾಣಿ ಎಂಬ ಹೆಸರನ್ನು ಮೈಸೂರು ರೇಡಿಯೋ ನಿಲಯಕ್ಕೆ ಸೂಚಿಸಿದವರು ಕಸ್ತೂರಿಯವರೇ ಎಂಬುದು ಎಷ್ಟು ಜನಕ್ಕೆ ಗೊತ್ತು? ಯಾವುದನ್ನೇ ಆಗಲಿ ಥಟ್ಟನೆ ಹಾಸ್ಯಮಯವಾಗಿ, ಸಾಂದರ್ಭಿಕವಾಗಿ ಹೇಳುವುದು ಇವರ ಸ್ವಭಾವ.

ಕಸ್ತೂರಿ, ಹಾಸ್ಯ ವಿಡಂಬನೆಗಳಿಗೆ ಹೆಸರಾಗಿದ್ದ ಮೊದಲ ಕನ್ನಡ ಪತ್ರಿಕೆ ಕೊರವಂಜಿ ಹಾಗೂ ಶಂಕರ್ಸ್ ವೀಕ್ಲಿಯ ಅಂಕಣಕಾರರಾಗಿದ್ದರು. ಹಾಸ್ಯ ಲೇಖನಗಳ ಕೊರತೆಯಿದ್ದಾಗ ಕೊರವಂಜಿಯನ್ನು ಹೊರ ತರುವುದರಲ್ಲಿ ರಾ.ಶಿ. ಯವರಿಗೆ ಬೆನ್ನಲುಬಾಗಿ ನಿಂತರು. ಈ ಪತ್ರಿಕೆಯಲ್ಲಿ ಕೇಫ ದಾಶರಥಿ ದೀಕ್ಷಿತ, ಟಿ. ಸುನಂದಮ್ಮ, ಅ.ರಾ.ಸೆ.ಯವರ ಹಾಸ್ಯಧಾರೆ ಆರಂಭವಾಗುವ ಮೊದಲು ಈ ಪತ್ರಿಕೆಯಲ್ಲಿ ಬೇರೆ ಬೇರೆ ಹೆಸರಿನಲ್ಲಿ ಲೇಖನಗಳನ್ನು ಬರೆದರು.

ಅನರ್ಥಕೋಶ, ಪಾತಾಳದಲ್ಲಿ ಪಾಪಚ್ಚಿ, ಗಾಳಿಗೋಪುರ, ವಕ್ರದೃಷ್ಟಿ, ಚಂಗೂಲಿ ಚಲುವೆ, ಶಂಖವಾದ್ಯ, ರಂಗನಾಯಕಿ, ಗೃಹದಾರಣ್ಯ, ಯದ್ವಾತದ್ವ, ಅಲ್ಲೋಲ ಕಲ್ಲೋಲ,




"ಅಪ್ಪಾ... ನಾನಿಷ್ಟು ಬೇಗ ಮದುವೆಯಾಗಲು ಕಾರಣವಿಷ್ಟೇ... ಎಲ್ಲಾ ವಿಷಯಗಳಿಗೂ ನಿನ್ನಿಂದ ಸಲಹೆ ಪಡೆಯಲು ನನಗಿಷ್ಟವಿಲ್ಲಾ..."

ಉಪಾಯ ವೇದಾಂತ ಮೊದಲಾದ ಅನೇಕ ಹಾಸ್ಯ ಕೃತಿಗಳು ಹಾಗೂ ಗಗ್ಗಯ್ಯನ ಗಡಿಬಿಡಿ, ವರ ಪರೀಕ್ಷೆ ಕಾಡಾನೆ ಮುಂತಾದ ಆರು ನಾಟಕಗಳ ಸೃಷ್ಟಿಕರ್ತರಾಗಿದ್ದ ಕಸ್ತೂರಿ ತಿಳಿಹಾಸ್ಯ, ಇತಿಹಾಸ, ಶಿಶು ಸಾಹಿತ್ಯ, ವಯಸ್ಕರ ಸಾಹಿತ್ಯ, ಪತ್ರಿಕಾ ಬರಹ ಹಾಗು ಆಧ್ಯಾತ್ಮಿಕ ಕ್ಷೇತ್ರಗಳಿಗೂ ಅಪಾರ ಕೊಡುಗೆ ನೀಡಿದ್ದಾರೆ. ಮೂಲತಃ ಮಲೆಯಾಳಿಯಾಗಿದ್ದರೂ, ಕನ್ನಡವನ್ನು ತಮ್ಮ ತಾಯಿ ನುಡಿಯನ್ನಾಗಿ ಮಾಡಿಕೊಂಡರು, ಕರ್ನಾಟಕವನ್ನು ತಮ್ಮ ನೆಲೆಯಾಗಿಸಿಕೊಂಡರು.

1897ರಲ್ಲಿ ಅಂದಿನ ಕೊಚ್ಚಿ ಸಂಸ್ಥಾನದಲ್ಲಿ ಜನಿಸಿದ ಕಸ್ತೂರಿ ತಿರುವನಂತಪುರದಲ್ಲಿ ಎಂ.ಎ.ಬಿ.ಎಲ್ ಪದವಿಗಳನ್ನು ಗಳಿಸಿ, 1921ರಲ್ಲಿ ಮೈಸೂರಿಗೆ ಬಂದು ನೆಲೆಸಿದರು. ಬನುಮಯ್ಯ ಕಾಲೇಜಿನಲ್ಲಿ ಏಳು ವರ್ಷ ಕಾಲ ಶಿಕ್ಷಕರಾಗಿ ದುಡಿದ ಅವರು, ಅನಂತರ ಮೈಸೂರು ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಉಪನ್ಯಾಸಕರಾದರು.

ಆ ಬಳಿಕ ಹಲವು ಶಿಕ್ಷಣ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿದ ಕಸ್ತೂರಿ 1955ರಲ್ಲಿ ದಾವಣಗೆರೆಯ ಡಿ.ಆರ್.ಎಂ. ಕಾಲೇಜಿನ ಪ್ರಾಚಾರ್ಯರಾಗಿ ನಿವೃತ್ತರಾದರು. ಅಂದಿನಿಂದ 1957ರವರೆಗೆ ಬೆಂಗಳೂರು ಆಕಾಶವಾಣಿಯಲ್ಲಿ ಸಹಾಯಕ ಕಾರ್ಯಕ್ರಮ ನಿರ್ಮಾಪಕರಾಗಿ ಕೆಲಸ ಮಾಡಿದರು.

ಸುದೀರ್ಘ ಕಾಲ ಮೈಸೂರಿನ ರಾಮಕೃಷ್ಣ ಆಶ್ರಮದ ಕಾರ್ಯದರ್ಶಿ ಯಾಗಿದ್ದ ಅವರು 1958ರಲ್ಲಿ ಸತ್ಯ ಸಾಯಿಬಾಬಾ ಸಂಸ್ಥೆ ಸೇರಿದರು.

ಪ್ರಶಾಂತಿ ನಿಲಯಂ ಪ್ರಕಟಿಸುತ್ತಿರುವ ಸನಾತನ ಸಂಸ್ಥೆಯ ಪತ್ರಿಕೆಯ ಸಂಪಾದಕರಾಗಿದ್ದ ಅವರು ಸತ್ಯ ಸಾಯಿಬಾಬಾ ಅವರ ಜೀವನ ಚರಿತ್ರೆ (ಸತ್ಯಂಶಿವಂ ಸುಂದರಂ) ಮತ್ತು ಅವರ ಉಪನ್ಯಾಸಗಳ ಸಂಪುಟ ಸಂಪಾದಕರಾಗಿ ಆಧ್ಯಾತ್ಮಿಕ ರಂಗಕ್ಕೆ ಮಹತ್ತರ ಕೊಡುಗೆ ಸಲ್ಲಿಸಿದರು.

1930ರಲ್ಲಿ ಕನ್ನಡ ಸಾಹಿತ್ಯ ರಂಗದ ಬೀಷ್ಮ ಬಿ.ಎಂ.ಶ್ರೀ ಜೊತೆ ಸೇರಿ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ವಯಸ್ಕ ಶಿಕ್ಷಣ ತರಗತಿಯನ್ನು ಪ್ರಾರಂಭಿಸಿದರು. ಇತರ ಸಹೋದ್ಯೋಗಿಗಳೊಂದಿಗೆ ಮೈಸೂರಿನ ಸುತ್ತಮುತ್ತ ಹಳ್ಳಿಗಳಲ್ಲಿ ವಯಸ್ಕರ ಶಿಕ್ಷಣ ತರಗತಿಗಳನ್ನು ನಡೆಸಿದರು. ಅನಂತರ ಈ ಕೆಲಸವನ್ನು ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಪ್ರೊಫೆಸರರಾಗಿದ್ದ ಇಗ್ಲಿಟನ್ ಮುಂದುವರಿಸಿಕೊಂಡು ಹೋದರು.

ಕಸ್ತೂರಿ ಕೇವಲ ಹಾಸ್ಯ ಮಾಡುತ್ತಿರಲಿಲ್ಲ. ಶಬ್ದಗಳಿಗೆ ಹೊಸದೊಂದು ಹಾಸ್ಯಮಯವಾದ ಅರ್ಥವನ್ನು ಸಾಂದರ್ಭಿಕವಾಗಿ ಕೊಡುತ್ತಿದ್ದರು. ಉದಾಹರಣೆಗೆ: ಅಂಪೈರು:– ಆಟ ಮುಗಿಯುತ್ತಲೇ ಬಯಲಿನಿಂದ ಬಡಿಗೆ ಕೀಳುವವ: ಆಯೋಗ:- ನಾವು ಬಯಸುವ ಹುದ್ದೆಗೆ ಪೈಪೋಟಿ ಮಾಡುವವ. ಹೀಗೆ ನೂರಾರು ಶಬ್ದಗಳಿಗೆ ವಿಡಂಬನಾತ್ಮಕ ಅರ್ಥನೀಡಿ ತಯಾರಿಸಿದ ಗ್ರಂಥವನ್ನು 'ಅನರ್ಥಕೋಶ' ಎಂದು ಕರೆದರು.

ಹಾಸ್ಯ ·ಸಾಹಿತ್ಯವೆಂದರೆ ಮನಸ್ಸಿಗೆ ತೋಚಿದ್ದನ್ನು ಬರೆಯುವುದಲ್ಲ. ಬರವಣಿಗೆ ಒಂದು ಸಾರ್ಥಕ ಅನುಭವವಾಗಬೇಕು ಎಂಬ ಮನೋಭಾವದ ತಲೆಮಾರಿಗೆ ಸೇರಿದವರು ಕಸ್ತೂರಿ. ●



# ಮರುಭೂಮಿ ವಿಸ್ತರಿಸೀತೆ?

ಲಂಡನ್ನಿನಲ್ಲಿ ದುಡಿಯುತ್ತಿರುವ ಹವಾಮಾನ ಶಾಸ್ತ್ರಿಗಳಾದ ಡೆರೆಕ್ ವಿನ್‌ಸ್ಟನ್ಲೆಯವರು ಈಗ ಹಲವು ವರ್ಷಗಳಿಂದ ಮಧ್ಯಪೂರ್ವ ಮತ್ತು ಉತ್ತರ ಆಫ್ರಿಕಗಳಲ್ಲದೆ ಭಾರತದಲ್ಲಿನ ಮಳೆ ಗಾಳಿಗಳ ಒಲವುಗಳನ್ನೂ ಅಭ್ಯಸಿಸುತ್ತಿದ್ದಾರೆ. ಭಾರತದಲ್ಲಿ ಮಾತ್ರವಲ್ಲ. ರಶಿಯದಲ್ಲಿಯೂ ಏಶಿಯದ ಇನ್ನೂ ಕೆಲ ಭಾಗಗಳಲ್ಲಿಯೂ ಬಿಟ್ಟೂ ಬಿಡದೆ ಅನೇಕ ವರ್ಷಗಳಿಂದ ಅನಾ ವೃಷ್ಟಿಯ ವರದಿಗಳು ಬರುತ್ತಿವೆ. ಬ್ರಿಟನ್ನಿನಲ್ಲಿ ಸಹ ನೀರಿನ ಕೊರತೆಯ ಕೂಗು ಎದ್ದಿದೆ.

ಕಳೆದ ಕೆಲವರ್ಷಗಳಿಂದ ಉತ್ತರ ಗೋಲಾರ್ಧದ ಅನೇಕ ಭಾಗಗಳಲ್ಲಿ ಮಳೆಯ ಪ್ರಮಾಣ ಕಡಿಮೆಯಾಗುತ್ತಿದೆ ಎಂಬುದರಲ್ಲಿ ಸಂದೇಹ ವಿಲ್ಲ. 'ನೇಚರ್' ಪತ್ರಿಕೆ ಸಂಗ್ರಹಿಸಿದ ಅಂಕಿ ಅಂಶಗಳು ಇದನ್ನು ಸ್ಪಷ್ಟಪಡಿಸುತ್ತವೆ.

ಕಳೆದ ಕೆಲ ವರ್ಷಗಳಲ್ಲಿ ಕಂಡುಬಂದ ಅನಾವೃಷ್ಟಿಯ ಈ ಒಲವನ್ನು ಹೆಚ್ಚು ಆಳವಾಗಿ ಅವಲೋಕಿಸಿದಾಗ ಅದು ತೀರಾ ಇತ್ತೀಚಿನದಲ್ಲವೆಂದೂ 1930ರಿಂದಲೂ ಅದು ಕಾಣಿಸುತ್ತಿದೆ ಎಂದೂ ತಿಳಿದು ಬಂತು. 1950ರ ನಂತರ ಕೆಲ



• ಎಸ್. ರವಿಕುಮಾರ ಮಾಗಳ •

ವರ್ಷ ಈ ಒಲವು ಸ್ಥಗಿತವಾಗಿದ್ದುದರಿಂದ ಪರಿಸ್ಥಿತಿ ಸುಧಾರಿಸಬಹುದೆಂದು ಮೂಡಿದ್ದ ಆಸೆ ಈಗೀಗ ಅಳಿಸಿಹೋಗುತ್ತಿದೆ.

ಪ್ರಪಂಚದ ಮಳೆಗಾಳಿಗಳನ್ನು ವಲಯಗಳ ಮಾದರಿಯಲ್ಲಿ ಪ್ರಾದೇಶಿಕವಾಗಿ ವಿಭಜಿಸಬಹುದು. ಸುಮಾರಾಗಿ ಅಕ್ಷಾಂಶಗಳನ್ನು ಅವಲಂಬಿಸಿರುವ ಈ ವಲಯಗಳ ಉದ್ಭವಕ್ಕೆ ಸ್ಥೂಲವಾಗಿ ಹೀಗೆ ಕಾರಣ ಹೇಳಬಹುದು. ಭೂಮಧ್ಯ ರೇಖೆಯ ಹತ್ತಿರ ಸೂರ್ಯನ ಶಾಖ ಪ್ರಖರವಾಗಿದೆ. ಧ್ರುವಗಳ ಕಡೆಗೆ ಮಂದವಾಗಿದೆ. ಭೂಮಧ್ಯ ರೇಖೆಯ ಸಮೀಪದ ವಾತಾವರಣ ಕಾಯ್ದು ವಾಯು ಮೇಲೇರಿ ಧ್ರುವಗಳ ಕಡೆ ಸಾಗಿ, ಕೆಳಗಿಳಿದು ಮತ್ತೆ ವಾಪಸ್ ಆಗುತ್ತದೆ. ಕುದಿಯುವ ನೀರಿನಲ್ಲಿ ಕಾಣಿಸುವಂತೆ ವಾತಾವರಣದಲ್ಲಿ ಸಂವರ್ತ ಧಾರೆ ಹುಟ್ಟುತ್ತದೆ. ಪೃಥ್ವಿ ತನ್ನ ಅಕ್ಷದ ಸುತ್ತ ತಿರುಗುವುದರಿಂದ ಗಾಳಿಯ ಧಾರೆ ಪಶ್ಚಿಮದಿಂದ ಪೂರ್ವಕ್ಕೆ ತಿರುಗುತ್ತದೆ.

ಇವೆರಡೂ ಪ್ರಭಾವಗಳೂ ಸೇರಿ ಪೃಥ್ವಿಯ ಮೇಲೆ ಬಲವಾದ ಮತ್ತು ದುರ್ಬಲವಾದ ಗಾಳಿಯ ಒತ್ತಡದ ಪ್ರದೇಶಗಳು ನಿರ್ಮಾಣವಾಗಿ ಸುಳಿಗಾಳಿಗಳು ಉತ್ಪನ್ನವಾಗುವವು. ಭೂಮಿಯಲ್ಲಿ ಏರುತಗ್ಗು, ನೆಲಜಲಗಳ ವಿಭಾಗಗಳಿದ್ದಿಲ್ಲವಾದರೆ ಬಹಳ ಸುಲಭವಾಗಿ ಹವಾಮಾನದ ಭವಿಷ್ಯ ಹೇಳಬಹುದಿತ್ತು! ಆದರೆ ಸಾಗರ, ಪರ್ವತಗಳು, ಕಾಡುಮೇಡುಗಳು ಗಾಳಿಯ ದಿಕ್ಕನ್ನೂ ಅದರಲ್ಲಿರುವ ಹಬೆಯ ಪ್ರಮಾಣವನ್ನು ಬದಲಿಸಿ ಮುನ್ಸೂಚನೆ ಕೊಡುವುದನ್ನು ಕಷ್ಟಕರವಾಗಿ ಮಾಡುತ್ತವೆ. ಸಮುದ್ರದ ಮೇಲಿನ ಆರ್ದ್ರವಾದ ಗಾಳಿ ಭೂಪ್ರದೇಶಗಳ ಮೇಲೆ ಹರಿದಾಗ ಮಳೆ ಬೀಳುತ್ತದೆ. ಭಾರತದ ನೆಲದ ಮೇಲೆ ಮಾರ್ಚ್-ಜೂನ್ ತಿಂಗಳುಗಳ ನಡುವೆ ಬೇಸಿಗೆಯಲ್ಲಿ ವಾತಾವರಣ ಕಾವೇರಿ ವಾಯು ಮೇಲೇರುತ್ತದೆ. ಆ ಕಡಿಮೆ ಒತ್ತಡದ ಪ್ರದೇಶವನ್ನು ತುಂಬಲು ಸಮುದ್ರದ ಮೇಲಿನ ಆರ್ದ್ರವಾದ ಗಾಳಿ ಆಗ್ನೇಯದಿಂದ ಬೀಸುತ್ತದೆ. ಇದೇ ಮನ್ಸೂನ್ ಮಳೆಗಾಳಿ. ಬಹುಕಾಲದಿಂದ ಇದು ನಡೆದು ಬಂದಿದೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಉತ್ತರ ಭಾರತದಲ್ಲಿ ಹಾಗೂ ದಕ್ಷಿಣ ಭಾರತದಲ್ಲಿ ನಿರೀಕ್ಷಿಸಿದಷ್ಟು ಮಳೆಯಾಗದೆ ಬರ ಬೀಳುತ್ತಲಿದೆ. ಇಷ್ಟು ದೀರ್ಘ ಬರಗಾಲ ಈವರೆಗೆ ಬಿದ್ದಿಲ್ಲವೆಂದು ದೃಢಪಟ್ಟಿದೆ.

ಹೀಗೇಕೆ? ಮಳೆಮೋಡಗಳೇನೋ ಉಂಟಾಗಿದ್ದವು. ಆದರೆ ಅವು ಮೊದಲಿಗಿಂತ ಹೆಚ್ಚು ದಕ್ಷಿಣಕ್ಕೆ ತೂರಿಕೊಂಡು ಹೋದವು. ಮೊದಲು ಮಳೆಯಾಗುತ್ತಿದ್ದ ಪ್ರದೇಶಗಳು ಈಗ ಜಲಕ್ಷಾಮಕ್ಕೊಳಗಾದವು.

ಇವು ಕೆಳ ವಾತಾವರಣದ ಗಾಳಿಗಳ ದಿಶಾ

ಪಲ್ಲಟಗಳು. ಆದರೆ ಮೇಲಿನ ವಾತಾವರಣದ ಪಲ್ಲಟಗಳಿಗೂ ಕೆಳಗಿನವುಗಳಿಗೂ ನಿಕಟ ಸಂಬಂಧವಿರುವುದರಿಂದ ಕೆಳಗಿನವು ದಕ್ಷಿಣ ದತ್ತ ಒತ್ತುತ್ತಿವೆ. ಅರ್ಥಾತ್ ಇಡೀ ಜಗತ್ತಿನ ವಾತಾವರಣದಲ್ಲೇ ಪಲ್ಲಟವಾಗುತ್ತಿದೆ. ಈ ಬದಲಾವಣೆಗಳಿಗೆ ಕಾರಣಗಳು ಗೊತ್ತಿಲ್ಲ ವಾದರೂ ಇವು ಆಗುತ್ತಿವೆ ಎಂಬುದು ಮಾತ್ರ ಸ್ಪಷ್ಟವಾಗುತ್ತಿದೆ. ಈ ಶತಮಾನದ ಮೊದಲ ದಶಕಗಳಲ್ಲಿ ಕಂಡು ಬರುತ್ತಿದ್ದ ಒಲವುಗಳಿಗೆ ವಿರುದ್ಧವಾಗಿ ಉತ್ತರಾರ್ಧ ಗೋಲದಲ್ಲಿ ಹವಾಮಾನ ಹೆಚ್ಚು ತಣ್ಣಗಾಗುತ್ತಿದೆ. 1968 ರಲ್ಲಿ ಧ್ರುವ ಪ್ರದೇಶದ ಸಮುದ್ರಗಳಲ್ಲಿ ಮೊದಲಿಗಿಂತ ಜಾಸ್ತಿ ಹಿಮಗಡ್ಡೆಗಳು ನಿರ್ಮಿತ ವಾದವು. ಈಚೆಗಿನ ವರ್ಷಗಳಲ್ಲಿ ಯುರೋಪಿಗೆ ಮಳೆ ತರುವ ಪಶ್ಚಿಮಾನಿಲದ WESter-lies) ಪ್ರಮಾಣ ಕುಗ್ಗುತ್ತಲೇ ಇದೆ.

ಉತ್ತರಾರ್ಧಗೋಲದಲ್ಲಿ ಹವಾಮಾನ ಕೆಡುತ್ತಿರುವುದರ ಇನ್ನೊಂದು ಉದಾಹರಣೆ ಯೆಂದರೆ 1969ರ ಸೆಪ್ಟೆಂಬರ್‌ನಲ್ಲಿ ಉತ್ತರ ಆಫ್ರಿಕದಲ್ಲಿ ಆದ ನೆರೆಹಾವಳಿ. ಇದೊಂದು ಆಕಸ್ಮಿಕವೆಂದು ಆಗ ಭಾವಿಸಲಾಗಿತ್ತು. ಈಗ ನೋಡಿದರೆ ಇದು ಶಾಶ್ವತ ಬದಲಾವಣೆಗಳ ಮೂನ್ಸೂಚನೆಯಾಗಿತ್ತು ಎಂದು ಅನಿಸುತ್ತದೆ. ಏಕೆಂದರೆ ಇನ್ನೂ ಉತ್ತರಕ್ಕೆ ಯುರೋಪಿಗೆ ಮಳೆ ತರುವ ಪಶ್ಚಿಮಾನಿಲಗಳು ಮೊದಲಿಗಿಂತ ದಕ್ಷಿಣಕ್ಕೆ ಒತ್ತತೊಡಗಿದ್ದರಿಂದಲೇ ಈ ನೆರೆ ಹಾವಳಿ ಎದ್ದಿತು.

ಉತ್ತರ ಆಫ್ರಿಕ ಮತ್ತು ಮಧ್ಯಪೂರ್ವದ ಒಂದಕ್ಕೊಂದು ದೂರವಿರುವ ಹತ್ತು ಕೇಂದ್ರ ಗಳಲ್ಲಿ ಕಳೆದ ಕೆಲ ವರ್ಷಗಳಲ್ಲಿ ಬಿದ್ದ ಮಳೆಯ ಪ್ರಮಾಣದ ಪರಿಶೀಲನೆಯ ನಂತರ ಡೆರೆಕ್ ವಿನ್‌ಸ್ಟನ್ಲೆಯವರು ಅಲ್ಲೆಲ್ಲ ಒಂದೇ ತರಹದ ಒಲವನ್ನು ಗುರುತಿಸಿದರು. ಈ ಪ್ರದೇಶದಲ್ಲಿ ಮಳೆಗಾಲ ಅಕ್ಟೋಬರಿನಿಂದ ಮೇ ತಿಂಗಳ ವರೆಗಿರುತ್ತದೆ. ಉಷ್ಣವಲಯ ಮತ್ತು ಉತ್ತರದ ತಂಪು ವಲಯಗಳ ನಡುವಿನ ಉಷ್ಣತೆಯ ಅಂತರದಿಂದ ನಿರ್ಮಾಣವಾದ ಕಡಿಮೆ ಒತ್ತಡದ ಹವಾಪ್ರದೇಶಗಳಿಂದಾಗಿ ಮಳೆ ಗಾಳಿಗಳು ಬೇಸಿಗೆಗಿಂತ ಈ ಕಾಲದಲ್ಲಿ ದಕ್ಷಿಣಕ್ಕೆ ಒತ್ತುವುದೇ ಇಲ್ಲಿ ಬೇಸಿಗೆಯ ಬದಲು ಹೇಮಂತ ವಸಂತಗಳಲ್ಲಿ ಮಳೆ ಬೀಳಲು ಕಾರಣವಾಗುತ್ತದೆ. ಇದು 1930ರಿಂದಲೂ ಇದ್ದ ಒಲವು. ಆದರೆ 1950ರ ದಶಕದ ಮಧ್ಯದಿಂದಾರಂಭಿಸಿ ಕೆಲ ವರ್ಷ ಈ ಪ್ರದೇಶದಲ್ಲಿ ಮಳೆ ಕಡಿಮೆಯಾಯಿತು. ಆದ್ದರಿಂದ ಮಳೆಗಾಳಿ ದಕ್ಷಿಣಕ್ಕೆ ಒತ್ತುವ ಒಲವು ಕುಗ್ಗಿದೆ ಎಂದು ಭ್ರಮೆ ಹುಟ್ಟಿತು. ಆದರೆ 1960ರ ದಶಕದಲ್ಲಿ ಮಳೆ ಗಾಳಿಗಳು ಮತ್ತೆ ದಕ್ಷಿಣಕ್ಕೆ ಒತ್ತುವ ಒಲವು ಮೂಡಿಬಂತು. ತತ್ಪರಿಣಾಮವಾಗಿ 1960ರ ದಶಕದಲ್ಲಿ ಉತ್ತರ ಆಫ್ರಿಕ ಮತ್ತು ಮಧ್ಯ ಪೂರ್ವದ ವಿಸ್ತಾರ ಪ್ರದೇಶದಲ್ಲಿ ಹಿಂದಿನ ದಾಖಲೆಗಳನ್ನೆಲ್ಲ ಮೀರಿ ಮಳೆಯಾಯಿತು. ಮಾತ್ರವಲ್ಲ ಅಲ್ಲಿ ವರ್ಷ ವರ್ಷವೂ ಮಳೆಯ ಪ್ರಮಾಣ ಹೆಚ್ಚುತ್ತಲೇ ಇದೆ.

ತದ್ವಿರುದ್ಧವಾಗಿ ಇನ್ನೂ ಉತ್ತರಕ್ಕೆ ಯುರೋಪಿನಲ್ಲಿ ಮಳೆಯ ಪ್ರಮಾಣ ಇಳಿಮುಖವಾಗಿದೆ. ಏಕೆಂದರೆ, ಮಳೆ ತರುವ ಗಾಳಿಗಳು ದಕ್ಷಿಣಕ್ಕೆ ಒತ್ತುತ್ತಿವೆ. ಈ ಒಲವು ಭಾರತ ಮೊದಲಾದ ಉಷ್ಣವಲಯ ದೇಶಗಳ ಮೇಲೆ ಯಾವ ತರಹದ ಪರಿಣಾಮ ಬೀರುತ್ತಿದೆ? ವಿನ್‌ಸ್ಟನ್ಲೆಯವರು ಈ ಪ್ರದೇಶದ ಉತ್ತರ ಭಾಗದ ಎಂಟು ಪ್ರಮುಖ ಕೇಂದ್ರಗಳ ಪ್ರಮಾಣಗಳನ್ನು ಹೋಲಿಸಿ ನೋಡಿದ್ದಾರೆ. ಈ ಪ್ರದೇಶದಲ್ಲೆಲ್ಲಾ ಇದಕ್ಕಿಂತ ಮೊದಲು ಮಳೆ ಸಕಾಲದಲ್ಲಿ ಆಗುತ್ತಿತ್ತು. ಪಶ್ಚಿಮದಲ್ಲಿ ಆಫ್ರಿಕದ ಮಾರಿಟಾನಿಯದಿಂದ ಹಿಡಿದು ಪೂರ್ವದಲ್ಲಿ ವಾಯುವ್ಯ ಭಾರತದವರೆಗಿನ ಪ್ರದೇಶದಲ್ಲಿ 1957ರ ನಂತರ ಮಳೆ ಕಡಿಮೆಯಾಗುತ್ತ ಹೋಗಿ ಪ್ರಸ್ತುತ ದಶಕದ ಆರಂಭದ ಹೊತ್ತಿಗೆ ಮಳೆಯ ಪ್ರಮಾಣ ಮೊದಲಿನ ಅರ್ಧಕ್ಕೆ ಇಳಿದು ಹೋಗಿದೆ. ಉತ್ತರ ಆಫ್ರಿಕದ ಮತ್ತು ಮಧ್ಯ ಪೂರ್ವದ ಕಡೆ ಏರಿಕೆ ಹೇಗೆ ಉತ್ತರೋತ್ತರವಾಗಿದೆಯೋ ಹಾಗೆ ಭಾರತ ಮತ್ತು ಇತರೆಡೆಗಳಲ್ಲಿ ಇಳಿಕೆಯೂ ಉತ್ತರೋತ್ತರವಾಗಿದೆ. ಈ ಒಲವು ಬದಲಾಗುವ ಲಕ್ಷಣಗಳೂ ಕಾಣಿಸುತ್ತಿಲ್ಲ.

ಹೀಗೆ ಇಡೀ ಮನ್ಸೂನ್ ಪ್ರದೇಶದ ದಕ್ಷಿಣಕ್ಕೆ ಒತ್ತುತ್ತಿದೆ ಮತ್ತು ಹಿಂದಿನ ಬೇಸಿಗೆ ಮಳೆ ಪ್ರದೇಶದ ಉತ್ತರ ಭಾಗಗಳಲ್ಲಿ ಈಗ ಮಳೆ ಬೀಳದೆ ಅವು ಕ್ಷಾಮ ಪ್ರದೇಶಗಳಾಗುತ್ತಿವೆ. ಇವೆಲ್ಲವೂ ಮಳೆಯನ್ನೇ ಅವಲಂಬಿಸಿ ಕೃಷಿ ಮಾಡುವ ಪ್ರದೇಶಗಳಾದ್ದರಿಂದ ಅಲ್ಲಿ ಬರ

ಗಾಲ ಬಿದ್ದು ಮರುಭೂಮಿ ಛಾಡ್ ವಿಸ್ತರಿಸು ತ್ತಿದೆ. ಭಾರತ, ಛಾಡ್, ನೈಗರ್, ವೊಲ್ಟಾದ ಉತ್ತರ ಭಾಗ, ದಹೋಮಿ, ಮಾಲಿ, ಸೆನೆ ಗಾಲ್ ಮತ್ತು ಮಾರಿಟಾನಿಯಾಗಳು ಕ್ಷಾಮ ಪೀಡಿತವಾಗಿವೆ. ಸಹರಾ ಮರುಭೂಮಿ ದಕ್ಷಿ ಣಕ್ಕೆ ಹಬ್ಬುತ್ತಿದೆ. ಹವಾಮಾನದಲ್ಲಿ ತೀವ್ರ ವಾದ ಬದಲಾವಣೆಗಳು ಜಗತ್ತಿನಲ್ಲೆಲ್ಲ ವ್ಯಕ್ತ ವಾಗುತ್ತಿವೆ. ಇದರ ಪರಿಣಾಮವಾಗಿ ಉತ್ತರ ಆಫ್ರಿಕದಂಥ ಕೆಲ ಪ್ರದೇಶಗಳಲ್ಲಿ ಮಳೆ ಹೆಚ್ಚಾ ಗಿದ್ದರೂ ಜಗತ್ತಿನ ಬಹುಭಾಗದಲ್ಲಿ ಮಳೆ ಇಳಿ ಮುಖವಾಗಿದೆ.

ಈ ಸಮಸ್ಯೆಯನ್ನು ಜಾಗತಿಕ ಹವಾಮಾನ ಸಂಸ್ಥೆಯ ತಜ್ಞರು ಅಭ್ಯಸಿಸ ತೊಡಗಿದ್ದಾರೆ. ಮಳೆ ಇಳಿಮುಖವಾಗುವುದರೊಡನೆ ಸರಾಸರಿ ಉಷ್ಣತೆ ಇಳಿಮುಖವಾಗುತ್ತಿರುವುದೂ ಗಮ ನಕ್ಕೆ ಬಂದಿದೆ. ಕೆಲ ಸಂಶೋಧಕರು ಕೆಲ ವರ್ಷ ಗಳಲ್ಲಿ ಹಿಮಯುಗ ಆರಂಭವಾಗಲಿದೆ ಎಂದು ಊಹಾಪೋಹ ಮಾಡತೊಡಗಿದ್ದಾರೆ. ಇದನ್ನು ಎಲ್ಲಾ ತಜ್ಞರು ಒಪ್ಪುವುದಿಲ್ಲ. ಆದರೆ ಉತ್ತರ ಧ್ರುವದ ಹಿಮ ಕಿರೀಟ ಬೆಳೆಯುತ್ತಿರುವುದು ನಿಜ. ಈ ಕಿರೀಟ ದಕ್ಷಿಣಕ್ಕೆ ಬೆಳೆಯುತ್ತಿರುವುದು ಪೃಥ್ವಿಯ ಹವಾಮಾನ ವಲಯಗಳು ದಕ್ಷಿಣಕ್ಕೆ ಒತ್ತುತ್ತಿರುವುದಕ್ಕೆ ಕಾರಣವಾಗಿರಬಹುದು.

ಅದೇನೇ ಇದ್ದರೂ 1700 ಇಸವಿಯ ನಂತರ ಆದ ಹವಾಮಾನ ಒಲವುಗಳಲ್ಲಿಯ ಪರಿ ವರ್ತನೆಗಳಲ್ಲೆಲ್ಲ ಈಗಿನದು ತೀಕ್ಷ್ಣವಾದುದು. ಈ ಬದಲಾವಣೆಯಿಂದ ಮನ್ಸೂನ್ ಮಳೆಯ ಮೇಲಾದ ಪರಿಣಾಮಗಳು ಅನಾಹುತಕ್ಕೆ ಎಡೆ ಮಾಡುತ್ತಿವೆ. ಯುರೋಪಿನಲ್ಲಿ ಮಳೆ ಕಡಿಮೆ ಯಾಗಿರುವುದರಿಂದ ಇನ್ನೂ ಅಂಥ ಉಗ್ರ ಪರಿಣಾಮ ಕಾಣಿಸಿಲ್ಲವಾದರೂ ಈ ಬದಲಾ ವಣೆಗಳನ್ನು ಗಂಭೀರವಾಗಿ ವಿಚಾರಿಸಬೇಕಾದ ಕಾಲ ಬಂದಿದೆ.

ಮಳೆಗಳು ದಕ್ಷಿಣಕ್ಕೆ ಸರಿದರೂ, ಉತ್ತರಕ್ಕೆ ಸರಿದರೂ ಪೃಥ್ವಿಯ ಮೇಲೆ ಬೀಳುವ ಮಳೆಯ ಒಟ್ಟು ಪ್ರಮಾಣ ಸುಮಾರಾಗಿ ಅಷ್ಟೇ ಇರು ತ್ತದೆ. ಆದರೆ ಮುನ್ಸೂನ್ ಮಳೆಗಳು ದಕ್ಷಿಣಕ್ಕೆ ಒತ್ತುತ್ತಿರುವುದರಿಂದ ಭೂ ಪ್ರದೇಶದ ಮೇಲೆ ಬೀಳುವ ಮಳೆ ಕಡಿಮೆಯಾಗಿ ಸಮುದ್ರಗಳ ಮೇಲೆ ಹೆಚ್ಚು ಮಳೆಯಾಗುತ್ತಿದೆ. ಏಕೆಂದರೆ, ಉತ್ತರದಲ್ಲಿದ್ದಷ್ಟು ಭೂಖಂಡಗಳು ದಕ್ಷಿಣ ದಲ್ಲಿಲ್ಲ. ಭೂಪ್ರದೇಶದ ಮೇಲೆ ಕಡಿಮೆ ಮಳೆಯಾಗುವುದರಿಂದ ಮಾನವನು ಬಳಸ ಬಹುದಾದ ಒಟ್ಟು ನೀರಿಗೆ ಕೊರತೆಯಾಗದೆ ಇರದು.

ಹವಾಮಾನದ ಈ ರೀತಿಯ ತೀವ್ರ ಬದಲಾ ವಣೆಗೆ ಕಾರಣವೇನೆಂದು ಸರಿಯಾಗಿ ತಿಳಿದು ಬಂದಿಲ್ಲ. ಜಗತ್ತಿನ ಎಲ್ಲ ಕಡೆಗಳಲ್ಲಿಯೂ ಅರಣ್ಯಗಳನ್ನು ಮನುಷ್ಯ ಕಡಿದು ಹಾಕಿರುವುದು ಸ್ಥಾನಿಕ ಕ್ಷಾಮಗಳಿಗೆ ಕಾರಣವಾಗಿರಬಹುದು. ಕಳೆದ ಒಂದು ಶತಮಾನದಲ್ಲಿ ಮನುಷ್ಯ ನಿರ್ಮಿತ ಕಾರ್ಖಾನೆಗಳು ಆಕಾಶಕ್ಕೆ ಉಗುಳಿದ ಹೊಗೆ ಅಗಾಧವಾಗಿದೆ. ಹೊಗೆಯಲ್ಲಿಯ ಇಂಗಾಲಾಮ್ಲ ವಾಯು ಸೂರ್ಯನಿಂದ ಬರುವ ಉಷ್ಣತೆಯನ್ನು ಹೆಚ್ಚು ಹೀರಿಕೊಳ್ಳುವು ದಲ್ಲದೆ ಭೂಮಿಯಿಂದ ಹೊರಚಿಮ್ಮುವ ಉಷ್ಣತೆಯನ್ನು ತಡೆಯುತ್ತದೆ. ಹೀಗಾಗಿ ಪೃಥ್ವಿಯ ವಾತಾವರಣದ ಉಷ್ಣತೆ ಹೆಚ್ಚಾಗ ಬೇಕಿತ್ತು. ತದ್ವಿರುದ್ಧವಾಗಿ ಈಗ ಪೃಥ್ವಿ ತಂಪಾ ಗುತ್ತಿರುವುದು ಒಂದು ಸೋಜಿಗವೇ ಸೈ. ಈ ಸೋಜಿಗಗಳಿಗಿಂತ ಈಗಿನ ಪರಿಸ್ಥಿತಿಯನ್ನು ಎದುರಿಸಲು ಅಣಿಯಾಗಬೇಕಾಗಿದೆ. ಭಾರತ ದಲ್ಲಿ ಮಾತ್ರವಲ್ಲ, ಆಫ್ರಿಕದ ವಿಶಾಲ ಪ್ರದೇಶ ದಲ್ಲಿ ಅನಾವೃಷ್ಟಿಯಿಂದ ಈಚೆಗಿನ ವರ್ಷ ಗಳಲ್ಲಿ ಮನುಷ್ಯರಿಗೆ ಹಾನಿ ಮಾತ್ರವಲ್ಲ ವಿಸ್ತಾರ ಪ್ರದೇಶಗಳಲ್ಲಿ ಅರಣ್ಯಗಳೂ ನಾಶ ವಾದವು. ನೆಲದ ಮೇಲೆ ಬೀಳುವ ಮಳೆ ಕಡಿಮೆ ಯಾದರೆ ಇಂದಿಲ್ಲ ನಾಳೆ ಮನುಷ್ಯ ಕೋಟಿ ಯನ್ನು ಉಳಿಸಲು "ಜಲ ವ್ಯವಸ್ಥೆ"ಯನ್ನು ರೂಪಿಸುವ ಅಗತ್ಯ ಖಂಡಿತ ಉಂಟಾಗು ತ್ತದೆ.

●

(ಸಾಧಾರ)

ಕೆಲವು ಮಂದಿ ಭರವಸೆಗಳನ್ನು ಮುರಿಯುವ ಖುಷಿಗಾಗಿಯೇ ಭರವಸೆಗಳನ್ನು ನೀಡುತ್ತಾರೆ.
-ವಿಲಿಯಂ ಹಜಲಿಟ್

ಆಕಾಶವಾಣಿ ಬೆಂಗಳೂರು

# ಒಗಟು ಬಿಡಿಸುವ ಗಾರುಡಿಗ

● ಜಿ.ಎನ್. ಮೋಹನ್ ●

ಹಾರುವ ಹಕ್ಕಿಗೆ ರೆಕ್ಕೆ ಜೋಡಿಸಿದವರಾರು? ಓಡುವ ಗಾಳಿ ಕಣ್ಣಿಗೇಕೆ ಬೀಳುವುದಿಲ್ಲ? ಬೀಜ ಮೊಳಕೆಯೊಡೆಯುವುದು ಹೇಗೆ? ಸಿಹಿ ತಿಂದ ತಕ್ಷಣ ಕಾಫಿ ಕುಡಿದರೆ ಅದು ಏಕೆ ಕಹಿಯಾಗಿ ರುತ್ತದೆ? ಹತ್ತಿ ಬಟ್ಟೆಯಲ್ಲಿ ಇಸ್ತ್ರಿಯ ಗುರುತು ನಿಲ್ಲುವುದಿಲ್ಲ ಏಕೆ? ಅಪ್ಪಾ! ಅತ್ತರೆ ಕಣ್ಣೀರೇಕೆ ಬರುತ್ತದೆ?

ಈ ಎಲ್ಲಾ ಯಕ್ಷ ಪ್ರಶ್ನೆಗಳಿಗೆ 'ರೇಡಿಯೋ' ಉತ್ತರ ಎಂದರೆ ನೀವು ನಂಬಲು ಸಿದ್ಧರಿದ್ದೀರಾ? ಹಾರುವ ಹಕ್ಕಿ, ಓಡುವ ಗಾಳಿ, ಕುಡಿದ ಕಾಫಿ, ಅತ್ತ ಕಣ್ಣೀರು, ಇಸ್ತ್ರಿಯ ಗುರುತಿಗೂ ಮನೆಯ ಮೂಲೆಯಲ್ಲಿರುವ ಈ ಪೆಟ್ಟಿಗೆಗೂ ಎಲ್ಲಿಂದೆಲ್ಲಿಯ ಸಂಬಂಧ?

ನಿಮ್ಮ ಈ ಕುತೂಹಲದ ಪ್ರಶ್ನೆಗಳನ್ನು ಬಿಡಿಸಲೆಂದೇ ಆಕಾಶವಾಣಿ ಹತ್ತು ಹಲವು ಬಗೆಯ ವಿಜ್ಞಾನ ಮಾಲಿಕೆಗಳನ್ನು ಹಮ್ಮಿಕೊಂಡಿದೆ. ನೀವು ನಿಮ್ಮ ರೇಡಿಯೋದ ಸ್ವಿಚ್ ತಿರುಗಿಸಿದರೆ ಸಾಕು ನಿಮ್ಮ ಬಿಡಿಸಲಾಗದ ಹಲವು ಒಗಟುಗಳಿಗೆ ಉತ್ತರ ದೊರಕುತ್ತದೆ.

ಕೇಳುಗರ ಕುತೂಹಲ ಕೆರಳಿಸಿ ಪ್ರಶ್ನೆಗಳನ್ನು ಹುಟ್ಟು ಹಾಕುವ, ಪರಿಸರದ ಘಟನೆಗಳಿಗೆ ವೈಜ್ಞಾನಿಕ ವಿವರಣೆ ನೀಡುವ, ವಿಜ್ಞಾನದ ಅರ್ಥವಾಗದ ಸೂತ್ರಗಳನ್ನು ಸರಳವಾಗಿ ಬಿಡಿಸಿ ಹೇಳುವ ನಿಟ್ಟಿನಲ್ಲಿ ಪ್ರಾರಂಭವಾದ ಈ ಗಾರುಡಿಗನಿಗೆ ಈಗ 12 ವರ್ಷ.

ಬಿ.ಬಿ.ಸಿ. ಬ್ರಿಟಿಷ್ ಬ್ರಾಡ್‌ಕಾಸ್ಟಿಂಗ್ ಕಾರ್ಪೊರೇಷನ್ ಇತ್ತೀಚೆಗೆ ತಾನೆ ಕರ್ನಾಟಕದ ಆಕಾಶವಾಣಿಯ ವಿಜ್ಞಾನ ಮಾಲಿಕೆಗಳ ಬಗ್ಗೆಯೇ ವಿಶೇಷ ರೂಪಕ ತಯಾರಿಸಿವೆ. 'ವಿಜ್ಞಾನ'ವನ್ನು ಸರಳವಾದ ಶೈಲಿಯಲ್ಲಿ ಜನಪ್ರಿಯಗೊಳಿಸುತ್ತಿರುವುದಕ್ಕೆ ಬ್ರಿಟನ್ ನೀಡಿದ ಶಹಭಾಸ್‌ಗಿರಿ ಇದು. 1975ರಲ್ಲಿ ಆಕಾಶವಾಣಿ ವಿಜ್ಞಾನ ವಿಜ್ಞಾನಿಗಳಿಗೆ ಮಾತ್ರ, ಜನಸಾಮಾನ್ಯರಿಗಲ್ಲ ಎಂಬ ಭಾವನೆಯನ್ನು ಇಲ್ಲವಾಗಿಸುವತ್ತ ವಿಜ್ಞಾನಿ ಹಾಗೂ ನಾಗರೀಕರಿಗಿರುವ ಅಂತರವನ್ನು ಕಡಿಮೆ ಮಾಡಲು ಯೋಚಿಸಿ ಇಡೀ ರಾಷ್ಟ್ರದ ಏಳು ಪ್ರಮುಖ ಕೇಂದ್ರಗಳಲ್ಲಿ ವಿಜ್ಞಾನ ಕೇಂದ್ರಗಳನ್ನು ಪ್ರಾರಂಭಿಸಿತು. ಅದರಲ್ಲಿ ಬೆಂಗಳೂರು ಆಕಾಶವಾಣಿಯೂ ಒಂದು.

ಈ 12 ವರ್ಷಗಳಲ್ಲಿ ಬೆಂಗಳೂರು ಆಕಾಶವಾಣಿಯ ಸಾಧನೆ ಅಪಾರವಾದದ್ದು. ವಿಜ್ಞಾನವನ್ನು ಪ್ರಚಾರ ಮಾಡುವ ದಿಕ್ಕಿನಲ್ಲಿ ಹಲವು ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿದೆ. ಜನಪ್ರಿಯ ವಿಜ್ಞಾನಿಗಳನ್ನು, ಜನ ಸಾಮಾನ್ಯರನ್ನು ಒಟ್ಟಿಗೆ ಕಲೆ ಹಾಕಿ ವಿಜ್ಞಾನ ಕಮ್ಮಟ ಏರ್ಪಡಿಸಿ ಹಲವು ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸಿದೆ. ಪ್ರತೀ ತಿಂಗಳೂ 18 ಗಂಟೆಗಳ ಕಾಲಾವಧಿಯಲ್ಲಿ ಭಾಷಣ, ಸಂದರ್ಶನ, ರೂಪಕ, ರಸಪ್ರಶ್ನೆ, ಸಮೀಕ್ಷೆ ವರದಿಗಳ ಮೂಲಕ ಜನಜೀವನದೊಡನೆ ಹಾದು ಹೋಗುವ ವಿಜ್ಞಾನದ ಹಲವು ರಹಸ್ಯ ಮಗ್ಗಲುಗಳನ್ನು ಕೆದಕುವ ಪ್ರಯತ್ನ ನಡೆಸಿದೆ.

'ವಿಜ್ಞಾನ ಬದುಕಿನ ಅತ್ಯಗತ್ಯ ಅಂಗ. ಎಲ್ಲ ವರ್ಗದ ಜನರನ್ನೂ ತಲುಪುವುದು ನಮ್ಮ ಗುರಿ' ಎನ್ನುವ ಈ ಕಾರ್ಯಕ್ರಮಗಳ ಅತ್ಯಂತ ಉತ್ಸಾಹಿ ನಿರ್ದೇಶಕರಾದ ಎಚ್.ಆರ್. ಕೃಷ್ಣಮೂರ್ತಿ ಮಕ್ಕಳಿಗೆ, ಮಹಿಳೆಯರಿಗೆ, ಯುವ ಜನರಿಗೆ, ಗ್ರಾಮಾಂತರ ಶ್ರೋತೃಗಳಿಗೆ, ಕಾರ್ಮಿಕ ಶ್ರೋತೃಗಳಿಗೆಂದೇ ಹಲವು ರೀತಿಯ ಕಾರ್ಯಕ್ರಮಗಳನ್ನು ಪರಿಚಯಿಸಿದ್ದಾರೆ. ಜನರಿಗೆ ಅತ್ಯಂತ ಸುಲಭ ರೀತಿಯಲ್ಲಿ ವಿಜ್ಞಾನವನ್ನು ಅರ್ಥ ಮಾಡಿಸುವ ನಿಟ್ಟಿನಲ್ಲಿ ಇವರು ಹಲವು ರೀತಿಯ ಪ್ರಯೋಗ ನಡೆಸಿದ್ದಾರೆ.

ದಿನನಿತ್ಯ ಹುಟ್ಟುವ ಪ್ರಶ್ನೆಗಳಿಗೆ ಉತ್ತರಿಸುವ 'ವಿಜ್ಞಾನ ಪ್ರಶ್ನೋತ್ತರ', ವಿಜ್ಞಾನದ ಪ್ರಗತಿಗಳನ್ನು ಬಿಂಬಿಸುವ 'ವಿಜ್ಞಾನದ ಮುನ್ನಡೆ', ಜನಜೀವನದ ಮೇಲೆ ಪರಿಣಾಮ ಬೀರುವ ಸಂಶೋಧನೆಗಳನ್ನು ಪರಿಚಯಿಸುವ 'ವಿಜ್ಞಾನ ವೈವಿಧ್ಯ!' ಮನೆಯಲ್ಲಿ ವಿಜ್ಞಾನವನ್ನು ಸರಳವಾಗಿ ಅಳವಡಿಸಿಕೊಳ್ಳಲು ಪ್ರೇರೇಪಿಸುವ 'ಉತ್ತಮ ಮನೆಯತ್ತ', ಮನೆಗೊಂದು ತೋಟ, ವಿದ್ಯುತ್ ಉಳಿಸುವುದು ಹೇಗೆ? ಔಷಧಿಯ ಬಗ್ಗೆ ನಿಮಗೇನು ಗೊತ್ತು ಹೀಗೆ ಹಲವು ಗುಟ್ಟುಗಳನ್ನು ಉಸುರುವ ಮಹಿಳಾ ಶ್ರೋತೃ ಕಾರ್ಯಕ್ರಮ, ವಿಶ್ವದ ವಿಜ್ಞಾನ ಸುದ್ದಿಗಳಿಗೆ 'ವಿಶ್ವ ವಿಜ್ಞಾನ' ಇವುಗಳ ಜೊತೆಗೆ 'ವಿಜ್ಞಾನ ಪತ್ರಿಕೆ.'

ವಿಜ್ಞಾನ ಪತ್ರಿಕೆ, ಬೆಂಗಳೂರು ಆಕಾಶವಾಣಿಯ ಹೆಮ್ಮೆಯ ಗರಿ. 'ಅಸ್ತ್ರ ಒಲೆ-ಕಗ್ಗಲೀಪುರದ ಸುನಂದ ಅವರೊಂದಿಗೆ 'ಸಂದರ್ಶನ', 'ನಾನು ಸಾಯಬೇಕು' ವೈಜ್ಞಾನಿಕ ಕಥೆ, ವೇಗ ನಿಯಂತ್ರಣಕ್ಕೆ ಡಾಪ್ಲರ್ ರಾಡಾರ್ ರೂಪಕ, ಬೆಂಕಿಯ ಮೇಲೆ ನಡಿಗೆ ಸಂದರ್ಶನ, ನಿದ್ರೆಗೊಂದು ಹೊಸಯಂತ್ರ-ವರದಿ. ಇದಲ್ಲದೆ ಕರ್ನಾಟಕದಲ್ಲಿ ಮಾಲಿನ್ಯ ನಿಯಂತ್ರಣದ ಹತ್ತು ವರ್ಷಗಳು, ದ್ವಿಚಕ್ರ ವಾಹನಗಳಲ್ಲಿ ಇಂಧನದ ಉಳಿತಾಯ, ಅಂಧರ ನೆರವಿಗೆ ಬಾವಲಿಗಳ ಸಂಶೋಧನೆ, ಸೊಳ್ಳೆ ನಿಯಂತ್ರಣಕ್ಕೆ ಹೊಸ ತಂತ್ರಗಳು ಹೀಗೆ ಜನಪ್ರಿಯ ವಿಜ್ಞಾನ ಪತ್ರಿಕೆಗಳ ರೀತಿಯಲ್ಲಿಯೇ ಹಲವು ವಿಜ್ಞಾನ ವಿಷಯಗಳನ್ನು ಕಥೆ, ಕವನ, ವರದಿ ರೂಪಕಗಳ ಮೂಲಕ ಬಿತ್ತರಿಸುತ್ತದೆ.

'ನಾಲ್ಕು ಗೋಡೆಯ ಒಳಗೆ ಕುಳಿತು ವಿಜ್ಞಾನದ ಈ ಕಾರ್ಯಕ್ರಮಗಳನ್ನು ನಿರ್ವಹಿಸುವುದು ಅತ್ಯಂತ ಕಷ್ಟದ ಕೆಲಸ' ಎನ್ನುವ ಕೃಷ್ಣಮೂರ್ತಿಯವರು ನಿಸರ್ಗದ ಒಡಲಿನಿಂದಲೇ ಹಲವು ಕಾರ್ಯಕ್ರಮಗಳನ್ನು ಹೆಕ್ಕಿದ್ದಾರೆ. ಬಂಡೀಪುರದಲ್ಲಿ 120 ಕಿ.ಮೀ. ಕಾಲ್ನಡಗೆಯಲ್ಲಿ ಹೋಗಿ 3 ದಿನಗಳ ಕಾಲ ಕಾಡಿನ ನಿಗೂಢ ರಹಸ್ಯಗಳನ್ನು ತಿಳಿದು 'ಕಾಡಿನರಸರ ನಾಡಿನಲ್ಲಿ' ಪ್ರಸಾರ ಮಾಡಿದ್ದಾರೆ. 1984ರಲ್ಲಿ ಮಕ್ಕಳನ್ನು ಬಂಡೀಪುರದ ಕಾಡಿಗೆ ಕರೆದೊಯ್ದು ಪ್ರಕೃತಿ ಶಿಕ್ಷಣ ಕಾರ್ಯಕ್ರಮದಿಂದ ತಾವು ಕಲಿತ ಪಾಠವನ್ನು ಒರೆಹಚ್ಚಿ ನೋಡುವ ರೀತಿ ಕಲಿಸಿದ್ದಾರೆ.

ಈ ಮಧ್ಯೆ ಜಲಮಾಲಿನ್ಯ, ವಾಯುಮಾಲಿನ್ಯ, ಅರಣ್ಯನಾಶದ ವಿರುದ್ಧ ಜಾಗೃತಿ ಮೂಡಿಸುವಲ್ಲಿಯೂ ಆಕಾಶವಾಣಿ ಯಶಸ್ವಿಯಾಗಿದೆ. ಹಲವು ರೀತಿಯ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಆಕಾಶವಾಣಿ ಒಂದು ವೇದಿಕೆಯಾಗಿ ಕೆಲಸ ಮಾಡಿದೆ. ಶ್ರೀರಂಗಪಟ್ಟಣದಲ್ಲಿ ಕಾವೇರಿ ನದಿಯ ದಡದಲ್ಲಿದ್ದ ಕಾರ್ಖಾನೆ ಪ್ರತೀದಿನವೂ ನದಿಯ ನೀರಿಗೆ ತನ್ನ ಕಾರ್ಖಾನೆಯ ಕೊಳಚೆಯನ್ನು ಸೇರಿಸುತ್ತಿತ್ತು. ಇದರಿಂದ ಕಾರ್ಖಾನೆಯ ಮಗ್ಗುಲಲ್ಲಿದ್ದ ಕಾರೇಕುರ ಹಳ್ಳಿ ಬರಡಾಗಲು ಪ್ರಾರಂಭಿಸಿತು. ಕಾವೇರಿಯ ನೀರನ್ನು ಬಳಸಲಾಗದೆ ಹಾಹಾಕಾರ ಪ್ರಾರಂಭವಾಯಿತು. ತಕ್ಷಣವೇ ಆಕಾಶವಾಣಿ ಕಾರ್ಯೋನ್ಮುಖವಾಯಿತು. ಟೇಪ್ ರೆಕಾರ್ಡರ್ ಹೆಗಲಿಗೇರಿಸಿ ಸುಮಾರು ದಿನಗಳ ಕಾಲ ಸ್ಥಳದ ಸಮೀಕ್ಷೆ ನಡೆಸಿ ಹಳ್ಳಿಯವರ ಸಂದರ್ಶನ ನಡೆಸಿ ಸಮಸ್ಯೆಯನ್ನು ತಿಳಿದುಕೊಂಡು ನಂತರ ನೇರವಾಗಿ ಕಾರ್ಖಾನೆಯ ಮಾಲಿಕರನ್ನು ಭೇಟಿ ಮಾಡಿದರು. ಜಲಮಾಲಿನ್ಯದ ಭೀಕರ ಪರಿಣಾಮಗಳನ್ನು ವಿವರಿಸಿದರು. ಆಕಾಶವಾಣಿಯ ಈ ಮಧ್ಯಸ್ಥಿಕೆಯಿಂದ ಕಾರ್ಖಾನೆ ಮತ್ತು ಹಳ್ಳಿಯ ಜನ ಮಾತುಕತೆಗೆ ಮುಂದಾದರು. ಕಾವೇರಿಯ ಒಡಲಲ್ಲಿ ಇಲ್ಲವಾಗುತ್ತಿದ್ದ ಮೀನುಗಳು, ಒಣಗುತ್ತಿದ್ದ ದಡದ ಹುಲ್ಲು ಬದುಕುಳಿಯಲು ಇದು ಕಾರಣವಾಯಿತು.

ಇವಲ್ಲದೆ ಆಕಾಶವಾಣಿ ರಾಜ್ಯದ ತುರ್ತು

ಸಮಸ್ಯೆಗಳ ಸಮಗ್ರ ಚಿತ್ರಣಕೊಡುವ ನಿಟ್ಟಿನಲ್ಲಿ ಸತತವಾಗಿ ಹಲವು ಮಾಲಿಕೆಗಳನ್ನು ಪ್ರಸಾರ ಮಾಡಿದೆ. ಒಂದು ಸಮಸ್ಯೆಯ ಪರ ವಿರೋಧಗಳನ್ನು ಈ ಮಾಲಿಕೆಯಡಿ ಸಂದರ್ಶಿಸಿ ಒಟ್ಟು ಅಭಿಪ್ರಾಯಗಳನ್ನು ಮಂಡಿಸಿ ನಿರ್ಧಾರ ಶ್ರೋತೃಗಳಿಗೆ ಬಿಡಲಾಗುತ್ತದೆ. ಏಳನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕಾರವಾರದ ಬಳಿ ಸ್ಥಾಪಿಸಲಾಗುವ 'ಕೈಗಾ ಅಣುಸ್ಥಾವರ' ಹಲವು ರೀತಿಯ ಗೊಂದಲಗಳಿಗೆ ಹಾದಿ ಮಾಡಿ ಕೊಟ್ಟಿದ್ದಾಗ ಆಕಾಶವಾಣಿ ಅಣು ಇಂಧನಗಳು, ಅಣುಸ್ಥಾವರಗಳು, ಭಾರತದ ಅಣುಶಕ್ತಿ ಯೋಜನೆಗಳು, ಅಣುವಿಕಿರಣ, ಕೃಷಿಯಲ್ಲಿ ಅಣುಶಕ್ತಿಯ ಆರ್ಥಿಕ ವಿವೇಚನೆ, ಅಣುಶಕ್ತಿ ಎಷ್ಟು ಸುರಕ್ಷಿತ ಹೀಗೆ ಹತ್ತು ಕಾರ್ಯಕ್ರಮಗಳನ್ನು ಪ್ರಸಾರ ಮಾಡಿತು.

ನಿಸರ್ಗ ಸಂಪತ್ತಿನ ರಕ್ಷಣೆಗೆ ಆಕಾಶವಾಣಿ ಬದ್ಧವಾಗಿದೆ. ನಿಸರ್ಗ ರಕ್ಷಿಸಿ ಆಂದೋಲನಗಳ ರೂಪುರೇಷೆಯ ಪರಿಚಯ ಮಾಡಿಕೊಟ್ಟಿದೆ. ಕರ್ನಾಟಕದ 'ಚಿಪ್ಕೊ', 'ಅಪ್ಪಿಕೋ ಚಳವಳಿ' 'ಪಶ್ಚಿಮ ಘಟ್ಟ ಉಳಿಸಿ ಜಾಥಾ' ಪರಿಚಯ ಮಾಡಿಕೊಡುವುದರ ಜೊತೆ ಜೊತೆಗೆ ಹಳಿಯಾಳದ ಬಳಿ ಇಲ್ಲವಾಗಿದ್ದ ಕಾಡುಗಳನ್ನು ಮೊದಲ ಸ್ಥಿತಿಗೆ ತರಲು 50 ವರ್ಷಗಳ ಹಿಂದೆ ಇದ್ದ Species ಗಳನ್ನೇ ತಂದು ನೆಟ್ಟ ಅರಣ್ಯ ಇಲಾಖೆಯ ಕಾರ್ಯಕ್ರಮವನ್ನು, ಬಿದಿರನ್ನೇ ಆಶ್ರಯಿಸಿ ಬದುಕು ಸಾಗಿಸುವ ಮೇದಾರ ಜನಾಂಗಕ್ಕೆ ಅತಿ ಕಡಿಮೆ ದರದಲ್ಲಿ ಬಿದಿರು ಒದಗಿಸಲು ಅರಣ್ಯ ಇಲಾಖೆ ಬೆಳೆಸಿದ ಬಿದಿರು ಪ್ರದೇಶಗಳ ಬಗ್ಗೆಯೂ ವರದಿ ಮಾಡಲಾಗುತ್ತದೆ.

'ನಿಸರ್ಗ' ಜೀವನದ ಅವಿಭಾಜ್ಯ ಅಂಗ ಎನ್ನುವ ಆಕಾಶವಾಣಿಯ ಅತ್ಯಂತ ವ್ಯಾಪಕ ಕಾರ್ಯಕ್ರಮ 'ನಿಸರ್ಗ ಸಂಪದ' ವಿನೂತನ ರೀತಿಯ ಈ ಕಾರ್ಯಕ್ರಮಕ್ಕೆ ಕೇಳುಗರ ಪ್ರತಿಕ್ರಿಯೆ ಅಪಾರ. ನಿಸರ್ಗದ ಬಗ್ಗೆ ಮಕ್ಕಳಿಂದ ಹಿಡಿದು ಮುದುಕರವರೆಗೆ ತಿಳುವಳಿಕೆ

ನೀಡಲು ಇತ್ತೀಚೆಗೆ ನಿಸರ್ಗ ಸಂಪತ್ತನ್ನು ಪರಿಚಯಿಸಲು ಆಕಾಶವಾಣಿ ಅರಣ್ಯ ಇಲಾಖೆಯೊಡನೆ ಈ ಕಾರ್ಯಕ್ರಮವನ್ನು ಪ್ರಸಾರ ಮಾಡಿತು. ಕರ್ನಾಟಕದಾದ್ಯಂತ ಎಲ್ಲಾ ಬಾನುಲಿ ಕೇಂದ್ರಗಳಲ್ಲೂ ಪ್ರಸಾರವಾದ ಈ ಕಾರ್ಯಕ್ರಮ 13 ಭಾಗಗಳಲ್ಲಿ ಪ್ರಕೃತಿಯ ಉಳಿವಿಗೆ ಕಾರಣವಾಗುವ ಪರಸ್ಪರ ಅವಲಂಬನೆ, ಪ್ರಕೃತಿ ಸಮತೋಲವನ್ನು ಬಣ್ಣಿಸುತ್ತಾ ಅರಣ್ಯಗಳ ಅಗತ್ಯತೆ, ಪಕ್ಷಿ ಪ್ರಪಂಚ, ಅಭಯಾರಣ್ಯ, ಪ್ರಕೃತಿ ಉಳಿಸುವ ಬಗ್ಗೆ ನಾಟಕ, ಹಾಡು, ಒಗಟುಗಳ ಮೂಲಕ ನಿಸರ್ಗದ ಬಗ್ಗೆ ಕ್ಷ-ಕಿರಣ ಬೀರಲಾಯಿತು.

50 ವರ್ಷದ ಹುಣಿಸೆ ಮರದ ಬೆಲೆ 15 ಲಕ್ಷ 70 ಸಾವಿರ ಎಂದರೆ ಒಂದು ಕ್ಷಣ ಶ್ರೋತೃಗಳೆಲ್ಲರೂ ಮೂಗಿನ ಮೇಲೆ ಬೆರಳಿಡುತ್ತಾರೆ. ಹುಣಿಸೆ ಮರಕ್ಕೆ 15 ಲಕ್ಷ ಹೇಗೆ? ಪ್ರಶ್ನೆ ಕಾಡುತ್ತದೆ. ತಕ್ಷಣ ನಿಸರ್ಗ ಸಂಪದ ವಿವರಿಸುತ್ತದೆ. ಹುಣಿಸೆಮರ ಉತ್ಪಾದಿಸುವ ಆಮ್ಲಜನಕಕ್ಕೆ 2.5 ಲಕ್ಷ, ಅದು ರಕ್ಷಿಸುವ ಮಣ್ಣಿನ ಸಾರಕ್ಕೆ 2.5 ಲಕ್ಷ, ನೀರಿನ ಪುನರ್‌ಬಳಕೆ, ತೇವಾಂಶ ನಿಯಂತ್ರಣಕ್ಕೆ 3 ಲಕ್ಷ, ವಾಯು ಮಾಲಿನ್ಯ ನಿಯಂತ್ರಣಕ್ಕೆ 5 ಲಕ್ಷ, ಪಕ್ಷಿ, ಕ್ರಿಮಿ ಕೀಟಗಳಿಗೆ ರಕ್ಷಣೆ ಒದಗಿಸಲು 2.5 ಲಕ್ಷ ಹೀಗೆ ಹುಣಿಸೆ ಮರದ ಬೆಲೆ 15 ಲಕ್ಷ 70 ಸಾವಿರ ಎನ್ನುತ್ತದೆ.

ತಕ್ಷಣವೇ ಹುಣಿಸೆಮರ ಕಡಿಯುವ ಕೈಗೆ ಕೊಕ್ಕೆ ಹಾಕಿದಂತಾಗುತ್ತದೆ. ಹುಣಿಸೆ ಮರದ ಉಳಿವು 15 ಲಕ್ಷದ ಉಳಿವು ಎನ್ನುವ ಪ್ರಜ್ಞೆ ಮೂಡುತ್ತದೆ. 'ಈ ಒಂದು ಕಾರ್ಯಕ್ರಮ ಕೇಳಿದ ನನಗೆ ಈಗ ನಮ್ಮ ಸ್ವಂತ ಜಮೀನಾದ 40 ಎಕರೆ ಪೈಕಿ 10 ಎಕರೆ ಗಿಡ ಮರ ಬೆಳೆಸಲು ಫಲವತ್ತಾದ ಸ್ಥಳವಿರುತ್ತದೆ. ನಿಮ್ಮ ಈ ಕಾರ್ಯಕ್ರಮ ಕೇಳಿದ ಮೇಲೆ ಹೊಲದಲ್ಲಿ ಇನ್ನಷ್ಟು ಗಿಡಮರಗಳನ್ನು ಬೆಳೆಸುವ ಮನಸ್ಸು ನನ್ನಲ್ಲಿ ಮೂಡಿದೆ' ಎನ್ನುತ್ತಾರೆ ಬಳ್ಳಕೆರೆ ನಾಗರಾಜ.

ನಿಸರ್ಗ ಸಂಪದಕ್ಕೆ ಈಗಾಗಲೇ 15 ಸಾವಿರ ಜನ ಹೆಸರು ನೋಂದಾಯಿಸಿದ್ದರು. ಉಳಿದ 2 ಸಾವಿರ ಅರ್ಜಿಗಳನ್ನು ಆಕಾಶವಾಣಿ ತಿರಸ್ಕರಿಸಿತ್ತು. ಎಂದರೆ ಆಕಾಶವಾಣಿಯ ವಿಜ್ಞಾನ ಕಾರ್ಯಕ್ರಮಗಳ ಜನಪ್ರಿಯತೆ ಗೊತ್ತಾಗುತ್ತದೆ. 'ಕೇಳುಗರ ಅಪಾರ ಪ್ರತಿಕ್ರಿಯೆ ನಮಗೆ ಹಲವು ವಿನೂತನ ಯೋಜನೆಗಳನ್ನು ಹಮ್ಮಿಕೊಳ್ಳಲು ಸಹಾಯ ಮಾಡುತ್ತದೆ' ಎನ್ನುವ ಆಕಾಶವಾಣಿಯ ಕಾರ್ಯಕ್ರಮ ನಿರ್ದೇಶಕರಾದ ಉತ್ಸಾಹಿ ಸಿ.ಯು. ಬೆಳ್ಳಕ್ಕಿಯವರು 'ಈ ಬೃಹತ್ ಯೋಜನೆಗೆ ಆಕಾಶವಾಣಿ ಖರ್ಚು ಮಾಡಿಸುತ್ತಿರುವುದು ಅತಿ ಕಡಿಮೆ. ಈ ಕಡಿಮೆ ವೆಚ್ಚದಲ್ಲಿ ನಾವು ಕರ್ನಾಟಕದ ಕನಿಷ್ಠ 30 ಸಾವಿರ ಮಂದಿಗೆ ನಿಸರ್ಗ ಪಾಠ ಕಲಿಸುತ್ತೇವೆ' ಎನ್ನುತ್ತಾರೆ.

ಈ ಯೋಜನೆಯ ಬೆನ್ನೆಲುಬು ಆಕಾಶವಾಣಿ ಬೆಂಗಳೂರು ಕೇಂದ್ರದ ನಿರ್ದೇಶಕರಾದ ಎಚ್.ವಿ. ರಾಮಚಂದ್ರರಾವ್. ದೆಹಲಿ ದೂರದರ್ಶನದಲ್ಲಿ ತಮ್ಮ ಬಹುಪಾಲು ಸೇವೆ ಸಲ್ಲಿಸಿದ ರಾಮಚಂದ್ರರಾವ್ ಸಾಹಿತ್ಯದ ಒಡನಾಟದೊಂದಿಗೆ ಬೆಳೆದು ಬಂದವರು. ರಾವ್ ಬಹದ್ದೂರರ 'ಗ್ರಾಮಾಯಣ' ಹಿಂದಿಗೆ ಅನುವಾದಿಸಿ ಪ್ರಶಸ್ತಿಗಳಿಸಿರುವ ಇವರಿಗೆ ಸೃಜನಶೀಲತೆಯನ್ನು ಆಕಾಶವಾಣಿಯಲ್ಲಿ ಅಳವಡಿಸುವ ಬಯಕೆ. ಅದರ ಫಲ 'ನಿಸರ್ಗ ಸಂಪದ' ●

(ಸ್ವಾತಿ ಸಿಂಡಿಕೇಟ್ಸ್)



> ನನಗೆ ಇಪ್ಪತ್ತು ಮೇಲೊಂದು ವರ್ಷ ಆಗಿದ್ದಾಗ ಬುದ್ಧಿವಂತ ಒಬ್ಬ ಹೇಳಿದ, "ರೂಪಾಯಿ ಕೊಡು. ಚಿನ್ನ ಕೊಡು. ಏನು ಬೇಕಾದರೂ ಕೊಡು. ಹೃದಯ ಮಾತ್ರ ಕೊಡಬೇಡ."
>
> ಹೌಸ್‌ಮನ್ ಎ.ಇ.

# ಪದಾರ್ಥ ಚಿಂತಾಮಣಿ

• ಪಾವೆಂ •

– 114 –

## ತೇಗದ ಪ್ರಾಚೀನತೆ – ರಾಜೀನಾಮೆಯ ಅರ್ಥಾಂತರ

ಕನ್ನಡದಲ್ಲಿ ನಾವು "ತೇಗು" "ತೇಗ" "ತೇಂಗು" ಇತ್ಯಾದಿಯಾಗಿ ಕರೆಯುವ ಶ್ರೇಷ್ಠ ನಾಟಿನ ಮರದ ಹೆಸರು ಮಲೆಯಾಳಿ ಭಾಷೆಯಲ್ಲಿ "ತೆಕ್ಕ." ಅದೇ ಇಂಗ್ಲಿಷಿಗೆ ದಾಟಿ "ಟೀಕ್" (Teak) ಆಗಿದೆ. ಬಹಳ ಪ್ರಾಚೀನ ಕಾಲದಿಂದ ಮಧ್ಯಪೂರ್ವಕ್ಕೆ ರಫ್ತಾಗುತ್ತಿದ್ದ ಈ ಮರಕ್ಕೆ ಈಗ ಕರ್ನಾಟಕದ ಉತ್ತರ ಭಾಗದಲ್ಲಿ "ಸಾಗುವಾನಿ" ಎಂಬ ಹೆಸರೇ ಹೆಚ್ಚು ಪ್ರಚಾರವಾಗಿದೆ. ಈ ಹೆಸರೂ ಮಧ್ಯಪೂರ್ವದಿಂದಲೇ ಬಂದಿರಬಹುದೇ ಎಂದು ಹುಡುಕುವಾಗ ಅದೂ ಸ್ವದೇಶಿ ಎಂದೇ ಸಿದ್ಧವಾಯಿತು. ಹಿಂದಿಯಲ್ಲಿ ಸಾಗೌನ, ಸಾಗವನ್ ಇತ್ಯಾದಿ ಮತ್ತು ಮರಾಠಿಯಲ್ಲಿ ಸಾಗ್, ಸಾಗವಾನ್ ಎಂಬ ಹೆಸರುಗಳು ಉಂಟು. ಅದೇ ನಮ್ಮ ತೇಗವನ್ನು ಮರೆಸಿ ತನ್ನನ್ನು ಸ್ಥಾಪಿಸಿಕೊಂಡಿದೆ. ಆದರೆ ಈ "ಸಾಗವನ್" ಆದರೂ ಎಲ್ಲಿಂದ ಬಂತು? ಹಳೇ ಹಿಂದೀ ಕೋಶವೊಂದು "ಸಂಸ್ಕೃತ" ಎಂದು ಹೇಳಿರುವುದರಿಂದ ಆ ಜಾಡನ್ನು ಬೆಂಬತ್ತಿ "ಶಾಕ" ಶಬ್ದಕ್ಕೆ ಬಂದು ನಿಂತದ್ದಾಯಿತು. ಶಾಕ ಎಂದರೆ ನಮಗೆಲ್ಲ ಗೊತ್ತಿರುವುದು ಕಾಯಿಪಲ್ಲೆ ಎಂಬರ್ಥ. ಆದರೆ ವೈದಿಕೋತ್ತರ ಕಾಲದ ಶ್ರೌತ ಮತ್ತು ಗೃಹ್ಯ ಸೂತ್ರ, ಮಹಾಭಾರತ ಕಾಲಗಳಿಂದಲೇ ತೇಗದ ಮರಕ್ಕೂ "ಶಾಕ" ಎಂಬ ಹೆಸರಿತ್ತು (ಅನಂತರ ಕಾಲದಲ್ಲಿ ಬಾಗೆ ಎಂಬ ಮರಕ್ಕೂ ಶಾಕವೆಂಬ ಹೆಸರಿತ್ತು.) ಮಹಾಭಾರತದ ಪ್ರಕಾರ ಶಾಕ ದ್ವೀಪವೆಂಬ ಮಹಾಭೂಖಂಡ (ಸಪ್ತ ದ್ವೀಪಗಳಲ್ಲಿ ಒಂದು)ದಲ್ಲಿ ಕ್ಷೀರ ಸಾಗರದಿಂದಾವೃತವಾದ ಒಂದು ತೇಗ (ಶಾಕ)ದ ಮರವಿತ್ತಂತೆ!

ಹೀಗೆ "ಶಾಕ"ದ ತದ್ಭವವಾಗಿ "ಸಾಗ" ಹುಟ್ಟಿತು, ಸೈ. ಆದರೆ ಸಾಗವನ್ ಎಂಬಲ್ಲಿ "ವನ್" ಎಂದರೇನು? ವಿಚಿತ್ರವೆಂದರೆ "ವನ" ಶಬ್ದಕ್ಕೆ ಅರಣ್ಯ ಇತ್ಯಾದಿ ಅರ್ಥಗಳೊಡನೆ ನಾಟು (Timber) ಒಣಗಿಸಿದ ಮರ ಎಂಬರ್ಥವೂ ಇದೆ ಋಗ್ವೇದದಲ್ಲೇ! ಹೀಗೆ ಶಾಕ+ವನ=ಸಾಗವನ್=ತೇಗದ ನಾಟು. ಅದೇ ನಮ್ಮ ಸಾಗುವಾನಿ. ವಾಸ್ತವವಾಗಿ ಸಾಗವಾನಿ ಎಂದರೆ (ಮರಾಠಿಯಲ್ಲಿ) ತೇಗದ ಕಟ್ಟಿಗೆಯಿಂದ ಮಾಡಿದ ಸಾಮಾನು. ಆದರೆ ವನ (ವಾನ) ಶಬ್ದ ಸ್ವತಂತ್ರವಾಗಿ ಹಿಂದಿ ಮರಾಠಿ ಬಂಗಾಲಿಗಳಲ್ಲಿ ಸಿಗದಿರುವುದೊಂದು ತೊಡಕು, ಎಂದನಿಸುತ್ತದೆ.

ಕನ್ನಡದಲ್ಲಿ ಕಟ್ಟಡದಲ್ಲಿ ಬಳಸುವ ಮರ (ಕಟ್ಟಿಗೆ)ಕ್ಕೆ "ಮೋಪು" ಎಂಬ ಶಬ್ದ ಪ್ರಾದೇಶಿಕವಾಗಿ ಬಳಕೆಯಲ್ಲಿದೆ. ಇದು ತಮಿಳು "ಮೋ", ಕನ್ನಡ "ಮೋರ್" ಧಾತುವಿನಿಂದ ಉದ್ಭವಿಸಿದ್ದು. ಮೋ, ಮೋರ್ ಅಂದರೆ ಹೊರುವುದು. ಮೋಪು ಎಂದರೆ ಹೊರೆ, ಭಾರ, ಭಾರವಾದ ಕಟ್ಟಿಗೆ, ಗಟ್ಟಿಮುಟ್ಟಾದ (ಒಣ) ಮರ ಎಂಬ ರೀತಿಯಲ್ಲಿ ಈ ಶಬ್ದ ಬೆಲೆಬಾಳುವ ಕಟ್ಟಿಗೆ ಎಂಬರ್ಥವನ್ನು ಸಂಪಾದಿಸಿರಬೇಕು. ಉತ್ತರ ಕರ್ನಾಟಕದಲ್ಲಿ ಪ್ರಸ್ತುತದಲ್ಲಿ "ಟಿಂಬರ್"ಗೆ "ಇಮಾರತಿ ಕಟ್ಟಿಗೆ" ಎಂಬ ಶಬ್ದವೇ ಹೆಚ್ಚು ರೂಢವಾಗಿದೆ.

"ಇಮಾರತ್" ಎಂದರೆ ದೊಡ್ಡ ಕಟ್ಟಡ ಭವನ ಎಂಬರ್ಥದ ಅರಬ್ಬೀಪದ. ಅದಕ್ಕಾಗಿ ಬಳಸುವ ಮರ ಇಮಾರತಿ ಕಟ್ಟಿಗೆ. ಪಾರಸಿಕ ಮತ್ತು ಅನಂತರ ಉರ್ದು ಭಾಷೆ ಮುಸ್ಲಿಂ ಆಡಳಿತದಲ್ಲಿ ಪಡೆದ ಸ್ಥಾನ ಎಷ್ಟು ವಿಶಾಲ ಮತ್ತು ಆಳವಾಗಿ ಬೇರೂರಿತ್ತೆಂಬುದಕ್ಕೆ ಇಂಥ ಪದಗಳು ಸಾಕ್ಷಿಯಾಗಿವೆ.

  

"ಮಾರ್ಜಾಲ" ಅಥವಾ "ಮಾರ್ಜಾರ್" ಎಂದರೆ ಬೆಕ್ಕು ಎಂದು ಶಾಲಾ ಹುಡುಗರಿಗೂ ಗೊತ್ತು. ಇದು ಸಂಸ್ಕೃತ ಸಾಹಿತ್ಯದಲ್ಲಿ ಮಹಾಭಾರತ, ಮನುಧರ್ಮ ಶಾಸ್ತ್ರ ಕಾಲದಿಂದಲೇ ಬೆಕ್ಕನ್ನು ನಿರ್ದೇಶಿಸುತ್ತದೆ. ಆದರೆ ಆ ಹೆಸರು ಅದಕ್ಕೆ ಹೇಗೆ ಬಂತು? ಸಂಸ್ಕೃತದಲ್ಲಿ "ಮಾರ್ಜ್" ಧಾತುವಿಗೆ ತಿಕ್ಕು, ತೊಳೆ, ಒರೆಸು, ಬೆಳಗು, ಸ್ವಚ್ಛ ಮಾಡು ಇತ್ಯಾದಿ ಅರ್ಥಗಳಿವೆ. ನಾವು ಬೆಳಗ್ಗೆ ಎದ್ದು ಮುಖಮಾರ್ಜನ ಮಾಡಿಕೊಳ್ಳುತ್ತೇವೆ. ಬೆಕ್ಕು ಕೂಡ ಅದನ್ನೇ ಮಾಡಿಕೊಳ್ಳುತ್ತದೆ. ಇಡೀ ದಿನ ನಾಲಗೆಯಿಂದಲೂ ಬಾಯಂಜಲು ಹಚ್ಚಿಕೊಂಡ ತನ್ನ ಪಂಜಗಳಿಂದಲೂ ಅದು ಮಾರ್ಜನ ಮಾಡಿಕೊಂಡಿರುತ್ತದೆ. ಅದು ಗೃಹ್ಯ ಪಶುಗಳೆಲ್ಲೆಲ್ಲ ಅತಿ ಸ್ವಚ್ಛವಾದದ್ದು. ಆದ್ದರಿಂದ ಅದು "ಮಾರ್ಜಾಲ" ಹಳೆಗನ್ನಡದಲ್ಲಿ ಅದು "ಮಂಜರ" ಮರಾಠಿಯಲ್ಲಿ "ಮಾಂಜರೂ" ತುಳುವಿನಲ್ಲಿ ಹೆಣ್ಣುಬೆಕ್ಕನ್ನು "ಮಂಗು" ಎಂದು ಪ್ರೀತಿಯಿಂದ ಕರೆಯುತ್ತಾರೆ. ಇದು ಕೂಡ ಮಂಜರದ ಒಂದು ರೂಪವೇ ಇರಬೇಕು.

  

"ರಾಜೀನಾಮೆ" ಎಂದು ನಾವು ಕನ್ನಡದಲ್ಲಿ ಬಳಸುವ ಪದ ರಾಜೀನಾಮೆ ಅಲ್ಲವೇ ಅಲ್ಲ. "ನಾಮಾ" ಎಂಬ ಪಾರಸೀಕ ಪದ ಯಾವುದೇ ಲಿಖಿತ ದಾಖಲೆಯನ್ನು ಸೂಚಿಸುತ್ತದೆ. "ರಾಜೀ" ಎಂಬ ಅರಬ್ಬಿ ಪದ ಒಪ್ಪಿಗೆ ಪರಸ್ಪರ ಒಪ್ಪಂದ, ಸಮ್ಮತಿ ಇತ್ಯಾದಿ ಅರ್ಥಗಳನ್ನು ಕೊಡುವಂಥಾದ್ದು. ಹೀಗೆ "ರಾಜೀನಾಮಾ" ಎಂದರೆ ವಾದಿ ಪ್ರತಿವಾದಿಗಳು ಯಾವುದೊಂದು ವಿವಾದಲ್ಲಿ "ರಾಜೀ" ಮಾಡಿಕೊಂಡದ್ದನ್ನು ಬರಹಕ್ಕಿಳಿಸಿದ ಪತ್ರ ಎಂದು ಉರ್ದು ನಿಘಂಟುಗಳು ಹೇಳುತ್ತವೆ. ಅದು ದ್ರಾವಿಡ ಭಾಷೆಗಳಲ್ಲಿ ಯಾವುದಾದರೂ ಅಧಿಕಾರದ ಸ್ಥಾನ ಇಲ್ಲವೆ ಹಕ್ಕನ್ನು ಬಿಟ್ಟುಕೊಡುವ ಪತ್ರ ಎಂಬರ್ಥಕ್ಕೆ ತಿರುಗಿದ್ದು ಸ್ವಲ್ಪ ಸುತ್ತು ಬಳಸಿನ ತರ್ಕದಿಂದ. ನಿಮ್ಮನ್ನು ಕೆಲಸದಿಂದ ಕಿತ್ತುಹಾಕುವ ಬದಲಿಗೆ ನೀವೇ ಸ್ವಂತ ಖುಶಿಯಿಂದ ಕೆಲಸ ಅಥವಾ ಹಕ್ಕು ಬಿಡುವುದೆಂದರೆ ಒಂದು ತರಹದ ರಾಜಿಯಲ್ಲವೆ? ಹಿಂದಿಯಲ್ಲಿ ಇದಕ್ಕೆ "ಇಸ್ತಿಫಾ" ಎನ್ನುತ್ತಾರೆ.

"ರಜಾ"ದ ಮಾತೂ ಅಷ್ಟೆ. ಅರಬ್ಬಿ "ರಿಜಾ"ದಿಂದ ವಿಕಾರಗೊಂಡ ಈ ಪದಕ್ಕೆ ಇಚ್ಛೆ ಮರ್ಜಿ ಅನುಮತಿ, ಒಪ್ಪಿಗೆ, ಅಪ್ಪಣೆ ಇತ್ಯಾದಿ ಅರ್ಥಗಳು. ಕೆಲಸಕ್ಕೆ ಇಂದು ಬರುವುದಿಲ್ಲ ಎಂದು ಹೇಳಿ ಒಪ್ಪಿಗೆ ಪಡೆಯುವುದಕ್ಕೆ "ರಜಾ" ಎನ್ನುವುದು ಉರ್ದುವಿನಲ್ಲಿ ಮಾತ್ರ. ಮೇಲಿನವರಿಂದ ಅನುಮತಿ ಪಡೆದುಕೊಂಡು ಕೆಲಸಕ್ಕೆ ಹಾಜರಾಗದಿರುವುದರಿಂದ ಅದಕ್ಕೆ ರಜಾ ಎಂದು ಹೆಸರು ಕೊಡುವುದಾಯಿತು ಉರ್ದುವಿನಲ್ಲಿ. ಅದು ಹಲ ಕೆಲವು ದೇಶ ಭಾಷೆಗಳಿಗೆ ದಾಟಿತು. ಈಗ ಅದೊಂದೇ ಅರ್ಥದಲ್ಲಿ ಅದು ಕನ್ನಡದಂಥ ಭಾಷೆಗಳಲ್ಲಿ ಉಳಿದಿದೆ. ಹೈದರಾಬಾದಿನಲ್ಲಿ ರಜಾಕಾರರ ಹಾವಳಿ ಹೆಚ್ಚಾಗಿದ್ದಾಗ ಅವರ ಪ್ರಸಿದ್ಧಿ ಕೇಳಿ ರಜೆ ಕೇಳುವವರನ್ನು ರಜಾಕಾರ ಎಂದು ತಮಾಷೆಯಾಗಿ ಕರೆಯುವುದೂ ಇತ್ತು!

ರಜೆಗೆ ಉತ್ತರ ಕರ್ನಾಟಕದಲ್ಲಿ ಸೂಟಿ ಎಂಬ ಶಬ್ದ ಬಳಕೆಯಲ್ಲಿದೆ. ಇದು ಹಿಂದಿಯ "ಛುಟ್ಟಿ" ಶಬ್ದದ ಒಂದು ರೂಪ. "ಛೋಡನಾ" ಎಂದರೆ ಬಿಡುವುದು. "ಛುಟ್ಟಿ" ಎಂದರೆ ಕೆಲಸದಿಂದ ಗೈರು ಹಾಜರಿರುವುದು ಅರ್ಥಾತ್ ತಾತ್ಕಾಲಿಕ ಬಿಡುಗಡೆ. ಈ ಅರ್ಥದಲ್ಲೇ ಉತ್ತರ ಕರ್ನಾಟಕದಲ್ಲಿ "ಬಿಡುವು" ಎಂಬ ಶಬ್ದವನ್ನು ರೂಪಿಸಲಾಯಿತು. ನಮ್ಮ ಹಿಂದಿನ ತಲೆಮಾರಿನವರು ಕನ್ನಡ ಭಾಷೆಯ ಮರ್ಮವನ್ನು ನಮಗಿಂತ ಹೆಚ್ಚು ಬಲ್ಲವರಾಗಿದ್ದುದ್ದರಿಂದ ನಮಗಿಂತ ಸುಲಲಿತವಾಗಿ ಶಬ್ದಗಳನ್ನು ಸೃಷ್ಟಿಸಿಕೊಳ್ಳಬಲ್ಲವರಾಗಿದ್ದರು. ನಾವು ಇಂಗ್ಲಿಷ್ ಆಲದ ನೆರಳಿನಲ್ಲಿ ಬೆಳೆದವರಾದ್ದರಿಂದ ನಮ್ಮ ತಲೆ ಶಬ್ದ ಸೃಷ್ಟಿಯಲ್ಲಿ ಕೆಲಸ ಮಾಡಲು ಬಲು ಕಷ್ಟ ಪಡುತ್ತಿದೆ.

  

ಉತ್ತರ ಕರ್ನಾಟಕದಲ್ಲಿ ವಿಶಿಷ್ಟ ತರಹದ ಹರುವೆ ಸೊಪ್ಪಿಗೆ "ರಾಜಗಿರಿ" ಎಂಬ ಹೆಸರಿದೆ. ಮಾರಾಠಿಯಲ್ಲಿಯೂ "ರಾಜಗೀರ್" ಎಂಬ ಪದವಿದೆ ಮರಾಠಿಯಲ್ಲಿ ಅದು ಹರುವೆ, ಬಸಲೆ ಮೊದಲಾದ ಹಲ ಬಗೆಯ ಸೊಪ್ಪಿನ ಪಲ್ಯಗಳಿಗೆ ಸಲ್ಲುವ ಹೆಸರು. ಆದರೆ ಇದು ಮೂಲತಃ ದ್ರಾವಿಡ ಪದದ್ದೆ ವಿಸ್ತರಣೆ. ತಮಿಳಿನಲ್ಲಿ ಕೀರೈ ಮಲಯಾಳಿಯಲ್ಲಿ "ಚೀರ" ತೆಲುಗಿನಲ್ಲಿ "ಕೀರ" ಕನ್ನಡದಲ್ಲಿ "ಕೀರೆ" "ಕಿರೆ" ಎಂಬುದು ಬಗೆ ಬಗೆಯ ತೊಪ್ಪಲು ಪಲ್ಯಕ್ಕೆ ಸಲ್ಲುವ ಪದಗಳು. ಅದರಲ್ಲೆ ವಿಶಿಷ್ಟ ಮಾದರಿಗೆ ಬಹುಶಃ ಉತ್ತಮ ವರ್ಗದ ತೊಪ್ಪಲು ಪಲ್ಯಕ್ಕೆ ರಾಜ ಶಬ್ದದಿಂದ ವಿಶೇಷಿಸಿ ರಾಜಗೀರ್ ರಾಜಗಿರಿ ಹುಟ್ಟಿದೆ. 

# ನಾವು ಕಾದಂಬರಿ ಪ್ರಿಯರು

● ವಿಠ್ಠಲ ಕುಲಕರಣಿ ●

ನಾವೆಲ್ಲ ಕಾದಂಬರಿಪ್ರಿಯರಾಗಿದ್ದೇವೆ. ಕಾದಂಬರಿ ಎಂದರೆ ಮಾದಕವಸ್ತು ಎಂಬ ಅರ್ಥವೂ ಇದೆ. ಆ ಮಾದಕತೆಗೂ ನಾವು ಮಾರುಹೋಗಿದ್ದೇವೆ. ಈ ಮಾದಕ ವಸ್ತುವಿನ ಹೆಸರು ಒಂದು ಸಾಹಿತ್ಯ ಪ್ರಕಾರಕ್ಕೆ ಒದಗಿದ್ದು ಬಹುಶಃ ಬಾಣ ಕವಿಯ "ಕಾದಂಬರಿ" ಎಂಬುದರಿಂದಲೇ ಇರಬಹುದು. ತುಮರಿಯವರು ಕನ್ನಡಕ್ಕೆ ಸಮರ್ಥವಾಗಿ ಅನುವಾದಿಸಿ ಆ ಶಬ್ದವನ್ನು ಕನ್ನಡ ಸಾಹಿತ್ಯದ ಪ್ರಕಾರವೊಂದಕ್ಕೆ ಅಜರಾಮರವಾದ ಹೆಸರನ್ನಾಗಿ ಒದಗಿಸಿದ್ದಾರೆ. ಎರಡೂ ಅರ್ಥದ ಕಾದಂಬರಿಗಳು ಇಂದು ಅನೇಕ ತರಹದ ಕೊಲೆ ಸುಲಿಗೆ ಅತ್ಯಾಚಾರ ಅನಾಚಾರಗಳಿಗೂ ಪ್ರೇರಣೆ ನೀಡಿವೆಯೆನ್ನುತ್ತಾರೆ ತಜ್ಞರು.

ಕಾದಂಬರಿ ಓದುವುದು —ಅದರಲ್ಲೂ ಬಾಣ ಕವಿಯ ಕಾದಂಬರಿಯನ್ನು ಓದುವದು— 'ಹಿರಿತನದ' ಲಕ್ಷಣವೆಂದು ನಾನು ಚಿಕ್ಕವನಿದ್ದಾಗ ಭಾವಿಸಿದ್ದೆ. ಆ ರಹಸ್ಯಮಯ ಕಥಾನಕದ ಸ್ವಾರಸ್ಯವಂತೂ ಇದ್ದೇ ಇತ್ತು. ಆದರೂ ಕಾದಂಬರಿಯನ್ನು ಚಿಕ್ಕವರು ಓದಬಾರದೆಂಬ ಉಪದೇಶವನ್ನು ಹಿರಿಯರೊಬ್ಬರು ಮಾಡಿಯೇ ಬಿಟ್ಟರು! ಯಾಕೆಂಬುದು ನನಗೆ ಆಗ ಅರ್ಥವಾಗಿರಲಿಲ್ಲ. ಆದರೆ ಓದಬೇಕೆಂಬ ಕುತೂಹಲ ಮಾತ್ರ ಹೆಚ್ಚಿತ್ತು.

ಇಂದು ಕಾದಂಬರಿ ಓದು ಪ್ರಚಂಡವಾಗಿ ಬೆಳೆದಿದೆ. ಓದು ಬಲ್ಲವರೆಲ್ಲ ಓದುತ್ತಿದ್ದಾರೆ. ಮನರಂಜನೆಗಾಗಿ ವಿಕಾಸಕ್ಕಾಗಿ ಓದುತ್ತಿದ್ದಾರೆ. ಚಿಕ್ಕವರು ದೊಡ್ಡವರು ಎಲ್ಲರೂ ಓದುತ್ತಾರೆ. ಕೆಲವರು ಕದ್ದು ಓದುತ್ತಾರೆ. ಓದಿ ಕದಿಯುವವರೂ ಇಲ್ಲವೇ? ಕೆಲ ಕಾದಂಬರಿಗಳಂತೂ ಕದ್ದು ಓದಲಿಕ್ಕೆ ಅರ್ಹತೆ ಪಡೆದಿವೆ. ಆದರೂ ಇಂತಹ ಕಾದಂಬರಿಗಳಿಗೆ ಅಧಿಕ ಪ್ರಸಾರ-ಪ್ರಚಾರ!

ನಮ್ಮ ಕನ್ನಡ ಸಾಹಿತ್ಯದಲ್ಲಿಯೂ ಕಾದಂಬರಿ ಅತ್ಯಂತ ಜನಪ್ರಿಯ ಸಾಹಿತ್ಯ ಪ್ರಕಾರವೆನಿಸಿದೆ. ಇಂದು ಕಾದಂಬರಿಗಳೇ ಹೆಚ್ಚು ಮಾರಾಟವಾಗುವ ಪುಸ್ತಕಗಳೆನಿಸಿವೆ. ಕಾದಂಬರಿಗಳೇ ವಾಚನಾಲಯ ಮೊದಲಾದ ಸಾರ್ವಜನಿಕ ಸಂಸ್ಥೆಗಳಿಂದ 'ಕಳೆದು' ಹೋಗುವ ಪುಸ್ತಕಗಳೆನಿಸಿವೆ. ಹೆಚ್ಚು ಜೀರ್ಣವಾದ ಪುಸ್ತಕಗಳು ಮಾಸಿದ ಮತ್ತು ಆದ್ದರಿಂದಲೇ ಹೊಸ ಕಟ್ಟು ಧರಿಸಿದ 'ಬೈಂಡಾದ'ವುಗಳೆಂದರೆ ಕಾದಂಬರಿಗಳೇ. ಗ್ರಂಥಾಲಯಗಳಲ್ಲಿ ಒಮ್ಮೆ ಕೂಡ ಓದಿನ ಭಾಗ್ಯ ಪಡೆಯದ ಪುಸ್ತಕಗಳೂ ಇವೆಯಂತೆ! ಆದರೆ ಯಾವ ಕಾದಂಬರಿಗಳು ಇಂತಹ 'ಭಾಗ್ಯಶಾಲಿ'ಗಳಲ್ಲಿ ಸಮಾವೇಶಗೊಂಡಿಲ್ಲವೆಂದು ಧೈರ್ಯದಿಂದ ಹೇಳಬಹುದು.

ಯಾರೋ ಹೇಳಿದರು– "ಒಂದು ಒಳ್ಳೆಯ ಪುಸ್ತಕವನ್ನು ಎರವಲಾಗಿ ಕೊಡುವುದು ಮೂರ್ಖತನವಾದರೆ ಅದನ್ನು ಹಿಂತಿರುಗಿಸುವುದು ಇನ್ನೂ ಹೆಚ್ಚಿನ ಮೂರ್ಖತನ"ವೆಂದು. ಈ ಮಾತು ಕಾದಂಬರಿಗಳಿಗೆ ಹೆಚ್ಚಾಗಿ ಅನ್ವಯಿಸುತ್ತದೆ. ನಾನೂ ಇಂತಹ ಕೊಂಡು ಓದಿದ ಪುಸ್ತಕಗಳನ್ನು ಹೀಗೆಯೇ ಕಳೆದುಕೊಂಡಿದ್ದೇನೆ. ನಾನು ಮಾತ್ರ ಎರವಲಾಗಿ ತಂದ ಪುಸ್ತಕಗಳನ್ನು ಹಿಂತಿರುಗಿ ಕೊಡುವ ಅಧಿಕ ಮೂರ್ಖತನವನ್ನೇ ಮಾಡುತ್ತಿದ್ದೇನೆ. ಹೊಸ ಹೊಸ ಪುಸ್ತಕಗಳು ಎರವಲಾಗಿ ಸಿಕ್ಕಲಿ ಎಂಬ ಸ್ವಾರ್ಥದಿಂದ ವಾಚನಾಲಯಗಳಲ್ಲಿ ನೋಡಿದರೂ ಕಾದಂಬರಿಗಳನ್ನು ಓದುವವರೇ ಬಹಳ. ಅಲ್ಲಿಂದ ಒಯ್ಯುವ ಪುಸ್ತಕಗಳಲ್ಲೂ ಕಾದಂಬರಿಗಳದೇ ದೊಡ್ಡ ಭಾಗವೆಂದು ಹೇಳಿದೆನಲ್ಲ. ದೊಡ್ಡ ನಗರಗಳಲ್ಲಿ ಮುಖ್ಯ ಬೀದಿಗಳಲ್ಲಿ ಎರವಲು ಕೊಡುವ ಪುಸ್ತಕದಂಗಡಿಗಳಿವೆ. ಕಿರಿ ವಾಚನಾಲಯಗಳಿವೆ. ಇಂತಹ ಕೇಂದ್ರಗಳಿಗೆ ಕಾದಂಬರಿಗಳೇ ಮೂಲ ಆಸ್ತಿ. ದಿನವೊಂದಕ್ಕೆ ನಿಗದಿಪಡಿಸಿದಂತೆ ಹಣ ಕೊಟ್ಟು ಓದುವವರೂ ಇದ್ದಾರೆ. ದೊಡ್ಡ ಗಾತ್ರದ ಪುಸ್ತಕಗಳನ್ನು ಕೂಡ ಕೆಲವೇ ದಿನಗಳಲ್ಲಿ ಹಿಂತಿರುಗಿಸಿ ಮತ್ತೆ ಬೇರೆ ಪುಸ್ತಕ ಪಡೆಯುವದಕ್ಕೆ 'ಕ್ಯೂ' ಇರುತ್ತದೆ. 'ಬಸ್ ಕ್ಯೂ'ಗಳಲ್ಲಿಯೂ ಬಸ್ ನಿಲ್ದಾಣಗಳಲ್ಲಿಯೂ ಕಾದಂಬರಿ ಓದುವವರನ್ನು ಕಾಣಬಹುದು. ಇದಕ್ಕೆ ನಮ್ಮಲ್ಲಿಯ ಬಸ್ಸುಗಳ ವೈಶಿಷ್ಟ್ಯವೋ ಕಾದಂಬರಿಪ್ರಿಯತೆಯ ವೈಶಿಷ್ಟ್ಯವೋ ಹೇಳಲಾರೆ! ಹೀಗೆ ಓಣಿ ಓಣಿಗೆ ಓದಿನ ಪ್ರಚಾರ ಅಖಂಡವಾಗಿ ಸಾಗಿದೆ. ಒಬ್ಬ ಲೇಖಕನ ಪುಸ್ತಕಗಳನ್ನೆಲ್ಲ ಓದುವ ಹವ್ಯಾಸ ಇಟ್ಟುಕೊಂಡವರು ಬರಲಿರುವ ಹೊಸ ಕಾದಂಬರಿಗಳನ್ನು ಕುತೂಹಲದಿಂದ ಎದುರು ನೋಡುವವರೂ ಇದ್ದಾರೆ. ರಹಸ್ಯ ಕಾದಂಬರಿ, ಅದ್ಭುತ ಕಾದಂಬರಿ, ಪತ್ತೇದಾರಿ ಕಾದಂಬರಿಗಳು ಅನೇಕರಿಗೆ ಜೀವನ ಸಂಗಾತಿಗಳಾಗಿವೆ. ಪಯಣದಲ್ಲಿ 'ಜೊತೆ' ನೀಡಿವೆ. ಹೊಸ ಮಿತ್ರರನ್ನು ಒದಗಿಸಿವೆ. ಚರ್ಚೆಗಿಂತ ಓದುವದೇ ಮೇಲು ಎಂಬ ಭಾವನೆಯಿಂದ ಪುಸ್ತಕಕ್ಕೆ ಬೇಗನೆ ಅಂಟಿಕೊಳ್ಳುವ ಮಿತ್ರರೂ ಇದ್ದಾರೆ. ಕೆಲವೊಂದು ಪುಸ್ತಕಗಳಂತೂ 'ಮಧ್ಯರಾತ್ರಿಯ ತೈಲ'ವನ್ನುರಿಸುವ ವಾಚಕವೃಂದವನ್ನು ದೊರಕಿಸಿವೆ. ಇಂಗ್ಲೀಷ್ ಕಾದಂಬರಿಗಳು ಇಂತಹ ಮಾದಕತೆಯನ್ನು ಒದಗಿಸಿವೆ. ನಮ್ಮ ಬರಹಗಾರರೂ ಇನ್ನಿತರ ಕನ್ನಡ ಬರಹಗಾರರ ಪುಸ್ತಕಗಳನ್ನು ಓದುವದಕ್ಕಿಂತ ಇಂಗ್ಲೀಷ್ ಕಾದಂಬರಿಗಳನ್ನು ಹೆಚ್ಚು ಓದುತ್ತಾರೆ. ಅದರಲ್ಲಿ ಅದ್ಭುತ ರಮ್ಯ ರಹಸ್ಯವನ್ನು ಕಾಣುತ್ತಾರೆ. ಹೊಸ ಕಲೆಯನ್ನು ಗುರುತಿಸುತ್ತಾರೆ. ಸ್ಫೂರ್ತಿಗಾಗಿ ಓದುತ್ತಾರೆ. ಹೊಸ ತಂತ್ರಗಳಿಗಾಗಿ ಓದುತ್ತಾರೆ. ಇಂತಹ ವಿಫಲ ಸಾಹಿತ್ಯದಲ್ಲಿ ಕೃತಿಚೌರ್ಯಕ್ಕೂ ತುಂಬ ಅನುಕೂಲ! ಭಾರತದ ಅನೇಕ ಭಾಷೆಗಳಲ್ಲೂ ಪ್ರಕಟವಾಗುತ್ತಿರುವ ಅನೇಕ ಕಾದಂಬರಿಗಳೂ ಅನೇಕ ತರಹದ ಭಾವನೆಗಳಿಗೆ ಅವಕಾಶ ಕೊಟ್ಟು ಸ್ಫೂರ್ತಿದಾಯಕವೆನಿಸುತ್ತವೆ.

ಈ ಕಾದಂಬರಿಪ್ರಿಯತೆಯನ್ನು ನೋಡಿದರೆ ಸಾಹಿತ್ಯಾಭ್ಯಾಸಿಗಳು ವಿಮರ್ಶಕರು ಹೇಳುವ ಮಾತೇ ಸುಳ್ಳಾಗುವಂತಿದೆ. "ಇಂದಿನ ಭರ ಭರಾಟದ ಯುಗದಲ್ಲಿ ದೊಡ್ಡ ಕತೆ ಕಾದಂಬರಿಗಳನ್ನು ಓದುವದಕ್ಕೆ ಸಮಯ ಸಾಲದೆಂದು ಸಣ್ಣ ಕತೆ ದಿನದಿನಕ್ಕೆ ಹೆಚ್ಚು ಪ್ರಿಯವೆನಿಸತೊಡಗಿತು" ಎಂದು ಹೇಳುತ್ತಿದ್ದರು. ವಸ್ತುಸ್ಥಿತಿ ತೀರ ವಿಪರೀತವಾಗಿದೆ. ಕಾದಂಬರಿ ಓದುವಷ್ಟು ಜನ ಸಣ್ಣಕತೆ ಓದುತ್ತಾರೆಯೆ? ಕಾದಂಬರಿಯ ಜನಪ್ರಿಯತೆ ನಾಗಾಲೋಟದಿಂದ ಹೆಚ್ಚುತ್ತಿದೆ. ವೈಜ್ಞಾನಿಕ ಕಾದಂಬರಿಗಳು ವಿಜ್ಞಾನ ಯುಗದ ವೈಶಿಷ್ಟ್ಯವನ್ನು ಆಕರ್ಷಣೆಯನ್ನು ಉಳಿಸಿಕೊಂಡಿವೆ, ಬೆಳೆಸಿಕೊಂಡಿವೆ. ಓದುವದಕ್ಕೆ ಸಮಯವಿಲ್ಲವೆಂದರೆ ಧಾರಾವಾಹಿಯಾಗಿ ಬಂದರೂ ಆದೀತು. ಪತ್ರಿಕೆಗಳಿಗೆಲ್ಲ ಧಾರಾವಾಹಿ ಒಂದು ವಿಶೇಷ ಆಕರ್ಷಣೆಯಾಗಿದೆ. ಅಷ್ಟೆಲ್ಲ ಧಾರಾವಾಹಿ ಇಲ್ಲದ ಪತ್ರಿಕೆಗಳನ್ನು ಕಾಣುವದೇ ಕಠಿಣವಾಗಿದೆ. ಹೀಗೆ ಧಾರಾವಾಹಿಯಾಗಿ ಬರುವ ಕಾದಂಬರಿಗಳು ಹಂತ ಹಂತಕ್ಕೂ ಕುತೂಹಲವನ್ನು ಹೆಚ್ಚಿಸುವವಷ್ಟೇ ಅಲ್ಲ, ಕತೆ ಹೇಗೆ ಸಾಗಬೇಕೆಂದು ಚರ್ಚಿಸುವ ಓದುಗರೂ ಪ್ರತಿಕ್ರಿಯೆ ಪ್ರಕಟಿಸುತ್ತಿದ್ದಾರೆ. ಮಹಿಳೆಯರಿಗಂತೂ ಧಾರಾವಾಹಿಗಳು ಅತ್ಯಮೌಲ್ಯ ಮನರಂಜನೆಯ ಸಾಧನಗಳಾಗಿವೆ. ಚರ್ಚೆಯ ವಿಷಯಗಳಾಗಿವೆ. ಪತ್ರಿಕೆಗಳಲ್ಲಿ ಕತೆ ಸಾಗಿದಂತೆ ಅಭಿಪ್ರಾಯಗಳೂ ಬರುತ್ತವೆ. ಹೀಗೆ ಕಾದಂಬರಿಯ ಪ್ರಭಾವ ಹೆಚ್ಚುತ್ತಲೇ

ಇದೆ. ಧಾರಾವಾಹಿ ಹೆಚ್ಚು ಜನರಿಗೆ ಹೆಚ್ಚು ಪ್ರಿಯವಾಗುತ್ತಿದೆ. ಹೋಟೆಲುಗಳಲ್ಲೂ ಧಾರಾವಾಹಿ ಪ್ರವೇಶವಾಗುತ್ತಿದೆ! ಅದರ ಜನ ಪ್ರಿಯತೆಯೂ ಹೆಚ್ಚುತ್ತಿದೆ!!

ಇಂತಹ ಜನಪ್ರಿಯತೆ ಅನೇಕ ಕನ್ನಡ ಸಾಹಿತಿಗಳನ್ನು 'ಕಾದಂಬರಿ' ರಂಗಕ್ಕೆ ಇಳಿಸಿದೆ. ಕಾದಂಬರಿ ಬರೆಯದ ಸಾಹಿತಿ ಸಿಕ್ಕುವದು ವಿರಳವಾಗಿದೆ ಇಂದು. ಕನ್ನಡದಲ್ಲಿ ನಾಲ್ಕಾರು ಜನರನ್ನು ಮಾತ್ರ ಕಾಣಬಹುದು. ಕಾದಂಬರಿ ಗಳನ್ನೇ ಬರೆದು ಪ್ರಖ್ಯಾತರಾದವರಿದ್ದಾರೆ. ಕೆಲ ವರು ಕಾದಂಬರಿಗಳನ್ನು ತಮ್ಮ ವಿಚಾರಗಳನ್ನು ಹೇಳಲು ಉತ್ತಮ ಸಾಧನಗಳನ್ನಾಗಿಸಿಕೊಂಡಿ ದ್ದಾರೆ. ಸ್ವಭಾವತಃ ಹಾಸ್ಯ ವಿಡಂಬನೆಗಳ ಒಕ್ಕಲು ಆದವರಿಗೂ ಕಾದಂಬರಿ ಒಂದು ಮಾಧ್ಯಮ ಅಷ್ಟೇ. ಕೆಲ ಕಾದಂಬರಿ ನಾಟಕ ವಾಗುವದಕ್ಕೆ ಹೆಚ್ಚು ಯೋಗ್ಯತೆ ಪಡೆದಿರು ತ್ತವೆ. ಆದರೂ ಅವು ಕಾದಂಬರಿ ರೂಪದಲ್ಲಿ ಪ್ರಕಟಗೊಳ್ಳುತ್ತಿವೆ. ವೈವಿಧ್ಯಮಯ ಸಾಹಿತ್ಯ ಸಾಧನೆಗಳಲ್ಲಿಯೂ, ಕಾದಂಬರಿಯೇ ಪ್ರಮುಖವೆನಿಸುವ, ಸಾಹಿತಿಗಳೂ ಇದ್ದಾರೆ. ಇಂತಹರು ಕಾದಂಬರಿಗಳನ್ನು ಬರೆಯುವದು ಬದುಕಿನ ವಿವಿಧ ಮುಖಗಳ ಜೀವಂತ ಸನ್ನಿ ವೇಶಗಳನ್ನು ಕುರಿತು. ಇನ್ನೂ ಕೆಲವರು ಮಾನವ ಜೀವನದಲ್ಲಿ ವಿವಿಧ ಹೊಳಹು ಗಳನ್ನು ಸ್ವಾರಸ್ಯಕರವಾಗಿ ಕಲಾತ್ಮಕವಾಗಿ ಬರೆ ಯುವದನ್ನು ಸಾಧಿಸಿದ್ದಾರೆ. ಕಾದಂಬರಿ ಬರೆ ಯದ ಸಾಹಿತಿಗೆ ಪ್ರಕಾಶಕರಿಂದಲೂ 'ಆದರ' ಕಡಿಮೆಯಂತೆ! ಪರಿಚಯದ ಸಾಹಿತಿಗಳಿಗೆ ಕಾದಂಬರಿ ಬರೆಯಲು ಪ್ರಚೋದಿಸುವ ಪ್ರಕಾಶಕರೂ ಎಂತಲೇ ಕಂಡು ಬರುತ್ತಾರೆ!!

ಕಾದಂಬರಿಗಳ ಗಾತ್ರವೂ ಬೆಳೆಯುತ್ತಿದೆ. ಒಂದು ಕಾಲದಲ್ಲಿ 200ಪುಟಗಳ ಕಾದಂಬರಿ ಯೆಂದರೆ ಓದುವವರಿಗೂ ಬರೆಯುವವರಿಗೂ ಪ್ರಕಾಶಕರಿಗೂ ದೊಡ್ಡದೆನಿಸುತ್ತಿತ್ತಂತೆ! ಇಂದು 2000 ಪುಟಕ್ಕೂ ಮಿಕ್ಕಿದ ಕಾದಂಬರಿ ಕನ್ನಡದಲ್ಲಿಯೇ ಬಂದಿದೆ. (ಪಟ್ಟ ಮಹಿಷಿ ಶಾಂತಲಾ) ಇದನ್ನು ಮೀರಿಸುವ ದೊಡ್ಡ ಕಾದಂಬರಿ ಮಲೆಯಾಳಿಯಲ್ಲಿ ಬಂದಿದೆ ಯಂತೆ. ಕನ್ನಡದ ಕಾದಂಬರಿಗೆ 150 ರೂ. ಬೆಲೆಯಾದರೆ ಮಲೆಯಾಳಿಯದಕ್ಕೆ 200 ರೂ. ಬೆಲೆಯಂತೆ. ಅಂತೂ ಗಾತ್ರದಲ್ಲೇನೂ ಕೊರತೆ ಯಿಲ್ಲ. ಸಣ್ಣದಾಗುವ ಕತೆಯನ್ನು ಎಳೆದೆಳೆದು ದೊಡ್ಡದನ್ನಾಗಿಸುವ ಪ್ರವೃತ್ತಿಯನ್ನೂ ಕೆಲ ಸಾಹಿತಿಗಳಲ್ಲಿ ಕಾಣಬಹುದಾಗಿದೆ.

ಧಾರಾವಾಹಿಯಾಗಿ ಬರುವ ಕಾದಂಬರಿ ಗಳಲ್ಲಿ ತಮಿಳಿನದೇ ಒಂದು ವೈಶಿಷ್ಟ್ಯವೆಂದು ಕಾಣುತ್ತದೆ. ಕನ್ನಡದಲ್ಲಿ ಧಾರಾವಾಹಿ ಗಳಿಂದಲೇ ಕಾದಂಬರಿ ಬೆಳೆ ಪ್ರಾರಂಭವಾಯಿ ತಾದರೂ, ಕೆಲಕಾಲ ಪತ್ರಿಕೆಗಳಲ್ಲಿ ಕಾದಂಬರಿ ಗಳಿಗೆ ಸ್ಥಾನ ಸಿಕ್ಕುತ್ತಿರಲಿಲ್ಲ. ಆ ಕಾಲದಲ್ಲೂ ತಮಿಳಿನ ಧಾರಾವಾಹಿ ಲಕ್ಷಗಟ್ಟಲೆ ಓದುಗ ರನ್ನು ದೊರಕಿಸಿಕೊಂಡಿತ್ತು. ಇಂದಿಗೂ ತಮಿ ಳಿನ ಓದುಗರ ಸಂಖ್ಯೆ ಹೆಚ್ಚು. ಅವರು ಎಲ್ಲಿಯೇ ಇರಲಿ ತಮಿಳು ಪತ್ರಿಕೆಗಳನ್ನು ಓದುವ ಹವ್ಯಾಸ ಇದ್ದವರಲ್ಲವೇ? ಒಂದೊಂದು ಧಾರಾವಾಹಿ ಸುದೀರ್ಘವಾಗಿ ಬರಬೇಕೆನ್ನುವದೇ ಅನೇಕರ ಅಪೇಕ್ಷೆ. ಒಮ್ಮೊಮ್ಮೆ ವಾರಕ್ಕೊಂದು ಕಂತಿನಂತೆ ಎರಡು ಎರಡೂವರೆ ವರ್ಷಗಳವರೆಗೂ ಮುಂದುವರಿ ಯುತ್ತಿದ್ದುದೂ ಉಂಟಂತೆ. ಇಷ್ಟು ದೀರ್ಘ ಅವಧಿಯಲ್ಲಿ ಬರಹಗಾರ ಕಾಯಿಲೆ ಬಿದ್ದರೂ, ಕಾದಂಬರಿ ಏಕೆ ಮುಂದುವರಿಯುತ್ತಿಲ್ಲವೆಂಬು ದನ್ನು ತಿಳಿಯಬಯಸುತ್ತಾರೆ. ಅನಿವಾರ್ಯ ಕಾರಣಗಳಿದ್ದರೂ ಅವುಗಳ ಬಗ್ಗೆ ತಿಳಿಯಲು ಆತುರರಾಗಿತ್ತಾರೆ. ಆದ್ದರಿಂದ ಕಾದಂಬರಿ ಕಾರನು ಆಸ್ಪತ್ರೆಯ ಹಾಸಿಗೆಯಿಂದಲೇ ಬರೆಯ ಬೇಕಾದ ಪ್ರಸಂಗಗಳೂ ಉಂಟಂತೆ. ಇದು ಅಲ್ಲಿಯ ಜನಪ್ರಿಯತೆಯ ಮಾದರಿ. ಅಸ್ವಸ್ಥತೆ ಎಂದು ತಿಳಿದುಬಂದಾಗ ಆಸ್ಪತ್ರೆಗೆ ಹೋಗಿ ಯೋಗಕ್ಷೇಮ ವಿಚಾರಿಸಿ ಕಾದಂಬರಿಯ ಮುಂದಿನ ಹೊಳಹನ್ನು ಕುತೂಹಲದಿಂದ ಕೇಳುತ್ತಾರಂತೆ. ಅದರ ವಿವರಗಳು ಪತ್ರಿಕೆಗಳ ಲ್ಲಿಯೂ ಬರುತ್ತವೆ.

ಕನ್ನಡದ ಧಾರಾವಾಹಿಗೆ ವೈಶಿಷ್ಟ್ಯಗಳಿಲ್ಲ ದಿಲ್ಲ. ಧಾರಾವಾಹಿ ಆಕಾಶವಾಣಿಯಲ್ಲೂ ಬಂದಿವೆ. ದಿನಪತ್ರಿಕೆಗಳಲ್ಲೂ ಬಂದಿವೆ, ಬರು ತ್ತಿವೆ. ಇತರ ಭಾಷೆಗಳಲ್ಲಿ ಇಂತಹ ದೈನಿಕ ಧಾರಾವಾಹಿಗಳಿರುವವೋ ಇಲ್ಲವೊ. ಕನ್ನಡಿ ಗರ ಕಾದಂಬರಿ ಪ್ರಿಯತೆಯನ್ನು ತಮ್ಮ ಪತ್ರಿಕೆ ಗಳ ಪ್ರಚಾರ ಪ್ರಸಾರಕ್ಕಾಗಿ ಉಪಯೋಗಿಸಿ

ಕೊಳ್ಳುವದನ್ನು ಕನ್ನಡ ದಿನಪತ್ರಿಕೆಗಳು ಮರೆತಿಲ್ಲ. ಮರಾಠಿಯಲ್ಲಿ ಧಾರಾವಾಹಿ ರೂಪದಲ್ಲಿ ಕಾದಂಬರಿಗಳು ಕಡಿಮೆಯಂತೆ. ಆದರೂ ಕಾದಂಬರಿಪ್ರಿಯತೆ ಕಡಿಮೆಯದಲ್ಲ.

ಐತಿಹಾಸಿಕ ಕಾದಂಬರಿಗಳೂ ಇತ್ತೀಚೆಗೆ ಪ್ರಾಧಾನ್ಯ ಪಡೆಯುತ್ತಿವೆ. ನಮ್ಮ ನಾಡಿನ ಮೇಲ್ಮೆ ಜನರ ಕೆಚ್ಚುಗಳನ್ನು ರಸವತ್ತಾಗಿ ಚಿತ್ರಿಸುವ ನಿಪುಣ ಬರಹಗಾರರು ಅನೇಕ ಸಲ ಭಾವನೆಗಳನ್ನು ಉದ್ರೇಕಗೊಳಿಸಬಹುದು. ನಮ್ಮ ಹಿಂದಿನ ಇತಿಹಾಸ ಉಜ್ವಲವಾದುದಲ್ಲವೆ? ಭಾರತದಲ್ಲಿ ಯಾವ ಇತಿಹಾಸ ಉಜ್ವಲವಾಗಿರಲಿಲ್ಲ? ಆದರೂ ಅಂತಃಕಲಹಗಳಿಂದಲೋ ಇಂಗ್ಲೀಷರ ಕುತಂತ್ರಗಳಿಂದಲೋ ನಾವೆಲ್ಲ ಏಕಕಾಲದಲ್ಲಿ ದಾಸ್ಯಕ್ಕೆ ಒಳಗಾದೆವು. ಬಿಳಿಯರ ಗುಲಾಮರಾಗಿಯೂ ಎರಡು ಮೂರು ಶತಮಾನಗಳನ್ನು ಕಳೆದೆವು. ಆದರೆ ಒಂದು ಕಾಲದಲ್ಲಿ ಬಿಳಿಯರೂ ಭಾರತದಲ್ಲಿ ಗುಲಾಮರಾಗಿದ್ದರಂತೆ. ಅದನ್ನು ಚಿತ್ರಿಸುತ್ತಾರೆ... ತಮಿಳು ಚರಿತ್ರೆಯ ಕಾದಂಬರಿಕಾರರು. ನಾವೂ ಕಾವೇರಿಯಿಂದ ಗೋದಾವರಿವರೆಗಿನ ನಾಡೆಂದು ಮೆರೆಯುವವರು. ಮಹಾರಾಷ್ಟ್ರ, ತಮಿಳುನಾಡಿನ, ತೆಲುಗು ಪ್ರದೇಶದ ಸೀಮೆಗಳಲ್ಲಿ ಕರ್ನಾಟಕ ರಾಜರು ಪ್ರಭುತ್ವ ನಡೆಸಿದರೆಂದು ಹೆಮ್ಮೆಯಿಂದ ಹೇಳಿಕೊಂಡಂತೆ, ನಮ್ಮ ಕರ್ನಾಟಕದಲ್ಲೆಲ್ಲ ಮಹಾರಾಷ್ಟ್ರದ ಪ್ರಭಾವಯುತ ರಾಜ್ಯ ಇತ್ತೆಂದು ಅಲ್ಲಿಯ ಕಾದಂಬರಿಗಳು ಚಿತ್ರಿಸುತ್ತವೆ. ನಮ್ಮ ನೆನಪಿನಲ್ಲಿಯೇ ಕರ್ನಾಟಕದಲ್ಲಿ ಹಿಂದಿನ ಮರಾಠಿ ಸಂಸ್ಥಾನಗಳು ಪ್ರಭುತ್ವ ನಡೆಸಿದ್ದನ್ನು ನೋಡಿಲ್ಲವೆ? ಹೀಗಾಗಿ ಭಾವನೆಗಳ ತಾಕಲಾಟಗಳು ಉಂಟಾಗುತ್ತವೆ. ಪ್ರಾದೇಶಿಕ ಉತ್ಸಾಹ ಹುಮ್ಮಸ್ಸುಗಳು ಇತರರ ಬಗ್ಗೆ ವೈಮನಸ್ಸನ್ನುಂಟುಮಾಡುವ ಪ್ರಸಂಗಗಳೂ ಬರುವದುಂಟು.

ಜಾತಿ ಜಾತಿಗಳ ವೈಮನಸ್ಸಿಗೂ ಪ್ರಾಶಸ್ತ್ಯವಿರುವ ಐತಿಹಾಸಿಕ ಕಾದಂಬರಿಗಳಿಗೂ ನಮ್ಮಲ್ಲಿ ಕೊರತೆಯಿಲ್ಲವೇನೋ. ಸಾಹಿತ್ಯ ಸಹಜೀವನವನ್ನು ಪ್ರೋತ್ಸಾಹಿಸದಿರುವ ರೀತಿಯಲ್ಲಿ ಚಿತ್ರಿತವಾಗುವುದೇ ಸರಿಯಲ್ಲವಲ್ಲ! ಇತಿಹಾಸದ ಪುಟಗಳಿಂದ ಜೀವನವನ್ನು [illegible] [illegible]ಗೊಳಿಸುವಂತೆ ಎತ್ತಿಕೊಳ್ಳುವ ಪ್ರಾಮಾ[illegible]ಣಿಕ ಪ್ರಯತ್ನ ಇರಬೇಕಲ್ಲವೆ? ಹಿಂದಿನ ಜೀವನವನ್ನು ಇಂದಿನ ರೀತಿಯಲ್ಲಿ ಚಿತ್ರಿಸುವದು ಎಷ್ಟು ಯೋಗ್ಯ? ಇದಲ್ಲದೆ ಐತಿಹಾಸಿಕ ಕಾದಂಬರಿಗಳಿಗೆ ಅನೇಕ ಸಲ ಇಂಗ್ಲೀಷಿನಲ್ಲಿರುವ ದಾಖಲೆಗಳೇ ಆಧಾರ. ಕನ್ನಡದ ಕಾದಂಬರಿಗಳು ಇಂಥ ಆಧಾರಗಳಿಂದ ಬರೆದವುಗಳು. ಅದೆಷ್ಟೋ ಸಲ ಕನ್ನಡದ ಊರುಗಳ ಹೆಸರುಗಳನ್ನೇ ಸರಿಯಾಗಿ ಬರೆಯುವದಿಲ್ಲ. ಅವುಗಳನ್ನು ಗುರುತಿಸುವದೂ ಕಷ್ಟ,






ವಾಗುತ್ತದೆ. 'ಬೆಲಗಾಮ್' 'ತಾಂಜೋರ್' ಡಾಬುಲ (ಡಂಬಳ) ಎಂದೂ ಬರೆಯಲ್ಪಡುತ್ತವೆ. ಇದು ನಮ್ಮ ಇಂಗ್ಲೀಷ್ ಬರಹದ ರೀತಿಯ ಅಗಾಧ ಸಾಮರ್ಥ್ಯದ ಕೊಡುಗೆ! ಇಂಗ್ಲೀಷ್ ಸರಿಯಾದ ಧ್ವನಿ ಹೊರಡಿಸುವದರಲ್ಲಿ ಬಹಳ ಬಡವಾದ ಅಶಕ್ತವಾದ ಭಾಷೆ. ಆದರೂ ನಮ್ಮ ಊರ ಹೆಸರುಗಳನ್ನು ಸೊಟ್ಟು ಸೊಟ್ಟಾಗಿ ಉಚ್ಚರಿಸುವ ಸಂಪ್ರದಾಯದ ಇಂಗ್ಲೀಷರನ್ನು ನಾವೂ ವಿಶ್ವಾಸಪೂರ್ವಕವಾಗಿ ವಿಧೇಯರಾಗಿ ಅನುಸರಿಸುವ ಉಚ್ಚ ಸಂಪ್ರದಾಯದ ಸಂಪನ್ನರು!

ಇಂದು ಕಾದಂಬರಿ ಪ್ರಪಂಚ ವಿಶಾಲವಾಗಿದೆ. ಇತರ ಭಾಷೆಗಳಿಂದಲೂ ಕಾದಂಬರಿಗಳು ಅನುವಾದಗೊಳ್ಳುತ್ತಿವೆ. ಅನುವಾದದ ಕಾದಂಬರಿಗಳಂತೂ ಇಂಗ್ಲೀಷ್ ಮತ್ತು ಹಿಂದಿಗಳ ಮೂಲಕ ಬರುವದೇ ಹೆಚ್ಚು. ಆ ಭಾಷೆಗಳ ಛಾಯಾ ದೋಷಗಳು ಚೆನ್ನಾಗಿ ಎದ್ದು ಕಾಣುತ್ತವೆ. ಮೂಲ ಭಾಷೆಯ ಮತ್ತು ಅಲ್ಲಿಯ ಜನರ ವೈಶಿಷ್ಟ್ಯ ಮಾತ್ರ ಎಲ್ಲಿಯೋ ಮಾಯವಾಗಿರುತ್ತದೆ. ಪ್ರಾದೇಶಿಕ ಕಾದಂಬರಿಗಳನ್ನು ಆ ಪ್ರದೇಶದ ಜೀವನವನ್ನು ನೋಡಿ ಬಂದಾಗಲೇ ಸರಿಯಾಗಿ ಅರ್ಥಮಾಡಿಕೊಳ್ಳಬಹುದು. ಅಲ್ಲಿಯ ರೀತಿ-ನೀತಿಗಳನ್ನು ನೋಡಿದಾಗಲೇ ಸಮರ್ಥವಾದ ಅನುವಾದ ಸಾಧ್ಯವಾಗಬಹುದೇನೋ? 'ಕನ್ನಡದ ಕೆಲ ಪ್ರಾದೇಶಿಕ ಕಾದಂಬರಿಗಳ ಸರಿಯಾದ ಅನುವಾದ ಬೇರೆ ಭಾಷೆಗೆ ಸಾಧ್ಯವೆ?' ಎಂಬ ಸಂದೇಹ ಉಂಟಾಗುತ್ತದೆ. ನಾಡಿನ ಜೀವನ ವಾಸ್ತವವಾಗಿ ಚಿತ್ರಿತ ಕಾದಂಬರಿಯನ್ನು ಅಲ್ಲಲ್ಲಿಯ ಭಾಷೆಯಲ್ಲಿಯೇ ಓದಬೇಕೇನೋ! ಕೆಲ ಪ್ರಾದೇಶಿಕ ಕಾದಂಬರಿಗಳಲ್ಲಿ ಅದು ಚಿತ್ರಿಸುವ ಪ್ರದೇಶದ ನಕ್ಷೆಗಳನ್ನು ಪ್ರಕಟಿಸುತ್ತಾರೆ.

ಅನುವಾದ ಕಷ್ಟದ್ದೆನಿಸುವ ಪ್ರಾದೇಶಿಕ ಕಾದಂಬರಿಗಳೂ ಒಂದು ರೀತಿಯಲ್ಲಾದರೆ ಇನ್ನೊಂದು ರೀತಿಯ ಮಿಶ್ರ ಭಾಷೆಯ ಕಾದಂಬರಿಗಳೂ ವಾಸ್ತವತೆಯ ನೆಪದಿಂದ ಬರುತ್ತಿವೆ. ಇಂತಹ ಕಾದಂಬರಿಗಳಲ್ಲಿ "ಬಾಯ್ ಬಾಯ್" "ಗುಡ್ ನೈಟ್" ಗಳಂತೂ ನಮ್ಮ ಜೀವನದ ಮುಖ್ಯ ಶಬ್ದಗಳೆನಿಸುತ್ತವೆ. "ಮಾಂಶಿ" "ಲಗೇಜ್" "ಪರತ" "ತಾಬಡತೋಬ" "ಬರೋಬರಿ"ಗಳೂ "ಟೀ ಸರ್ವರ್" "ಸ್ಮಾರ್ಟ್" "ಥ್ಯಾಂಕ್ಯು ಅಂಕಲ್" "ಪ್ಲೀಜ್ ಕಮಿನ್" "ಡ್ಯಾಮಿಟ್" ಇವುಗಳೂ ಧಾರಾಳವಾಗಿ ಬರವಣಿಗೆಯಲ್ಲಿ ಬೆರೆತು ಬಿಡುತ್ತವೆ. ಇದು ಕನ್ನಡವೇ? ಎಂದು ಪ್ರಶ್ನಿಸಿದವರಿಗೆ ಅಚ್ಚ ಕನ್ನಡದಲ್ಲಿ ಮಾತನಾಡುವ ಜನ ಎಲ್ಲಿದ್ದಾರೆಂಬ ಮರುಪ್ರಶ್ನೆ ಎದುರಾಗಬಹುದಾಗಿದೆ. ಮುಂಬಯಿ ಜೀವನದಲ್ಲಿ ಇಂತಹ ಶಬ್ದಗಳು ಅನಿವಾರ್ಯವೆಂದೂ ವಾದ ಬರಬಹುದಾಗಿದೆ. ಏನೇ ಆದರೂ ಕಾದಂಬರಿಗಳೆನಿಸಬಿಡುತ್ತವೆ. ಅವುಗಳನ್ನು ಓದುವ ಜನ ಇದ್ದಾರೆ. ಸಾವಿರಾರು ಸಂಖ್ಯೆಯಲ್ಲಿದ್ದಾರೆ. ಕನ್ನಡಕ್ಕೆ ಭೂಷಣವಾಗಿರಲಿ, ಇರದಿರಲಿ, ಕನ್ನಡದ ಅಕ್ಷರಗಳಲ್ಲಿ ಪ್ರಕಟವಾಗಿದ್ದರೆ ಅದು ಕನ್ನಡದ್ದು! ಪ್ರತಿವರ್ಷ ಕಾದಂಬರಿ ಸ್ಪರ್ಧೆಗಳಲ್ಲಿ ಇಂತಹ ಪುಸ್ತಕಗಳೇ ಗೆಲ್ಲುತ್ತಿರುವದನ್ನು ನೋಡುತ್ತೇವೆ. ನವೀನ ತಂತ್ರದ ಕಾದಂಬರಿಗಳೆಂದು ಸಮರ್ಥಿಸಿಕೊಳ್ಳುತ್ತೇವೆ. ಈ ತಂತ್ರಗಳಿಗೆಲ್ಲ ಇಂಗ್ಲೀಷ್ ಆಧಾರ ಸೂತ್ರವಲ್ಲವೆ? ಈಗಿನ ಕಾದಂಬರಿಯ ರೂಪ ಇಂಗ್ಲೀಷ್ ಪ್ರಭಾವದ್ದೇ ಅಲ್ಲವೆ? ಆದರೂ 'ದೇಸಿ' ಛಟ್ನಿಯ ಸ್ವಾರಸ್ಯವೇ ಬೇರೆ.

ಕನ್ನಡ ನಾಡಿನಲ್ಲಿ ಕೇವಲ ಕಾದಂಬರಿಕಾರರೆಂದೇ ಪ್ರಸಿದ್ಧರಾದವರಿದ್ದಾರೆ. ಪ್ರಸಿದ್ಧರಾದರೆಂದು ಕಾದಂಬರಿ ಬರೆದವರೂ ಇದ್ದಾರೆ. ಕೆಲವರು ಸವ್ಯಸಾಚಿಗಳೆನಿಸಿದವರೂ ಇದ್ದಾರೆ. ಕಾದಂಬರಿ ಹುಲುಸಾಗಿ ಬೆಳೆದಿದೆ. ಹೊಲಸಾಗಿಯೂ ಬೆಳೆದಿದೆ. ಓದುಗರಿಗೆ ಸಾಕಷ್ಟು ವೈವಿಧ್ಯವಿದೆ. ತಮ್ಮ ತಮ್ಮ ಅಭಿರುಚಿಗಳಿಗನುಗುಣವಾಗಿ ಓದಲು ಕಾದಂಬರಿಗಳಿವೆ. ಕೆಲವಂತೂ ಪಠ್ಯಪುಸ್ತಕಗಳಾಗಿವೆ. ಆ ಯೋಗ್ಯತೆಯನ್ನು ನಿರ್ಧರಿಸುವ ಅಳತೆಗೋಲು ಹೇಗೆ ಇರಲಿ ಅಗಾಧ ಪ್ರಸಾರ ಪಡೆಯುತ್ತಿವೆ. ಚರ್ಚಾಕೂಟಗಳಾಗುತ್ತವೆ. ಟೀಕೆಗಳು ಬರುತ್ತವೆ. ವಿಚಾರ ಸಂಕಿರಣಗಳು ಏರ್ಪಡುತ್ತವೆ. ಕಾದಂಬರಿ ಸೇವೆ ಹೇಗೆ ಹೀಗೆ ಬಗೆ ಬಗೆಯಾಗಿ ಸಾಗಿದೆ. ಅನೇಕ ಕೂಟಗಳಲ್ಲಿ ಮೀಟಿಂಗುಗಳಲ್ಲಿ ಕಾದಂಬರಿ ಸೇವನೆ ಪ್ರತಿಷ್ಠೆಯ ಸಂಕೇತವಾಗುತ್ತಿದೆ.

ಕಾದಂಬರಿಗಳಿಗೆ ಸಿನಿಮಾದ ಪ್ರಚಂಡ

ಪ್ರಸಾರ ಮಾಧ್ಯಮವೂ ದೊರಕಿದೆ. ಕಾದಂಬರಿ ನೋಡಿ ಸಿನಿಮಾ ಮಾಡುವಂತೆ ಸಿನಿಮಾ ನೋಡಿ ಕಾದಂಬರಿ ಬರೆಯುವವರೂ ಇದ್ದಾರೆ. ಸಿನಿಮಾ ಆಗಲಿ ಎಂಬ ಉದ್ದೇಶ ದಿಂದಲೇ ಕಾದಂಬರಿ ಹೊಸೆಯುವ ಸಮರ್ಥ ಬರಹಗಾರರೂ ಇದ್ದಾರೆ. ಧಾರಾವಾಹಿಯ ಜೊತೆಗೆ ಪತ್ರಿಕೆಗಳಲ್ಲಿ ಸಂದರ್ಭ ಚಿತ್ರಗಳೂ ಆಕರ್ಷಕವಾಗಿ ಪ್ರಕಟವಾಗುತ್ತವೆ. ಇದಕ್ಕಾಗಿ "ಫೋಟೋಗ್ರಾಫಿ"ಯ ಸಹಾಯವನ್ನು ಪಡೆ ಯುವವರೂ ಇದ್ದಾರೆ. ಕಾದಂಬರಿ ಪ್ರಕಟ ಗೊಳ್ಳುತ್ತಿರುವಂತೆಯೇ ಕೆಲ ನಟರನ್ನು ಆಯ್ಕೆ ಮಾಡಿ ಕತೆಯ ಸನ್ನಿವೇಶಗಳಿಗೆ ತಕ್ಕ ಫೋಟೋ ಗಳನ್ನು ಒದಗಿಸುವ ಪರಿಪಾಠ ಹಿಂದಿಯ ಕೆಲ ಪತ್ರಿಕೆಗಳಲ್ಲಿ ಅನೇಕ ವರ್ಷಗಳಿಂದ ಬಂದಿದೆ. ನಮ್ಮ ಭಾಷೆಯಲ್ಲಿಯೂ ಇಂತಹ ಪರಿಪಾಠ ಕಂಡುಬರುತ್ತಿದೆ. ಚಿತ್ರಪಟವಾಗುವ ಮುನ್ಸೂಚನೆ ಇಂತಹ ಚಿತ್ರಗಳಲ್ಲೇ ಕಂಡುಬರುತ್ತವೆ ಎಂದೆನ್ನಬಹುದು. ಇಂಥ ಹೊಸ ಆಕರ್ಷಕ ವಿಧಾನಗಳಿಗೆಲ್ಲ ಧನ ಬೇಕು ಜನ ಬೇಕು ಸಹ ಕಾರ ಬೇಕು. ಕಾದಂಬರಿಪ್ರಿಯತೆ ಇದನ್ನೆಲ್ಲ ಬೆಳೆಸಿದೆ. ಹೀಗೆ ಹೊಸ ಹೊಸ ರೀತಿಗಳಲ್ಲಿ ಬೆಳೆಯುತ್ತಿದೆ. ಪತ್ರಿಕೆ ಕಾದಂಬರಿಗಳನ್ನು ಬೆಳೆ ಸುತ್ತಿವೆ. ಕಾದಂಬರಿಗಳು ಪತ್ರಿಕೆಗಳನ್ನು ಜನ ಪ್ರಿಯಗೊಳಿಸುತ್ತಿವೆ.

ಜೀವನದಲ್ಲಿ ಸಾತ್ವಿಕ ಭಾವ ಅಚ್ಚುಕಟ್ಟುತನ ಇದ್ದಂತೆ ಅಸತ್ಯ ವಂಚನೆ, ಕೊಲೆ, ಸುಲಿಗೆ, ವ್ಯಭಿಚಾರಗಳೂ ತುಂಬಿವೆ. ಅವುಗಳನ್ನೆಲ್ಲ ಯಥಾವತ್ತಾಗಿ ಚಿತ್ರಿಸಿದರೆ ನವಯುವ ಜನಾಂಗದ ಮೇಲೆ ಎಂತಹ ಪರಿಣಾಮವಾದೀ ತೆಂಬುದನ್ನು ನಾವು ಗಮನಿಸಬೇಕು. ವೈಜ್ಞಾನಿಕವಾಗಿ ನಾವು ಸುಧಾರಿಸಿದಂತೆ ವ್ಯಭಿಚಾರ, ದರೋಡೆ, ಕೊಲೆಗಳೂ 'ಸುಧಾರಿಸಿವೆ.' ಬ್ಯಾಂಕ್ ದರೋಡೆ ಮೊದಲಾದವುಗಳಿಗೆ ಕಾದಂಬರಿ ಪ್ರೇರಣೆ ನೀಡುತ್ತಿದೆಯನ್ನುವವ ರಿಲ್ಲವೆ? ಆದ್ದರಿಂದ ಇಂತಹ 'ಜನಪ್ರಿಯತೆ' ಪಡೆದ ಕಾದಂಬರಿ ಬದುಕನ್ನು ಯಾವ ರೀತಿ ಸುಧಾರಿಸಿತು. ಅನೇಕ ಪ್ರಿಯ ಅಪ್ರಿಯ ಪರಿ ಣಾಮವನ್ನುಂಟುಮಾಡುವ ಕಾದಂಬರಿ ಪ್ರಿಯತೆ ಅಪರೋಕ್ಷವಾಗಿ ಅತ್ಯಾಚಾರ ಅನಾ ಚಾರಗಳಿಗೆ ಕ್ರಮಬದ್ಧತೆಯನ್ನು ಒದಗಿಸಿದೆ ಎನ್ನುತ್ತಾರೆ.

ಕಾದಂಬರಿ ಎಂದರೆ ಮಾದಕ ಪೇಯ ವೆಂದರ್ಥವಿದೆ. ಅಂತಹ ಕಾದಂಬರಿಪ್ರಿಯ ತೆಯೂ ನಮ್ಮಲ್ಲಿ ಹೆಚ್ಚುತ್ತಿದೆ. ಓಣಿ ಓಣಿ ಗಳಲ್ಲಿ ಕಾದಂಬರಿಗಳು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿದಂತೆ ಮದ್ಯದಂಗಡಿಗಳು ತಲೆಯೆತ್ತಿವೆ ಆದರೂ ಪರದೇಶದ ಕಾದಂಬರಿಯೇ ಹೆಚ್ಚು ಮಾದಕ; ಹೆಚ್ಚು ಪ್ರಭಾವಶಾಲಿಯಾದದ್ದು. ನಾವು ಗುಣಪಕ್ಷಪಾತಿಗಳು. ಸ್ವ-ಅಭಿಮಾನಿ ಗಳಲ್ಲ. ಕಾದಂಬರಿಯನ್ನು ಇಷ್ಟು ಪ್ರಿಯವಾಗು ವಂತೆ ಸಾಹಿತ್ಯದ ಪ್ರಕಾರಕ್ಕೆ ಹೆಸರು ತಂದ ಬಾಣಭಟ್ಟನೆ ಧನ್ಯನು. ಕನ್ನಡದಲ್ಲಿ ಮರಾಠಿ ಯಲ್ಲಿ ಈ ಹೆಸರು ಹೆಚ್ಚು ಅರ್ಥಪೂರ್ಣ ವಾಗಿದೆ. ಹಿಂದಿ ಬಂಗಾಲಿಗಳ ಉಪನ್ಯಾಸ ಎಂಬುದಾಗಲಿ ತೆಲಗು ತಮಿಳುಗಳ ನಾವೆಲ್ ಗಳಾಗಲಿ ಈ ಮಾದಕತೆಯನ್ನು ತೋರಿಸುವ ದಿಲ್ಲ.

ಮಹಾತ್ಮಾ ಗಾಂಧಿಯವರ ನಾಡಿನಲ್ಲಿಯೂ ಎರಡೂ ಅರ್ಥದ ಕಾದಂಬರಿಗಳೂ –ವಿದೇ ಶದ್ದೇ– ಜನಪ್ರಿಯವಾಗುತ್ತಿದೆ. ವಿಷ ಮದ್ಯ ವಿದ್ದಂತೆ ಮದ್ಯ ವಿಷವಾಗಬಲ್ಲ ಪರಿಣಾಮವೂ ಇದೆಯಲ್ಲವೆ ಕೆಲ ಕಾದಂಬರಿಗಳಲ್ಲಿ? ವ್ಯಭಿ ಚಾರ ಅನೈತಿಕ ಸಂಬಂಧದ ಬಗ್ಗೆ ಓದುವುದಕ್ಕೆ ಅತಿರೋಚಕ ವಿಷಯಗಳೆಂದು ಕಾದಂಬರಿ ಕಾರರು ಕಂಡುಕೊಂಡಿದ್ದಾರೆ. ಅಲ್ಲಲ್ಲಿ ಇವು ಗಳನ್ನು ಸೇರಿಸುತ್ತಾರೆ.

ಒಂದು ಕಾದಂಬರಿಪ್ರಿಯತೆ ನಮ್ಮ ಓದಿನ ಮಟ್ಟವನ್ನು ವ್ಯಾಪಕತೆಯನ್ನು ತೋರಿದರೆ, ಇನ್ನೊಂದು ನಮ್ಮ ಜೀವನ 'ಸುಧಾರಿಸಿದ' ಮಟ್ಟವನ್ನು ತೋರುತ್ತಿದೆ! ಒಂದರಿಂದ ಇನ್ನೊಂದಕ್ಕೆ ಪ್ರಚೋದನೆ ದೊರೆತ ಸಂಗತಿ ಗಳೂ ಕಂಡುಬರುತ್ತಿವೆ.

ಕಾದಂಬರಿ ಸುಖವನ್ನುಣ್ಣುವವರ ಸ್ವಾತಂತ್ರ್ಯ ವನ್ನು ಪ್ರಶ್ನಿಸುವುದು ಅಪ್ರಾಸಂಗಿಕವಾದೀತು. ಆದರೆ ಅದನ್ನು ನೀಡುವವರ ವಿವೇಕವನ್ನು ಪ್ರಶ್ನಿಸುವ ಕಾಲ ಬಂದಿದೆಯೆಂದು ಕಾಣುತ್ತದೆ. ಜನಪ್ರಿಯವಾದದ್ದೆಲ್ಲ ಸಮಾಜಕ್ಕೆ ಒಳ್ಳೆಯ ದಾಗಿರುತ್ತದೆಂದು ಹೇಳಲಿಕ್ಕಾಗುವುದಿಲ್ಲ. ಆದರೆ ಒಳ್ಳೆಯದೆಲ್ಲ ಜನಪ್ರಿಯವಾಗುವದಕ್ಕೆ ಮಾನವನ ಬುದ್ಧಿ ಕಲೆ ಸಾಹಿತ್ಯ ವಿಜ್ಞಾನ ಶಕ್ತಿ ಗಳ ಉಪಯೋಗವಾಗಬೇಕು. ●

ರಶಿಯನ್ ಕಥೆ

# ಟಿಕೃನ ಕಾಂರ

• ಮಿಖಾಯಿಲ್ ಬುಲ್ಗಾಕೊವ್ •

ಈಗ ನಾನು ಏಕಾಂಗಿ. ನವೆಂಬರ್ ತಿಂಗಳ ಕತ್ತಲೆ ಮತ್ತು ಹಿಮದ ಸುಂಟರಗಾಳಿ ನನ್ನನ್ನು, ನಾನಿದ್ದ ಮನೆಯನ್ನೂ ಮುತ್ತಿದ್ದವು. ಹೊಗೆ ಗೂಡಿನಲ್ಲಿ ಸುಳಿಗಾಳಿ ಸುಂಯ್‌ಗುಡುತ್ತಿದ್ದಿತು. ನನ್ನ 24 ವರ್ಷಗಳನ್ನೂ ನಾನು ದೊಡ್ಡ ನಗರದಲ್ಲೇ ಕಳೆದಿದ್ದೇನೆ. ಘೀಳಿಡುವ ಹಿಮಮಾರುತ ಕೇವಲ ಕಾದಂಬರಿ ವಸ್ತು ಎಂದೇ ನನ್ನ ನಂಬಿಕೆಯಾಗಿದ್ದಿತು. ಆದರೆ, ಅದೂ ನಿಜ, ವಾಸ್ತವ ಎಂಬುದು ಈಗ ಸ್ಪಷ್ಟವಾಯಿತು. ಇಲ್ಲಿಯ ಸಂಜೆ ದೀರ್ಘಾವಧಿಯದು. ನನ್ನ ಎಡದಲ್ಲಿರುವ ಕಪ್ಪು ಕಿಟಕಿಯಲ್ಲಿ ಬೆಳಕಿನ ಪಟ್ಟಿ ಪ್ರತಿಫಲಿಸುತ್ತಿದ್ದಿತು. ನಾನು ಆ ಮಂದ ಬೆಳಕಿನಲ್ಲಿ 40 ವೆರ್ಸ್ಟ್ ದೂರದಲ್ಲಿನ ಡಿಸ್ಟ್ರಿಕ್ಟ್ ನಗರದ ಕನಸು ಕಾಣುತ್ತಿದ್ದೆ. ನಾನು ಸಂತಸದಿಂದ ಹುದ್ದೆ ತೊರೆದು, ಅಲ್ಲಿಗೆ ಹೋಗಲು ಸಿದ್ಧನಿದ್ದೆ! ಅಲ್ಲಿ ವಿದ್ಯುದ್ದೀಪಗಳಿದ್ದವು ಮತ್ತು ಸಮಾಲೋಚಿಸಲು ನಾಲ್ಕು ಮಂದಿ ವೈದ್ಯರಿದ್ದರು. ಏನೇ ಆಗಲಿ, ಅದು ಇಷ್ಟು ಭಯಾನಕವಲ್ಲ, ಆದರೆ ನಾನು ಓಡಿ ಹೋಗುವ ಸಾಧ್ಯತೆಗಳಿಲ್ಲ. ನಿಜವಾಗಿಯೂ ನನ್ನ ಮಟ್ಟಿಗೆ ಸತ್ಯಸಂಧನಾಗಿ ಹೇಳಬೇಕಾದರೆ, ಹಾಗೆ ಓಡಿಹೋಗುವುದೂ ಹೇಡಿತನ ಎಂಬುದು ನನಗೆ ಗೊತ್ತಿದ್ದಿತು. ನಾನು ವೈದ್ಯಕೀಯ ಶಾಲೆಯಲ್ಲಿ ಕಲಿತದ್ದೂ ನಿಜವಾಗಿಯೂ ಇದನ್ನೇ...

...ಯಾರಾದರೂ ಕಷ್ಟದ ಹೆರಿಗೆಯ ಗರ್ಭಿಣಿಯನ್ನು ಅಥವಾ ಗಿಡಿದ ಹರ್ನಿಯ ರೋಗಿಯನ್ನು ಕರೆ ತಂದರೆ? ಆಗ ನಾನೇನು ಮಾಡಬೇಕು ನೀವೇ ಹೇಳಿ. ನಾನು 48 ದಿನಗಳ ಹಿಂದೆಯಷ್ಟೇ, ಪದವಿ ಪಡೆದಿರಬಹುದು, ಆದರೆ ಹರ್ನಿಯ ತೀರ ಬೇರೆ ವಿಷಯ. ನಾನೂ ಒಮ್ಮೆ ಪ್ರಾಧ್ಯಾಪಕರು ಗಿಡಿದ ಹರ್ನಿಯದ ಶಸ್ತ್ರಚಿಕಿತ್ಸೆ ಮಾಡಿದುದನ್ನು ನೋಡಿದ್ದೇನೆ, ಅದೂ ಗ್ಯಾಲರಿ ಮೇಲೆ ಕುಳಿತು, ಅಷ್ಟೇ...

ಹರ್ನಿಯ ವಿಷಯ ಕೇಳಿದಾಗ ಅನೇಕ ಸಂದರ್ಭಗಳಲ್ಲಿ ನನ್ನ ಬೆನ್ನ ಹುರಿಯಲ್ಲಿ ತಪ್ತ ಲೋಹದ್ರವ ಹರಿದ ಅನುಭವವಾಗಿದೆ. ಪ್ರತಿ ಸಂಜೆ, ಚಹ ಸೇವಿಸುತ್ತ ನಾನು ಪ್ರಸೂತಿ ಶಾಸ್ತ್ರದ ಕೈಪಿಡಿಗಳನ್ನು ಅಧ್ಯಯನ ಮಾಡುತ್ತಿದ್ದೆ. ನನ್ನ ಎಡ ಭಾಗದಲ್ಲಿ ಡಾಡೆರ್ಲೀನ್ ಸಣ್ಣ ಆವೃತ್ತಿ ಇದ್ದರೆ ಬಲ ಭಾಗದಲ್ಲಿ ಶಸ್ತ್ರ ಚಿಕಿತ್ಸೆಗೆ ಸಂಬಂಧಿಸಿದ ವರ್ಣಮಯ ಚಿತ್ರ ಸಂಪುಟಗಳಿದ್ದವು. ಮೆಲ್ಲನೆ ಗೊಣಗುತ್ತ, ಧೂಮಪಾನ ಮಾಡುತ್ತ, ತಣ್ಣನೆಯ ಕಪ್ಪು ಚಹ ಸೇವಿಸುತ್ತ ಕಾಲ ಕಳೆಯುತ್ತಿದ್ದೆ.....

ನವೆಂಬರ್ 28ರ ರಾತ್ರಿ-ಸ್ಪಷ್ಟವಾಗಿ ನೆನಪಿದೆ -ನನಗೆ ಗಾಢನಿದ್ರೆ, ಬಾಗಿಲನ್ನು ಜೋರಾಗಿ ತಟ್ಟಿ, ಎಬ್ಬಿಸಿದರು. ಐದು ನಿಮಿಷಗಳಲ್ಲಿ ಷರಾಯಿ ಹಾಕಿಕೊಂಡೆ; ಹಾಗೆಯೇ, ಶಸ್ತ್ರ ಚಿಕಿತ್ಸೆಯ ಪವಿತ್ರ ಗ್ರಂಥಗಳ ಮೇಲೆ ಚಿಕಿತ್ಸಕ



ನೋಟ ಬೀರಿದೆ. ಅಂಗಳದಲ್ಲಿ ಜಾರು ಬಂಡಿಯ ಜೋರು ಸದ್ದು; ಮಾತುಗಳು ಸ್ಪಷ್ಟವಾಗಿ ಕೇಳಿಸುತ್ತಿರಲಿಲ್ಲ. ಆದರೆ ಈ ಗದ್ದಲ ವರ್ಸ್ಸಿಯ ಅಥವಾ ಗರ್ಭದಲ್ಲಿ ಪಲ್ಲಟಗೊಂಡ ಶಿಶುವಿಗಿಂತ ಕೆಟ್ಟದ್ದಾಗಿದ್ದಿತು. ಅವರು ನಿಕೊಲ್‌ಸ್ಕಿ ಆಸ್ಪತ್ರೆಗೆ ರಾತ್ರಿ ಹನ್ನೊಂದು ಗಂಟೆ ಹೊತ್ತಿನಲ್ಲಿ ಹೆಣ್ಣು ಮಗುವನ್ನು ಕರೆ ತಂದಿದ್ದರು, ನಾನು ಹೋಗಿ, ಅವಳನ್ನು ನೋಡಬೇಕಾಗಿದ್ದಿತು.

"ಆ ಎಳೆ ಹುಡುಗಿಯ ಪರಿಸ್ಥಿತಿ ತುಂಬಾ ಹದಗೆಟ್ಟಿದ್ದಿತು... ಅವಳು ಮರಣಶಯ್ಯೆಯಲ್ಲಿದ್ದಾಳೆ... ಕೂಡಲೇ ಆಸ್ಪತ್ರೆಗೆ ಬನ್ನಿ ಡಾಕ್ಟರ್," ನರ್ಸ್ ಹೇಳಿದಳು.

ಅಂಗಳ ದಾಟಿ ಆಸ್ಪತ್ರೆಯ ದ್ವಾರವನ್ನು ಪ್ರವೇಶಿಸುವವರೆಗೂ ಎಣ್ಣೆ ಕಂದೀಲಿನ ನೆರವಿನಿಂದಲೇ ಹೋದೆವು. ಆ ದೀಪವೊ ಮಿನುಗುತ್ತಿದ್ದಿತಷ್ಟೆ. ಶಸ್ತ್ರಚಿಕಿತ್ಸೆಯ ಕೋಣೆ ಬೆಳಗುತ್ತಿದ್ದಿತು ಮತ್ತು ಇಡೀ ಸಿಬ್ಬಂದಿ ವರ್ಗ ಶಸ್ತ್ರಚಿಕಿತ್ಸಕರ ನಿಲುವಂಗಿ ಧರಿಸಿ ಕಾಯುತ್ತ ನಿಂತಿದ್ದರು. ಅವರಲ್ಲಿ ಸಮರ್ಥನೂ, ಯುವಕನೂ ಆದ ದೆಮ್ಯಾನ್ ಲುಕಿಚ್ ಸಹಾಯಕನಾಗಿದ್ದ. ಅವನೊಡನೆ ನರ್ಸ್‌ಗಳಾದ ಅನ್ನಾ ನಿಕೊಲಯವ್ನಾ ಮತ್ತು ಪೆಲಗೆಯಾ ಇವಾನೊವ್ನಾ ಇದ್ದರು. ನಾನು ಇಪ್ಪತ್ತನಾಲ್ಕು ವರ್ಷದ ವೈದ್ಯ. ಎರಡು ತಿಂಗಳ ಹಿಂದಷ್ಟೇ ಪದವೀಧರನಾದ ನಂತರ ನಿಕೊಲ್‌ಸ್ಕಿ ಆಸ್ಪತ್ರೆಯ ಪ್ರಕ

ರಾಗಿ ನೇಮಕಗೊಂಡಿದ್ದೆ.

ಸಹಾಯಕ ಬಾಗಿಲು ತೆರೆದ, ತಾಯಿ ಕಾಣಿಸಿಕೊಂಡಳು. ಆಕೆ ಹಾರಿ ಬರುತ್ತಿದ್ದಂತೆ ತೋರಿತು. ಆಕೆ ಹಾಕಿಕೊಂಡಿದ್ದ ಫೆಲ್ಟ್ ಬೂಟುಗಳು ಜಾರುತ್ತಿದ್ದವು. ಆಕೆಯ ಸ್ಕಾರ್ಫ್ ಮೇಲೆ ಮಂಜಿನ ಹಳಕುಗಳಿದ್ದವು. ಅವಳ ತೋಳುಗಳಲ್ಲಿದ್ದ ಬಟ್ಟೆ ಗಂಟಿನಿಂದ ಗುರುಗುಟ್ಟುವ ಸದ್ದು, ಮೂಗಿನ ಸೊರ್ ಸೊರ್ ಸದ್ದು.

ಆಕೆ ಮೌನವಾಗಿ ಅಳುತ್ತಿದ್ದರಿಂದ ಮುಖ ವಿಕಾರಗೊಂಡಿದ್ದಿತು. ಆಕೆ ಧರಿಸಿದ್ದ ಕುರಿ ಚರ್ಮದ ಕೋಟು ಮತ್ತು ಸ್ಕಾರ್ಫನ್ನು ತೆಗೆದಳು. ತೋಳಿನಲ್ಲಿದ್ದ ಬಟ್ಟೆಗಳಿಂದ ಮುಚ್ಚಿದ್ದ ಸದ್ದು ಬರುತ್ತಿದ್ದ ಗಂಟನ್ನು ಬಿಚ್ಚಿದಳು. ಆಕೆಯ ತೋಳುಗಳಲ್ಲಿದ್ದುದು ಮೂರು ವರ್ಷದ ಹೆಣ್ಣು ಮಗು. ನಾನು ಅವಳತ್ತ ನೋಡಿದೆ—ನನ್ನ ಶಸ್ತ್ರಚಿಕಿತ್ಸೆ, ಏಕಾಂಗಿತನ ಮತ್ತು ವಿಶ್ವವಿದ್ಯಾನಿಲಯ ಶಿಕ್ಷಣದ ವ್ಯರ್ಥ ಹೊರೆ ಎಲ್ಲವನ್ನೂ ಆ ಮಗುವಿನ ಸೌಂದರ್ಯರಾಶಿ ನೋಡುತ್ತ ಮರೆತೆ. ನಾನಾರಿಗೆ ಹೋಲಿಸಲಿ? ನಾನು ಚಾಕೊಲೇಟ್ ಬಾಕ್ಸ್ ಮೇಲಿನ ಮಕ್ಕಳ ಚಿತ್ರಗಳನ್ನು ಮಾತ್ರ, ಅದೂ ಅಪರೂಪವಾಗಿ ನೋಡಿದ್ದೆನಷ್ಟೆ. ಆ ಹೆಣ್ಣು ಮಗುವಿನ ಕೇಶರಾಶಿ ನೀಳವಾಗಿದ್ದಿತು. ತೆಳು ಹೊಂಬಣ್ಣದ ಗುಂಗುರು ಕೂದಲುಗಳು. ದೊಡ್ಡ ನೀಲ ಕಂಗಳು. ಬೊಂಬೆಗಳಿಗಿರುವಂತೆ ಸೇಬು ಕೆಂಪಿನ ಕದಪಗಳು. ಆ ಮಗು ಸಾಕ್ಷಾತ್ ದೇವತೆಯಂತಿದ್ದಿತು. ಆದರೂ ವಿಚಿತ್ರವಾಗಿ ನೋಡುತ್ತಿದ್ದಿತು. ಪ್ರಾಯಶಃ ಭಯಭೀತಳಾಗಿ. ಮಗುವಿಗೆ ಉಸಿರಾಡುವುದು ಕಷ್ಟವಾಗಿದ್ದಿತು. ಆ ಮಗು ಪ್ರಾಯಶಃ ಹಲವು ಗಂಟೆಗಳು ಮಾತ್ರ ಬದುಕಿರಬಲ್ಲುದೇನೊ— ಎಂಬ ಆಲೋಚನೆ ಬಂದಾಗ, ನನ್ನ ಹೃದಯ ಸಂಪೂರ್ಣವಾಗಿ ಕುಸಿಯಿತು.

ಆ ಹೆಣ್ಣು ಮಗು ಪ್ರತಿ ಬಾರಿ ಉಸಿರೆಳೆದಾಗಲೂ ಅವಳ ಗಂಟಲಲ್ಲಿ ಕುಳಿ ಎದ್ದು ಕಾಣುತ್ತಿದ್ದಿತು. ಕಂಠದ ಸೆರೆಗಳು ಉಬ್ಬುತ್ತಿದ್ದವು. ಅವಳ ಕೆಂಗುಲಾಬಿ ಮುಖ ಬೂದು ಬಣ್ಣವಾಗುತ್ತಿದ್ದಿತು. ಮುಖವರ್ಣದಲ್ಲಾಗುವ ಇಂಥ ಬದಲಾವಣೆಗಳನ್ನು ಗಾಢವಾಗಿ ಗಮನಿಸುತ್ತಿದ್ದೆ ಮತ್ತು ವರ್ಣ ಬದಲಾವಣೆಯಿಂದ ರೋಗವನ್ನು ತಿಳಿಯುತ್ತಿದ್ದೆ. ಆ ಮಗುವಿಗೆ ಡಿಫ್ತೀರಿಯ ಆಗಿದೆ ಎಂಬುದು ಖಚಿತಪಟ್ಟಿತು. ಗಂಟಲಿನಲ್ಲಿ ಶ್ಲೇಷ್ಮ ಚರ್ಮ ಅಡಚಿಕೊಂಡಿತ್ತು. ಅದು ಸಂಪೂರ್ಣವಾಗಿ ಹರಡಿ, ಗಂಟಲನ್ನೇ ಮುಚ್ಚಬಹುದು. ನನ್ನ ಮೊದಲ ರೋಗ ನಿಧಾನವೇ ಸರಿ. ಅದಕ್ಕಿಂತ ಮಿಗಿಲಾದುದೆಂದರೆ, ಅನುಭವಿ ನರ್ಸ್‌ಗಳು ಬರುವ ಹೊತ್ತಿಗೆ ಆ ಮಗು ಕೂಡ ಬಂದಿದ್ದಿತು.

"ಎಷ್ಟು ದಿನದಿಂದ ಮಗು ಹೀಗೆ ನರಳುತ್ತಿದೆ?" ನಾನು ಸಿಬ್ಬಂದಿಯ ಮೌನ ಭೇದಿಸಿ ಕೇಳಿದೆ.

"ಐದು ದಿನಗಳಿಂದ", ಮಗುವಿನ ತಾಯಿ, ನನ್ನತ್ತ ಶುಷ್ಕನೋಟ ಬೀರುತ್ತ ಹೇಳಿದಳು.

"ಡಿಫ್ತೀರಿಯ", ನಾನು ನನ್ನ ಸಹಾಯಕನಿಗೆ ಕೇಳುವಂತೆ ಮೆಲ್ಲನೆ ಹೇಳಿ, ಆ ತಾಯಿ ಕಡೆ ತಿರುಗಿ ಜೋರಾಗಿ ಅರಚಿದೆ: "ಇಷ್ಟು ದಿನ ನೀವೇನು ಮಾಡುತ್ತಿದ್ದಿರಿ?"

"ಐದು ದಿನಗಳು!" ನನ್ನ ಹಿಂದಿನಿಂದ ದುಃಖತಪ್ತ ಧ್ವನಿ ಕೇಳಿಸಿತು. ನಾನು ತಿರುಗಿದೆ. ಸ್ಕಾರ್ಫ್ ಧರಿಸಿದ್ದ ದುಂಡುಮುಖದ ಮುದುಕಿ ಇದ್ದಳು. ಪ್ರಾಯಶಃ ಆಕೆ ಸಂಭವಿಸಬಹುದಾದ ಅಪಾಯವನ್ನು ಮುಂಗಂಡಳೊ ಏನೋ. "ಸುಮ್ಮನಿರಿ, ನಿಮ್ಮನ್ನು ಯಾರೂ ಕೇಳಲಿಲ್ಲವಲ್ಲ," ಎಂದು ಪುನಃ ತಾಯಿಯತ್ತ ತಿರುಗಿ ಹೇಳಿದೆ: "ಐದು ದಿನಗಳಿಂದ ಮಗು ನರಳುತ್ತಿದೆ, ನೀವೇನು ಮಾಡುತ್ತಿದ್ದಿರಿ?"

ಆ ತಾಯಿ, ಅಂತರ್ಬೋಧೆಯಿಂದ ಮಗುವನ್ನು ಆ ಮುದುಕಿ ಕೈಗೆ ಕೊಟ್ಟು, ನನ್ನ ಮುಂದೆ ಬಾಗಿ ಅಳಲು ಶುರುಮಾಡಿದಳು. ಆ ತಾಯಿ ಹಣೆಯನ್ನು ನೆಲಕ್ಕೆ ತಾಗಿಸಿ, "ದಯೆಯಿಟ್ಟು, ಮಗುವಿಗೆ ಡ್ರಾಪ್ಸ್ ಕೊಡಿ. ಆ ಹೆಣ್ಣು ಮಗು ಸತ್ತರೆ, ನಾನು ಸಾಯುತ್ತೇನೆ" ಎಂದಳು.

"ಏಳಿ, ಇಲ್ಲವೆ; ನಿಮ್ಮೊಡನೆಯೂ ಮಾತನಾಡಲ್ಲ" ಎಂದೆ.

ತಾಯಿ ತಕ್ಷಣ ಎದ್ದು ನಿಂತಳು, ಅಗಲವಾದ ಸ್ಕರ್ಟ್ ಅನ್ನು ಸರಿಪಡಿಸಿಕೊಂಡಳು. ಮುದುಕಿ ಕೈಲಿದ್ದ ಮಗುವನ್ನು ಎತ್ತಿಕೊಂಡು ಕೈಯಲ್ಲೇ ತೂಗಾಡಿಸಿದಳು. ಆ ಮುದುಕಿ ಬಾಗಿಲ ಬಳಿ

ದೇವರನ್ನು ಪ್ರಾರ್ಥಿಸುವಂತೆ ನಿಂತಿದ್ದಳು. ಮಗು ಮಾತ್ರ ಹಾವು ಬುಸುಗುಟ್ಟುವಂತೆ ಜೋರಾಗಿ ಉಸಿರೆಳೆಯುತ್ತಿದ್ದಿತು.

"ನೋಡು, ನಿನಗೆ ಬೇಕಾದ 'ಜನ' ಅಲ್ಲಿದ್ದಾರೆ, ಅವರು ಮಾಡುವುದೆಲ್ಲ ಅಷ್ಟನ್ನೇ" ಎಂದ ಸಹಾಯಕ, ಮೀಸೆ ಕೀಳುತ್ತ.

"ಹಾಗಾದರೆ, ಮಗು ಪ್ರಾಣ ಬಿಡುತ್ತೇನು?" ತಾಯಿ ನನ್ನತ್ತ ಕೋಪದಿಂದ ನೋಡುತ್ತ ಕೇಳಿದಳು.

"ಹೌದು", ನಾನು ಶಾಂತವಾಗಿ, ಧೃಢವಾಗಿ ಹೇಳಿದೆ.

ಆ ಮುದುಕಿ ಸ್ಕರ್ಟ್‌ನ ಅಂಚಿನಿಂದ ಕಣ್ಣೀರು ವರೆಸಿಕೊಳ್ಳಲು ಪ್ರಯತ್ನಿಸಿದಳು.

"ಮಗೂಗೆ ಸ್ವಲ್ಪ ಡ್ರಾಪ್ಸ್ ಕೊಡಿ! ಅವಳಿಗೆ ನೆರವಾಗಿ!" ಆ ತಾಯಿ ನನ್ನತ್ತ ವಿಕಾರಧ್ವನಿಯಲ್ಲಿ ಅರಚಿದಳು.

ನಾನು ಏನೆಲ್ಲ ಎದುರಿಸಬೇಕಾದೀತು ಎಂಬುದು ಸ್ಪಷ್ಟವಾಯಿತು. ನಾನು ಧೃಢಸಂಕಲ್ಪಿತನಾದೆ.

"ನಾನು ಮಗೂಗೆ ಯಾವ ಡ್ರಾಪ್ಸ್ ಕೊಡಬೇಕು? ದಯವಿಟ್ಟು ಹೇಳು. ಮಗೂಗೆ ಉಸಿರುಗಟ್ಟಿದೆ. ಅವಳ ಗಂಟಲು ಅಡಚಿಕೊಂಡಿದೆ. ಮಗು, ನನ್ನಿಂದ ಹದಿನೈದು ವೆರ್ಸ್ಟ್‌ಗಳ ದೂರದಲ್ಲಿ ಐದು ದಿನಗಳ ವರೆಗೆ ಕಾಯಿಲೆಯಿಂದ ನರಳುವಂತೆ ಮಾಡಿದೆ. ನಾನು ಈಗ ಏನು ಮಾಡಬೇಕೆಂದು ನಿನ್ನ ಅಪೇಕ್ಷೆ?"

"ನಿಮಗೇ ಚೆನ್ನಾಗಿ ಗೊತ್ತು" ಎಂದು ಆ ಮುದುಕಿ ನನ್ನ ಒಂದಿಸಿಂದ ಅಸಹಜವಾಗಿ ಹೇಳಿದಳು. ನನಗೆ ಮುದುಕಿ ಮೇಲೆ ಎಲ್ಲಿಲ್ಲದ ಕೋಪ ಬಂದಿತು.

"ಸ್ವಲ್ಪ ಮೌನ ವಹಿಸಿ!" ಎಂದು ಮುದುಕಿಗೆ ಹೇಳಿ, ಸಹಾಯಕನಿಗೆ ಮಗುವನ್ನು ತೆಗೆದುಕೊಳ್ಳಲು ಹೇಳಿದೆ. ಆ ತಾಯಿ ಮಗುವನ್ನು ನರ್ಸ್‌ ಕೈಗೆ ಒಪ್ಪಿಸಿದಳು. ಮಗು ಒದ್ದಾಡಿತು. ಗಂಟಲು ಸರಿ ಇದ್ದಿದ್ದರೆ ಮಗು ಜೋರಾಗಿ ಪ್ರತಿಭಟಿಸುತ್ತಿದ್ದಿತೇನೊ. ತಾಯಿ ಮಗುವನ್ನು ಸಾಂತ್ವನಗೊಳಿಸಲು ಪ್ರಯತ್ನಿಸಿದಳು. ತಾಯಿಯನ್ನು ಬದಿಗೆ ಸರಿಸಿ, ನಾನು ದೊಡ್ಡ ದೀಪದ ಬೆಳಕಿನಲ್ಲಿ ಆ ಹೆಣ್ಣು ಮಗುವಿನ ಗಂಟಲನ್ನು ನೋಡಲು ಯತ್ನಿಸಿದೆ. ಈ ಮೊದಲಿಗೆ ನನಗೆ ಡಿಫ್ತೀರಿಯ ಎಂದರೇನೆಂದು ನೋಡಿ ಅನುಭವವಿಲ್ಲ. ಮಗುವಿನ ಗಂಟಲಲ್ಲಿ ಏನೋ ನೊರೆ ಗರೆಯುತ್ತಿದ್ದಿತು. ಬೆಳ್ಳಗೆ, ಚೂರು ಚೂರಾಗಿದ್ದಿತು. ಮಗು ಜೋರಾಗಿ ಉಸಿರೆಳೆಯಿತು. ಗಂಟಲಿನಲ್ಲಿದ್ದ ಶ್ಲೇಷ್ಮವನ್ನು ನನ್ನ ಮೇಲೆ ಉಗಿದುಬಿಟ್ಟಳು. ಆಲೋಚನಾಮಗ್ನನಾಗಿದ್ದ ನಾನು ಭಯದಿಂದ ಕಣ್ಣುಮುಚ್ಚಲಿಲ್ಲ. ಗಂಟಲನ್ನು ಹಾಗೇ ದಿಟ್ಟಿಸುತ್ತಿದ್ದೆ.

ನನ್ನ ತಾಳ್ಮೆ ಕಂಡು ನನಗೇ ಅಚ್ಚರಿಯಾಯ್ತು. "ಸರಿ, ಬಹಳ ವಿಳಂಬವಾಯಿತು. ಅವಳು ಸಾವಿನಂಚಿನಲ್ಲಿದ್ದಾಳೆ. ಶಸ್ತ್ರಚಿಕಿತ್ಸೆ ಮಾತ್ರ ಅವಳನ್ನು ಉಳಿಸಬಲ್ಲುದೇನೊ" ಎಂದೆ ನಾನು.

"ನೀವು ಹೇಳುವುದಾದರೂ ಏನು?"

"ನಾವು ಅವಳ ಗಂಟಲನ್ನು ಇನ್ನೂ ಸ್ವಲ್ಪ ಕೆಳಗಿನವರೆಗೂ ಹರಿದು, ಬೆಳ್ಳಿ ನಳಿಕೆಯನ್ನು ತೂರಿಸಿದರೆ, ಮಗು ನಿರಾಳವಾಗಿ ಉಸಿರಾಡಬಹುದೇನೊ. ಪ್ರಾಯಶಃ ಪ್ರಾಣವೂ ಉಳಿದೀತು." ನಾನು ವಿವರಿಸಿದೆ.

ಹುಚ್ಚನನ್ನು ನೋಡುವಂತೆ ನನ್ನನ್ನು ನೋಡುತ್ತ ಆ ತಾಯಿ, ಮಗುವನ್ನು ಕಾಪಾಡಲು ತೋಳುಗಳನ್ನು ನನಗೆ ಅಡ್ಡವಾಗಿರಿಸಿದಳು. ಮುದುಕಿ ಜೋರಾಗಿ ಅಳುತ್ತಾ ಹೇಳಿದಳು: "ಏನು? ಅವನು ಮಗುವಿನ ಗಂಟಲು ಕೊಯ್ಯುತ್ತಾನೆಯೆ!? ಅವನನ್ನು ಆ ಕಾರ್ಯಕ್ಕೆ ಬಿಡಬೇಡ!" ನಾನು ಕೋಪ, ತಿರಸ್ಕಾರಗಳಿಂದ ಮುದುಕಿಗೆ, . "ಇಲ್ಲಿಂದ ಹೋಗು!" ಎಂದು ಹೇಳಿ ನನ್ನ ಸಹಾಯಕರಿಗೆ ಮಗುವಿಗೆ ಕ್ಯಾಂಫರ್ ಇಂಜೆಕ್ಷನ್ ಕೊಡಲು ತಿಳಿಸಿದೆ.

"ಪ್ರಾಯಶಃ ಅದರಿಂದ ಮಗುವಿಗೆ ಆರಾಮ ಎನಿಸಬಹುದೇನೊ?" ಸಹಾಯಕಿ ಹೇಳಿದಳು.

"ಇಲ್ಲ, ಅದರಿಂದೇನೂ ನೆರವಾಗದು."

ಅವಳೂ ಗದ್ಗದಿತಳಾದಳು. "ನಿಶ್ಶಬ್ದ" ಎಂದು ಹೇಳಿ, ಕೈಗಡಿಯಾರ ನೋಡಿಕೊಂಡು ಆ ತಾಯಿಗೆ ಹೇಳಿದೆ: "ಆಲೋಚಿಸಿ ನಿರ್ಧರಿಸಲು ಐದು ನಿಮಿಷ ಅವಕಾಶ ಕೊಡುವೆ.

ನಿರ್ಧರಿಸಿ. ನೀವು ಒಪ್ಪದಿದ್ದರೆ ನಾನೇನೂ ಮಾಡುವುದಿಲ್ಲ."

"ನಾನು ಒಪ್ಪಲಾರೆ" ಎಂದಳು ತಾಯಿ.

"ನಾನು ಒಪ್ಪುವುದಿಲ್ಲ" ಎಂದಳು ಮುದುಕಿ.

"ನಿಮ್ಮಿಷ್ಟ" ಎಂದು, ಅವರ ಹಣೆ ಬರಹವೇ ಅಷ್ಟು ಎಂದುಕೊಂಡೆ. ನನ್ನ ಹೊಣೆ ಹಗುರಾಯಿತು. ನನ್ನ ಸಲಹೆ ನಾನು ಕೊಟ್ಟೆ. ನರ್ಸ್‌ಗಳಿಗೂ ವಿಸ್ಮಯವಾಗುವಂತೆ ಅವರು ಶಸ್ತ್ರಚಿಕಿತ್ಸೆಗೆ ಒಪ್ಪಲಿಲ್ಲ. ನಾನು ಬಚಾವಾದೆ. ಹೀಗೆ ಆಲೋಚಿಸುತ್ತಿದ್ದಾಗ, ಗುರುತಿಸಲಾದ ನನ್ನದಲ್ಲದ ಧ್ವನಿ ಕೇಳಿ ಬಂದಿತು: "ನಿಮಗೇನು ಹುಚ್ಚೆ? ನೀವೇಕೆ ಒಪ್ಪಲ್ಲ? ಮಗುವನ್ನು ಸಾಯಿಸುತ್ತೀರಿ! ದಯವಿಟ್ಟು ಶಸ್ತ್ರಚಿಕಿತ್ಸೆಗೆ ಒಪ್ಪಿಕೊಳ್ಳಿ!"

"ಇಲ್ಲ" ಪುನಃ ತಾಯಿಯ ಹಟದ ನುಡಿ.

ನಾನೇನು ಮಾಡುತ್ತಿದ್ದೇನೆ? ನಾನು ಮಗುವನ್ನು ಕೊಲ್ಲುತ್ತೇನೆ, ಎಂದು ಮನಸ್ಸಿನಲ್ಲೇ ಆಲೋಚಿಸುತ್ತಾ ಜೋರಾಗಿ ಹೇಳಿದೆ: "ತ್ವರೆ ಮಾಡಿ ಒಪ್ಪಿ, ಮಗುವಿನ ಉಗುರುಗಳು ನೀಲಿ ಬಣ್ಣಕ್ಕೆ ತಿರುಗುತ್ತಿದೆ.!"

"ಇಲ್ಲ, ನಾವು ಒಪ್ಪಲ್ಲ."

"ಹಾಗಾದರೆ ಅವರನ್ನು ವಾರ್ಡ್‌ಗೆ ಕರೆದೊಯ್ಯಿರಿ. ಅಲ್ಲಿ ಕುಳಿತು ಕೊಳ್ಳಲಿ."

ಅರೆ ಬೆಳಕಿದ್ದ ಮೊಗಸಾಲೆಯಲ್ಲಿ ಅವರನ್ನು ಕರೆದೊಯ್ದರು. ಆ ಹೆಂಗಸರು ಅಳುತ್ತಿದ್ದುದನ್ನು, ಆ ಮಗು ಉಬ್ಬಸದ ಪರಿಣಾಮವಾಗಿ ಗೊರಗುಟ್ಟುತ್ತಿದ್ದುದನ್ನು ಕೇಳಿದೆ. ನನ್ನ ಸಹಾಯಕರು ಬಂದು ಹೇಳಿದರು: "ಅವರು ಒಪ್ಪಿದರು!"

"ಹಾಗಾದರೆ ಶಸ್ತ್ರಚಿಕಿತ್ಸೆಯ ಚಾಕು, ಕತ್ತರಿ, ಕೊಕ್ಕೆ ಮತ್ತು ಪ್ರೋಬ್‌ಗಳನ್ನು ಬಿಸಿನೀರಲ್ಲಿ ಶುದ್ಧಿಮಾಡಿ," ಎಂದು ಹೇಳಿದರೂ ಮನಸ್ಸಿನಲ್ಲಿ ನಿಜವಾಗಿಯೂ ಭಯಭೀತನಾದೆ.

ಆ ಹಿಮಮಾರುತ ಅಂಗಳದಲ್ಲಿ ದೆವ್ವದಂತೆ ನರ್ತಿಸುತ್ತಿದ್ದಿತು. ಆದರೂ ನಾನು ನನ್ನ ವಾಸಸ್ಥಳಕ್ಕೆ ಹೋದೆ. ಪ್ರತಿ ಸೆಕೆಂಡೂ ಅಮೂಲ್ಯ. ಪುಸ್ತಕ ಒಂದು ತೆಗೆದುಕೊಂಡು ಹಾಳೆಗಳನ್ನು ತಿರುವಿಹಾಕಿದೆ. ಶ್ವಾಸನಾಳಚ್ಛೇದನದ ಚಿತ್ರದ ಪುಟ ತೆಗೆದೆ. ತುಂಬ ಸರಳ ಹಾಗೂ ಸ್ಪಷ್ಟವಾಗಿದ್ದಿತು: ಗಂಟಲನ್ನು ಹಿಗ್ಗಲಿಸಿ, ಶ್ವಾಸನಾಳದಲ್ಲಿ ಚಾಕುವನ್ನು ತೂರಿಸಬೇಕು. ಚಿತ್ರಕ್ಕೆ ಸಂಬಂಧಿಸಿದ ಪಠ್ಯವನ್ನೂ ಓದಿದೆ. ಆದರೆ ಅರಗಿಸಿಕೊಳ್ಳಲಾಗಲಿಲ್ಲ. ಪುಸ್ತಕದ ಶಬ್ದಗಳು ನನ್ನ ಮುಂದೆ ನರ್ತಿಸುತ್ತಿರುವ ಅನುಭವವಾಯಿತು. ನಾನು ಪ್ರತ್ಯಕ್ಷವಾಗಿ ಶ್ವಾಸನಾಳಚ್ಛೇದನ ಶಸ್ತ್ರಚಿಕಿತ್ಸೆಯನ್ನು ನೋಡೇ ಇರಲಿಲ್ಲ. ಈಗ ಕಾಲ ಮೀರಿದ್ದಿತು. ಪುನಃ ಆ ಹಿಮಮಾರುತದ ನಡುವೆಯೇ ಆಸ್ಪತ್ರೆಗೆ ಹಿಂದಿರುಗಿದೆ.

ಶಸ್ತ್ರಚಿಕಿತ್ಸೆ ಕೋಣೆಯಲ್ಲಿ, ಹೆಂಗುಸೊಬ್ಬಳು ಸಮೀಪದಲ್ಲಿ ನಿಂತು ಕೇಳಿದಳು: "ಅಲ್ಲ ಆ ಹೆಣ್ಣು ಮಗುವಿನ ಗಂಟಲು ಕತ್ತರಿಸಲು ನೀನು ಹೇಗೆ ನಿರ್ಧರಿಸಿದೆ? ಆ ಮೂರ್ಖ ಹೆಂಗಸು ಒಪ್ಪಿರಬಹುದು. ಆದರೆ ನಾನು ಮಾತ್ರ ಆ ಕೆಲಸಮಾಡಲ್ಲ. ನಿಜ, ಮಗುವಿಗೆ ಡ್ರಾಪ್ಸ್ ಕೊಡು, ಆ ಮಗುವಿನ ಗಂಟಲು ಹರಿಯಲು ನಿನ್ನನ್ನು ಬಿಡುವುದಿಲ್ಲ."

"ಈ ಮುದುಕೀನ ಇಲ್ಲಿಂದ ಹೊರಗೆ ಕರೆದೊಯ್ಯಿರಿ!" ನಾನು ಕೋಪದಿಂದ ಅರಚಿದೆ.

ನರ್ಸ್ ಆ ಮುದುಕಿಯ ತೋಳು ಹಿಡಿದು ವಾರ್ಡ್‌ನ ಹೊರಗೆ ಕರೆದೊಯ್ದಳು. ಎಲ್ಲ ಸಿದ್ಧವಾಗಿದೆ ಎಂದು ಸಹಾಯಕಿ ಹೇಳಿದಳು. ನಾವು ಆ ಪುಟ್ಟ ಶಸ್ತ್ರಚಿಕಿತ್ಸಾ ಕೋಣೆಯನ್ನು ಹೊಕ್ಕೆವು. ಆ ಮಬ್ಬಾದ ಬೆಳಕಿನಲ್ಲಿ ಶಸ್ತ್ರಚಿಕಿತ್ಸೆಯ ಉಪಕರಣಗಳು ಹೊಳೆಯುತ್ತಿದ್ದವು ....ನಾನು ಕಡೆಯ ಬಾರಿಗೆ ತಾಯಿ ಬಳಿಗೆ ಹೋದೆ. ಅವಳ ತೋಳಲ್ಲಿದ್ದ ಮಗುವನ್ನು ಕರೆ

## ನಗೆಹನಿ

ಮಾಣಿ: ರೀ ಮಿಸ್ಟರ್, ನೀವು ಎರಡು ಚಮಚಗಳನ್ನು ಜೇಬಿಗೆ ಹಾಕಿಕೊಂಡದ್ದನ್ನು ನೋಡಿದೆ.

ಗಿರಾಕಿ: ಹೌದು ಡಾಕ್ಟರ್ ನನಗೆ ಸಲಹೆ ಮಾಡಿದ್ದಾರೆ.

ಮಾಣಿ: ಅಂದರೆ...?

ಗಿರಾಕಿ: ಈ ಚೀಟಿಯಲ್ಲಿ ಏನು ಬರೆದಿದ್ದಾರೆ ಸ್ವಲ್ಪ ನೋಡು ಊಟ ಆದಮೇಲೆ ಎರಡು ಚಮಚ ತೆಗೆದುಕೊಳ್ಳುವುದು?

ತರಲು. ಆದರೆ ನನಗೆ ಕೇಳಿಸಿದ್ದೇನು? ಆ ತಾಯಿ ಕರ್ಕಶವಾಗಿ ಹೇಳುತ್ತಿದ್ದಳು: "ನನ್ನ ಗಂಡ ಊರಿನಲ್ಲಿಲ್ಲ. ಅವನು ಹಿಂದಿರುಗಿ ಬಂದಾಗ, ಈ ವಿಷಯ ಕೇಳಿದರೆ ನನ್ನನ್ನು ಕೊಂದು ಹಾಕುತ್ತಾನಷ್ಟೆ."

"ಖಂಡಿತ ಅವನು ನಿನ್ನನ್ನು ಕೊಲ್ಲುತ್ತಾನೆ", ಆ ಮುದುಕಿ ಪುನಃ ಹೇಳಿದಳು, ನನ್ನನ್ನು ಭೀತಿಯಿಂದ ನೋಡುತ್ತ.

"ಅವರನ್ನು ಶಸ್ತ್ರಚಿಕಿತ್ಸೆ ಕೋಣೆಗೆ ಬಿಡಬೇಡಿ" ಎಂದು ಆಜ್ಞೆ ಮಾಡಿದೆ.

ಶಸ್ತ್ರಚಿಕಿತ್ಸೆ ಕೋಣೆಯಲ್ಲಿ, ನಾನು ಸಿಬ್ಬಂದಿ ವರ್ಗ ಮತ್ತು ಮಗು ಲಿಡಾ ಮಾತ್ರ ಇದ್ದೆವು. ಮಗು ಮೇಜಿನ ಮೇಲೆ ಮೌನವಾಗಿ ಅಳುತ್ತ ಕುಳಿತಳು. ಸಹಾಯಕರು ಮಲಗಿಸಿದರು. ಅವಳ ಗಂಟಲನ್ನು ಶುದ್ಧಿಮಾಡಿದರು. ಐಯೋಡಿನ್ ಸವರಿದರು. ನಾನು ಚಾಕು ತೆಗೆದುಕೊಂಡು, ಏನು ಮಾಡುತ್ತಿದ್ದೇನೆಂದು ಆಲೋಚಿಸಿದೆ.' ಶಸ್ತ್ರಚಿಕಿತ್ಸಾ ಕೋಣೆಯಲ್ಲಿ ಈ ಬಗೆಯ ಆಲೋಚನೆ ಸಾಮಾನ್ಯ. ನಾನು ಚಾಕು ತೆಗೆದುಕೊಂಡು ಅವಳ ಬಿಳಿಗಂಟಲಿನ ಉಬ್ಬಿದ್ದ ಭಾಗದಲ್ಲಿ ಗೆರೆ ಎಳೆದೆ. ಒಂದು ತೊಟ್ಟು ರಕ್ತವೂ ಹೊರಬರಲಿಲ್ಲ. ಇನ್ನೊಂದು ಸಲ ಚಾಕುವಿನಿಂದ ಪುನಃ ಎಳೆದೆ. ಚರ್ಮ ಹರಿದಿದ್ದರೂ, ರಕ್ತ ಬರಲಿಲ್ಲ. ನಿಧಾನವಾಗಿ ಪಠ್ಯ ಪುಸ್ತಕದಲ್ಲಿದ್ದ ಚಿತ್ರ ಮತ್ತು ಸೂಚನೆಗಳನ್ನು ನೆನಪಿಸಿಕೊಂಡು, ಕೋಮಲ ಅಂಗಾಂಶಗಳನ್ನು ಬೇರ್ಪಡಿಸಿದೆ. ದಿಢೀರನೆ ರಕ್ತ ಚಿಮ್ಮಿತು, ಕುತ್ತಿಗೆ ತನಕ ಹರಿಯಿತು. ಸಹಾಯಕಿ ಉಣ್ಣೆ ಹತ್ತಿಯಿಂದ ರಕ್ತ ಒರೆಸಲು ಪ್ರಯತ್ನಿಸಿದಳು, ಆದರೂ ರಕ್ತ ನಿಲ್ಲಲಿಲ್ಲ. ವಿಶ್ವವಿದ್ಯಾನಿಲಯದಲ್ಲಿ ನಾನು ಪ್ರತ್ಯಕ್ಷವಾಗಿ ಕಂಡ ಘಟನೆಗಳನ್ನು ಸ್ಮರಿಸಿಕೊಂಡು ಕಾರ್ಯನಿರತನಾದೆ. ಫೋರ್ಸೆಪ್ಸ್‌ನಿಂದ ಗಾಯದ ಅಂಚುಗಳನ್ನು ಅದುಮಿದೆನಾದರೂ ರಕ್ತದ ಹರಿತ ನಿಲ್ಲಲಿಲ್ಲ.

ಮೈಯಲ್ಲಿ ಮಂಜು ಹರಿದಂತಾಯಿತು. ಹಣೆಯ ಮೇಲೆ ಬೆವರ ಹನಿಗಳು, ವೈದ್ಯಕೀಯ ಶಾಲೆಯಲ್ಲಿ ಅಧ್ಯಯನ ಮಾಡಿದುದಕ್ಕಾಗಿ, ತರುವಾಯ ಇಂಥ ಪ್ರದೇಶಕ್ಕೆ ಉದ್ಯೋಗಕ್ಕೆ ಬಂದುದಕ್ಕಾಗಿ ನನ್ನನ್ನೇ ನಾನು ಶಪಿಸಿದೆ. ಹತಾಶನಾಗಿ, ಫೋರ್ಸೆಪ್ಸನ್ನು ಗಾಯಮಾಡಿದ ಸ್ಥಳದಲ್ಲಿ ತೂರಿಸಿ ಒತ್ತಿದೆ. ರಕ್ತ ಹರಿಯುವುದು ನಿಂತಿತು. ಗಾಯದ ಪ್ರದೇಶವನ್ನು ಶುದ್ಧಿಮಾಡಿದೆವು. ಶ್ವಾಸನಾಳ ಎಲ್ಲೂ ಕಾಣಲಿಲ್ಲ. ನಾನು ಮಾಡಿದ್ದ ಗಾಯ ಪುಸ್ತಕದಲ್ಲಿನ ಚಿತ್ರಗಳನ್ನು ಹೋಲುತ್ತಿರಲಿಲ್ಲ. ಚಾಕುವಿನಿಂದ ಆ ಗಾಯದ ಸುತ್ತ ಕೆದಕಿದೆ. ಎರಡು ಮೂರು ನಿಮಿಷ ಕಳೆದವು. ಯಾಂತ್ರಿಕವಾಗಿ, ಶ್ವಾಸನಾಳಕ್ಕಾಗಿ ಶೋಧಿಸಿದೆ –ಆದರೆ ಶ್ವಾಸನಾಳ ಸಿಗಲಿಲ್ಲ– ಹತಾಶನಾದೆ. ನಾನೇಕೆ ಈ ಚಿಕಿತ್ಸೆ ಮಾಡಿದೆ?. ಶಸ್ತ್ರಚಿಕಿತ್ಸೆ ಮಾಡಬೇಕೆಂದು ಸೂಚಿಸುವ ಅಗತ್ಯವೇ ಇರಲಿಲ್ಲ. ಲಿಡಾ ವಾರ್ಡ್‌ನಲ್ಲಿ ಶಾಂತಳಾಗಿ ಸಾಯುತ್ತಿದ್ದಳಲ್ಲ ಆದರೆ ಈಗ ಗಂಟಲು ಕತ್ತರಿಸಿಕೊಂಡು ಸಾಯುತ್ತಾಳಲ್ಲ. ಅವಳು ಡಿಫ್ತೀರಿಯಾದಿಂದ ಸಾಯುತ್ತಿದ್ದಳು ಎಂದು ಈಗ ನನಗೆ ರುಜುವಾತುಪಡಿಸಲು ಸಾಧ್ಯವೆ-ಹೀಗೆ ಯೋಚನಾ ಲಹರಿಗಳಲ್ಲಿ ಮುಳುಗಿದೆ.

ಮುಂದೇನು ಮಾಡಬೇಕೆಂದು ಗೊತ್ತಾಗಲಿಲ್ಲ. ಆ ತಾಯಿಯ ಕಣ್ಣುಗಳು ನನ್ನನ್ನೇ ದಿಟ್ಟಿಸುತ್ತಿರುವಂತೆ ಭಾಸವಾಯಿತು. ಪುನಃ ಚಾಕು ತೆಗೆದುಕೊಂಡೆ, ಲಿಡಾಳ ಗಂಟಲಲ್ಲಿ ತುರುಕಿದೆ. ಈ ಸಲದ ಕೊಯ್ತ ಜೋರಾಗಿಯೇ ಇದ್ದಿತು. ಅಂಗಾಂಶಗಳು ತಂತಾನೇ ಬೇರ್ಪಟ್ಟಿದ್ದವು. ದಿಢೀರನೆ ಶ್ವಾಸನಾಳ ಕಂಡಿತು.

"ಹುಕ್ಸ್ ಕೊಡಿ" ಎಂದು ಕಿರುಚಿದೆ. ಸಹಾಯಕಿ ನೀಡಿದಳು. ಒಂದನ್ನು ಒಂದು ಬದಿಯಿಂದಲೂ, ಮತ್ತೊಂದನ್ನು ಎದುರು ಬದಿಯಿಂದಲೂ ತೂರಿಸಿ ಒಂದನ್ನು ಸಹಾಯಕನ ಕೈಗೆ ಕೊಟ್ಟೆ. ನನ್ನ ಕಣ್ಣುಗಳು ಈಗ ಶ್ವಾಸನಾಳದ ಸುತ್ತ ಇದ್ದ ಬೂದುವರ್ಣದ ಉಂಗುರಗಳನ್ನೇ ಗಮನಿಸುತ್ತಿದ್ದವು. ನಾನು ಚಾಕುವನ್ನು ಒಳಹೊಗಿಸಿ, ಗಾಯದಿಂದ ಮೇಲೆ ಬರುತ್ತಿದ್ದ ಶ್ವಾಸನಾಳವನ್ನು ಒಳಗಡಗಿಸಿದೆ. ಸಹಾಯಕನ ಮನಸ್ಸು ವಿಚಲಿತಗೊಂಡಿರಬೇಕು ಎಂದು ನನಗನಿಸಿತು. ಹುಕ್ ಹಿಡಿದಿದ್ದ ಆತ ಶ್ವಾಸನಾಳವನ್ನು ಹೊರಗೆಳೆಯುತ್ತಿದ್ದ. ನನ್ನ ಹಿಂದಿದ್ದ ಇಬ್ಬರು ನರ್ಸ್‌ಗಳೂ ನಿಬ್ಬೆರಗಾಗಿ ಜೋರುಸಿರುಬಿಡುತ್ತಿದ್ದರು. ನಾನು ನೋಡಿದೆ. ಏನಾಯಿತೆಂಬುದು ತಿಳಿಯಿತು. ಸಹಾಯಕನಿಗೆ

ತಲೆ ಸುತ್ತಿದ್ದಿತು. ಎಲ್ಲ ವಿಧಿ ಎನ್ನಲೆ. ಪ್ರತಿಯೊಂದೂ ನನಗೆ ವಿರುದ್ಧವಾಗೇ ಸಂಭವಿಸುತ್ತಿದ್ದಿತು. ನಾವಿಷ್ಟು ಹೊತ್ತಿಗಾಗಲೇ ಪ್ರಾಯಶಃ ಲಿಡಾಳನ್ನು ಕೊಂದು ಹಾಕಿರಬೇಕಿದ್ದಿತು. ಮನೆಗೆ ಹೋಗಿ ಆತ್ಮಹತ್ಯೆ ಮಾಡಿಕೊಳ್ಳುವುದು ಮೇಲು ಎನಿಸಿತು. ಆ ಹೊತ್ತಿಗೆ ಹಿರಿಯ ಅನುಭವಿ ನರ್ಸ್ ಆ ಸಹಾಯಕನಿಂದ ಹುಕ್ ಅನ್ನು ಕಿತ್ತುಕೊಂಡಳು. "ಡಾಕ್ಟರ್ ನೀವು ಮುಂದುವರಿಸಿ" ಎಂದು ಹಲ್ಲು ಕಚ್ಚುತ್ತ ಹೇಳಿದಳು.

ಸಹಾಯಕ ಮೂರ್ಛೆಹೋದ. ನಾವು ಅವನತ್ತ ಗಮನಿಸಲಿಲ್ಲ. ನಾನು ಶ್ವಾಸನಾಳಕ್ಕೆ ಚಾಕುಹಾಕಿ, ಬೆಳ್ಳಿಯ ಕೃತಕನಾಳವನ್ನು ತೂರಿಸಿದೆ. ಕೃತಕನಾಳ ಸರಳವಾಗಿ ತೂರಿತು, ಆದರೂ ಲಿಡಾ ಚಲಿಸಲಿಲ್ಲ. ನಿರೀಕ್ಷಿಸಿದಂತೆ ಗಾಳಿ ಶ್ವಾಸನಾಳದ ಮೂಲಕ ಹಾಯಲಿಲ್ಲ. ನಿಟ್ಟುಸಿರು ಬಿಡುತ್ತ ಅಲ್ಲೇ ನಿಂತೆ. ಮಹಾಮೌನ ವ್ಯಾಪಿಸಿತು. ಲಿಡಾಳ ಮೈ ನೀಲ ವರ್ಣಕ್ಕೆ ತಿರುಗುತ್ತಿತ್ತು. ಅಷ್ಟರಲ್ಲಿ... ಲಿಡಾ ಕಂಪಿಸುತ್ತಿದ್ದಳು. ಗಂಟಲಲ್ಲಿರಿಸಿದ ಕೃತಕ ನಾಳದ ಮೂಲಕ ಏನನ್ನೋ ಉಗಿದಳು. ಗಾಳಿ ಅವಳ ಆ ನಾಳದಲ್ಲಿ ಪ್ರವೇಶಿಸಿತು ನಿರಾಳವಾಗಿ ಉಸಿರಾಡಿದಳು ಮತ್ತು ಅಳಲಾರಂಭಿಸಿದಳು. ಆ ಕ್ಷಣದಲ್ಲೇ ಸಹಾಯಕನೂ ಎದ್ದ.

ಬೆವರು, ನಿದ್ದೆ ಕಣ್ಣುಗಳನ್ನು ಮುಚ್ಚಿದ್ದವಾದರೂ ನರ್ಸ್‌ಗಳ ಮುಖದಲ್ಲಿದ್ದ ಸಂತಸವನ್ನೂ ಗಮನಿಸಿದೆ. "ಡಾಕ್ಟರ್ ಎಷ್ಟು ಕೌಶಲದಿಂದ ಶಸ್ತ್ರಚಿಕಿತ್ಸೆ ಮಾಡಿದಿರಿ" ನರ್ಸ್ ಹೇಳಿದಳು. ಆಕೆ ನನ್ನನ್ನು ಗೇಲಿಮಾಡುತ್ತಿದ್ದಾಳೆನಿಸಿತು.

ಒಂದೆರಡು ತಿಂಗಳು ಕಳೆದವು. ಈ ಅವಧಿಯಲ್ಲಿ ಬೇಕಾದಷ್ಟು ಅನುಭವಗಳಾದವು. ಪುನಃ ನಾನು ಲಿಡಾಳನ್ನು ಕಾಣಲಿಲ್ಲ. ಮರೆತೆ. ರೋಗಿಗಳ ಸಂಖ್ಯೆ ಹೆಚ್ಚಿತ್ತು. ದಿನಕ್ಕೆ 110 ಜನರನ್ನು ನೋಡುತ್ತಿದ್ದೆ. ಬೆಳಿಗ್ಗೆ 9 ರಿಂದ ರಾತ್ರಿ 8 ರವರೆಗೆ ಕೆಲಸಮಾಡುತ್ತಿದ್ದೆವು. "ಇಷ್ಟೊಂದು ರೋಗಿಗಳು ಬರಲು ನಿಮ್ಮ ಶ್ವಾಸನಾಳ ಶಸ್ತ್ರಚಿಕಿತ್ಸೆಯೇ ಕಾರಣ" ಎಂದು ನನ್ನ ಸಹಾಯಕಿ ಹಿರಿಯ ನರ್ಸ್, ನಾನು ಕೋಟು ಕಳಚುತ್ತಿರುವಾಗ ಹೇಳಿದಳು, "ಹಳ್ಳಿಗಳಲ್ಲಿ ಜನ ಏನು ಹೇಳುತ್ತಿದ್ದಾರೆ ಗೊತ್ತೆ? ಲಿಡಾ ಸಖತ್ ಕಾಯಿಲೆಯಿಂದ ನರಳುತ್ತಿದ್ದಾಗ ನೀವು ಅವಳಿಗೆ ಉಕ್ಕಿನ ಕಂಠ ನೀಡಿದಿರಂತೆ. ಬೇರೆ ಹಳ್ಳಿಗಳಿಂದ ಈ ಉಕ್ಕಿನ ಕಂಠದ ಮಗೂನ ನೋಡಲು ಜನ ಬರುತ್ತಿದ್ದಾರೆ. ಡಾಕ್ಟರ್, ನಿಮ್ಮ ಕೀರ್ತಿ ಹೇಗೆ ಹರಡುತ್ತಿದೆ ನೋಡಿದಿರಾ! ಅಭಿನಂದನೆಗಳು." ●

(ಕೃಪೆ: ಸೋವಿಯತ್ ದೇಶ)

## ಸಂಪಾದಕರ ಸೂಚನೆ

ಪ್ರಖ್ಯಾತ ಹಾಸ್ಯ ಲೇಖಕ ಮಾರ್ಕ್ ಟ್ವೈನ್ ಒಂದು ಕಾಲಕ್ಕೆ, ಅಮೆರಿಕದಲ್ಲಿ ಒಂದು ಮಾಸಿಕದ ಸಂಪಾದಕನಾಗಿದ್ದ. ಆ ಸಮಯದಲ್ಲಿ ಅವನ ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ. ಬಹಳ ಜನಕ್ಕೆ ಹಣ ಕೊಡಬೇಕಾಗಿತ್ತು. ವ್ಯಾಪಾರಿಗಳ ಕಾಗದಗಳು ಬರುತ್ತಲೇ ಇದ್ದವು– ಹಣದ ವ್ಯವಸ್ಥೆ ಮಾಡಿರೆಂದು. ಅಂಥ ಕಾಗದಗಳನ್ನೆಲ್ಲ ಮಾರ್ಕ್ ಟ್ವೈನ್ ಓದಿ, ಹರಿದು, ಕೆಳಗಿನ ಬುಟ್ಟಿಗೆ ಎಸೆದು ಬಿಡುತ್ತಿದ್ದ.

ಒಂದು ಸಲ ಒಬ್ಬ ವ್ಯಾಪಾರಿಯು ಎರಡೂ ಕಡೆ ಬರೆದ ತಗಾದೆಯ ಕಾಗದವೊಂದು ಬಂತು. ನೌಕರ ಅದನ್ನು ಟ್ವೈನ್‌ನ ಟೇಬಲ್ ಮೇಲೆ ಇಟ್ಟ. ಪ್ರತಿಸಲದಂತೆ ಟ್ವೈನ್ ಅದನ್ನೋದಿ, ಹರಿದು ಕೆಳಗಿನ ಬುಟ್ಟಿಗೆ ಚೆಲ್ಲಿದ. ನೌಕರ ಕೂಡಲೇ "ಒಂದಿನ ಮಗ್ಗಲು ಬರೆದಿದ್ದರು. ಅದನ್ನು ನೀವು ನೋಡಲೇ ಇಲ್ಲ!" ಎಂದು ಹೇಳಿದ.

ಮಾರ್ಕ್ ಟ್ವೈನ್ ನಗುತ್ತ ಹೇಳಿದ. "ಒಂದೇ ಮಗ್ಗಲು ಬರೆದ ಹಸ್ತಪ್ರತಿಗಳನ್ನಷ್ಟೇ ನಾವು ಸ್ವೀಕರಿಸುವೆವೆಂಬುದು ಗೊತ್ತಿಲ್ಲೇನು ನಿನಗೆ ಇನ್ನೂ?"

● ರಾಮದಾಸ ●

ಅಪರಿಚಿತ ಭಾರತ

# ಗಾರ್ದಭ ಮೇಳ

• ಮುರುಳೀಧರ ಖಜಾನೆ •

ರಾಜಸ್ಥಾನದ ಜಯಪುರ ಜಿಲ್ಲೆಯಲ್ಲಿನ ಲೂನಿಯವಾಸ್ ಪಂಚಾಯಿತಿಯ ಭಾವ ನಗರ್ ಬಂಧ್ಯ ಒಂದು ಚಿಕ್ಕ ಹಳ್ಳಿ. ಈ ಹಳ್ಳಿ ಈ ವರ್ಷ ಇದ್ದಕ್ಕಿದ್ದಂತೆ ರಾಷ್ಟ್ರಮಟ್ಟದಲ್ಲಿ ಪ್ರಾಮುಖ್ಯ ಪಡೆಯಿತು. ಕಾರಣ ಲೂನಿಯ ವಾಸ್ ಪಂಚಾಯಿತಿಯು ಏರ್ಪಡಿಸಿದ ರಾಷ್ಟ್ರ ಮಟ್ಟದ ಕತ್ತೆಗಳ ಮೇಳವನ್ನು ಉದ್ಘಾಟಿಸಲು ಯಾವ ಮಂತ್ರಿಮಹೋದಯರೂ ಒಪ್ಪಲಿಲ್ಲ. ಹಾಗೆಂದು ಅಂತಹ ಪ್ರಮುಖ ಮಹೋದಯರ ಅಭಾವವೇ? ಎಂದು ಪ್ರಶ್ನಿಸಬೇಡಿ! ಈ ಮೇಳದ ಕೇಂದ್ರ ವ್ಯಕ್ತಿ ಕತ್ತೆ ಎಂದು ಯಾರೂ ಈ ಮೇಳದ ಉದ್ಘಾಟನೆಗೆ ಒಪ್ಪಲಿಲ್ಲ.

ಇದೇನು ಕತ್ತೆಗಳಿಗೂ ಮೇಳವೇ? ಎಂದು ಆಶ್ಚರ್ಯಪಡಬೇಡಿ. ಕತ್ತೆಗಳು ಮಾನವನಿಗೆ ಎಷ್ಟು ರೀತಿಯಲ್ಲಿ ಸೇವೆ ಸಲ್ಲಿಸಿದರೂ ಅವುಗಳಿಗೆ ದೊರೆಯುತ್ತಿರುವುದು ಈ ರೀತಿಯ ತಿರಸ್ಕಾರ ಮಾತ್ರ.

With monstrous head and
Sickening cry
And ears like errant wings
The devils walking parody
on all four footed things-ಎಂಬ ಚೆಸರ್‌ಸನ್‌ನ ಪದ್ಯದ ಸಾಲುಗಳು ಕತ್ತೆಗಳಿಗೆ ನಮ್ಮ ಸಮಾಜದಲ್ಲಿ ನಾವು ನೀಡಿರುವ ಸ್ಥಾನದ ಬಗ್ಗೆ ಸ್ಪಷ್ಟವಾದ ಅರಿವನ್ನು ಮೂಡಿಸುತ್ತವೆ. ದಡ್ಡರನ್ನು ಒಡ್ಡರನ್ನು ಕತ್ತೆ ಎಂದು ಕರೆಯುವುದರ ಮೂಲಕ ಕತ್ತೆಯನ್ನು ನಿತ್ಯ ಅವಹೇಳನ ಮಾಡುತ್ತಿದ್ದೇವೆ. ಈ ಕತ್ತೆಯನ್ನು ಸಾಮಾನ್ಯವೆಂದು ಭಾವಿಸಬೇಡಿ. ಏಸು ಕ್ರಿಸ್ತನನ್ನು ತನ್ನ ಬೆನ್ನ ಮೇಲೆ ಹೊತ್ತು ಜೆರುಸಲಂಗೆ ತಂದದ್ದು ಈ ಕತ್ತೆಯೇ!-ಶೀತಾಳ ಸಿಡುಬಿನ ಶಕ್ತಿ ದೇವತೆಯ ವಾಹನ ಈ ಕತ್ತೆ ಎಂದು ನಮ್ಮ ಪೂರ್ವಜರ ನಂಬಿಕೆಯಾಗಿತ್ತು.

ಏನೇ ಇರಲಿ! ಕತ್ತೆಗಳ ಭವಿಷ್ಯ ಈಗ ಸ್ವಲ್ಪ ಆಶಾದಾಯಕವಾಗಿದೆ. ಅದಕ್ಕಾಗಿ ಕತ್ತೆಗಳು ಅವುಗಳಿಗಾಗಿ ಲೂನಿಯಾವಾಸ್ ಪಂಚಾಯಿತಿಯ ಪರಿಸರದಲ್ಲಿ ಕತ್ತೆಗಳ ಮೇಳ ನಡೆಸುವ ಲೂನಿಯಾವಾಸ್ ಪಂಚಾಯಿತಿಯ ಸರಪಂಚ ಕನ್ನಯ್ಯಲಾಲ್ ಮಿನ್ನಾಗೆ ಕೃತಜ್ಞತೆ ಸಲ್ಲಿಸಬೇಕು.

ಪ್ರತಿ ದಸರೆಯಲ್ಲಿ ಲೂನಿಯಾವಾಸ್ ಅತಿ ವಿಜೃಂಭಣೆಯಿಂದ ಕತ್ತೆಗಳ ಜಾತ್ರೆ ನಡೆಸುತ್ತದೆ. (ಇಲ್ಲಿನ ಸಂಪ್ರದಾಯದ ಪ್ರಕಾರ ದಸರೆಗೆ ಕತ್ತೆಗೂ ತೀರಾ ಹತ್ತಿರದ ಸಂಬಂಧ. ಅವರ ರಾಮಾಯಣದಂತೆ ರಾವಣಾಸುರನ ಹತ್ತನೆ ತಲೆಗೆ ಕತ್ತೆಯ ಮುಖವಂತೆ.) ಇಲ್ಲಿ ನಡೆಯುವ ಮೇಳ ಏಷಿಯಾಖಂಡದ ಅತಿ ದೊಡ್ಡ ಕತ್ತೆಗಳ ಮೇಳ. ರಾಷ್ಟ್ರಾದ್ಯಂತ ಕತ್ತೆಗಳು ಇಲ್ಲಿಗೆ ಆಗಮಿಸಿ ತಮ್ಮ ಯಜಮಾನನನ್ನು ಬದಲು ಮಾಡಿಕೊಳ್ಳುತ್ತವೆ. ಇಲ್ಲಿ ಕತ್ತೆಗಳನ್ನು ಇತರ ವಸ್ತುಗಳಂತೆ ಕೊಳ್ಳುವುದು ಮಾರುವುದು ನಡೆಯುತ್ತದೆ. ಕೊಳ್ಳುವವರು ಮಾರುವವರು ಸಾಕಷ್ಟು ಚೌಕಾಶಿ ಮಾಡಿ ಬೆಲೆ ನಿರ್ಧರಿಸಿದ ನಂತರ ಮಾರುವವರು ಕೊಳ್ಳುವವರ ಕೈಗೆ ಕತ್ತೆಯ ದಾರವನ್ನೂ ಕೊಟ್ಟು "ಖಾಲಾ-ಖಾನಿ ಮಾತಾಕಿ ಜೈ" ಎನ್ನುತ್ತಾರೆ. ಇದು ಲೂನಿಯಾವಾಸ್‌ನ ಆರಾಧ್ಯ ದೇವತೆಯ ಹೆಸರು. ಆಕೆಯ ಹೆಸರಿನಲ್ಲಿ ಜಯಕಾರ ಹಾಕಿದ ನಂತರ ವ್ಯವಹಾರ ಪೂರೈಸುತ್ತದೆ.

ಈ ಜಾತೆಯಿಂದ ಲೂನಿಯಾವಾಸ್ ಪಂಚಾಯಿತಿಗೂ ಒಳ್ಳೆಯ ಆದಾಯವಿದೆ. ಈ ಮೇಳದಲ್ಲಿ ಪಾಲ್ಗೊಳ್ಳಲು ಪ್ರತಿ ಕತ್ತೆಯೂ ಪಂಚಾಯಿತಿಗೆ 2 ರೂ. ತೆರಿಗೆ ಕೊಡಬೇಕು.

ವ್ಯವಹಾರ ಮುಗಿದ ನಂತರ ಕೊಂಡವ ಕತ್ತೆಯೊಂದಕ್ಕೆ 5 ರೂ. ದಲಾಲಿ ಕೊಡಬೇಕು.

ಹಾಗೆಂದು ಉತ್ತಮ ದರ್ಜೆಯ ಕತ್ತೆಗಳನ್ನು ಆರಿಸುವುದು ಸುಲಭವೆಂದು ಭಾವಿಸಬೇಡಿ! ಅವುಗಳನ್ನು ಆಯ್ಕೆಮಾಡಲು ಇಲ್ಲಿ ವಿಶೇಷ ಪರಿಣತಿ ಬೇಕು. ಕೆಲವು ಜಾತಿಯ ಕತ್ತೆಗಳ ಆರೋಗ್ಯವನ್ನು ಕುದುರೆಗಳ ಆರೋಗ್ಯ ಪರೀಕ್ಷಿಸುವಂತೆ ದಂತಪಂಕ್ತಿಗಳ ಪರೀಕ್ಷೆಯ ಮೂಲಕ ಖಚಿತಪಡಿಸಿಕೊಳ್ಳುತ್ತಾರೆ. ಉತ್ತಮ ಜಾತಿಯ ಕತ್ತೆಗಳು 5000 ರೂಪಾಯಿಗೆ ಮಾರಾಟವಾಗಿರುವ ಉದಾಹರಣೆ ಇರುವಂತೆ ಕೆಲವು ಜಾತಿಯ ಕತ್ತೆಗಳು ಕೇವಲ 20 ರೂಪಾಯಿಗೆ ಮಾರಾಟವಾದದ್ದೂ ಇದೆ. ಉತ್ತಮ ಜಾತಿಯ ಶಕ್ತಿಶಾಲಿ ಕತ್ತೆಗಳು ರಾಜಸ್ಥಾನದ ನಾಗೋರ್, ಕಾಶ್ಮೀರ ಹಾಗೂ ಲಡಾಕ್‌ಗಳಿಂದ ಬರುತ್ತವೆ.

ಈ ಜಾತ್ರೆಗಳು ನಡೆಯುವಾಗ ಅನೇಕ ರೀತಿಯ ಓಟದ ಸ್ಪರ್ಧೆಗಳನ್ನು ಕತ್ತೆಗಳಿಗೆ ಏರ್ಪಡಿಸಲಾಗುತ್ತಿದೆ. "ಕ್ರೀಡೆ ಮಾನವನ ನಡುವಿನ ಸಂಬಂಧವನ್ನು ಮಧುರವಾದ ಸ್ನೇಹ ಬಾಂಧವ್ಯವನ್ನು ಹೇಗೆ ವೃದ್ಧಿಪಡಿಸುವುದೋ ಅದೇ ಉದ್ದೇಶದಿಂದ ಕತ್ತೆಗಳಿಗೂ ಈ ಸ್ಪರ್ಧೆ ನಡೆಸುತ್ತೇವೆ" ಎನ್ನುತ್ತಾರೆ ಮಿನ್ನ. ಗೆದ್ದ ಕತ್ತೆಗಳನ್ನು ಸೂಕ್ತವಾಗಿ ಬಹುಮಾನಿಸಲಾಗುತ್ತದೆ.

ಕತ್ತೆಗಳನ್ನು ಗುರುತಿಸುವ ದೃಷ್ಟಿಯಿಂದ ಅವುಗಳಿಗೆ ಖ್ಯಾತ ಚಲನಚಿತ್ರ ನಟ ನಟಿಯರ ಹೆಸರನ್ನಿಡುವುದು ಇಲ್ಲಿಯ ಪರಿಪಾಠ. ಹಾಗಾಗಿ "ಹೇಮಾಮಾಲಿನಿ" ರಾಮೂಧೋಬಿಗೆ, "ರೇಖಾ" ದೊಂಢೂನಿಗೆ ಮಾರಾಟವಾದಾಗ ನೀವೇನೂ ಆಶ್ಚರ್ಯಪಡಬೇಕಿಲ್ಲ.

ವರ್ಷದಿಂದ ವರ್ಷಕ್ಕೆ ಈ ಕತ್ತೆಗಳ ಮೇಳ ಗಳಿಸುತ್ತಿರುವ ಪ್ರಚಾರ ಹಾಗೂ ಖ್ಯಾತಿಯನ್ನು ಗಮನಿಸಿದರೆ ಮುಂದೆ ಕತ್ತೆಗಳ ಮೇಳವನ್ನು ಉದ್ಘಾಟಿಸಲು ಮಂತ್ರಿಮಹೋದಯರು ನಾ ಮುಂದು, ತಾ ಮುಂದು ಎಂದು ಪೈಪೋಟಿ ನಡೆಸಿದರೂ ಆಶ್ಚರ್ಯವಿಲ್ಲ. ●

(ಆಧಾರ: ದಿ ಹೆರಿಟೇಜ್)

## ಕೃತಕ ಅಕ್ಕಿ

*ಆಗ ನಾನು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದೆ. ಅಲ್ಲಿಯ ರಸಾಯನ ಶಾಸ್ತ್ರದ ಉಪನ್ಯಾಸ ಮಂದಿರದಲ್ಲಿ ಒಂದು ಉಪನ್ಯಾಸವನ್ನು ಏರ್ಪಡಿಸಿದ್ದರು. ವಿಷಯ "ಕೃತಕ ಅಕ್ಕಿ ತಯಾರಿಕೆ" ಅಧ್ಯಕ್ಷರು: ಸರ್. ಸಿ.ವಿ. ರಾಮನ್. ಉಪನ್ಯಾಸಕರು: ಮೈಸೂರಿನ ಕೇಂದ್ರ ಆಹಾರ ಸಂಶೋಧನಾ ಸಂಸ್ಥೆಯ ಒಬ್ಬ ಪ್ರೊಫೆಸರ್. ಆಗ ಆಹಾರದ ತೀವ್ರ ಅಭಾವದಿಂದಾಗಿ ಕೃತಕ ಅಕ್ಕಿಯನ್ನು ತಯಾರಿಸಲು ಸಂಶೋಧನೆ ನಡೆಯುತ್ತಿತ್ತು. ಉಪನ್ಯಾಸ ಮಂದಿರ ಕಿಕ್ಕಿರಿದು ತುಂಬಿತ್ತು.*

*ಪ್ರೊಫೆಸರ್‌ರ ಭಾಷಣ ಚೆನ್ನಾಗಿತ್ತು. ಅವರು ದೇಶದ ಆಹಾರ ಅಭಾವ ಪರಿಸ್ಥಿತಿ ಮತ್ತು ಅದರಿಂದಾಗಿ ಕೃತಕ ಅಕ್ಕಿ ತಯಾರಿಕೆಗೆ ಪ್ರಚೋದನೆ, ಸುಮಾರು ಎರಡು ವರ್ಷಗಳು ಪಟ್ಟ ಶ್ರಮ, ಮಾಡಿದ ಸಂಶೋಧನೆಗಳು, ಇನ್ನೂ ಮಾಡಬೇಕಾಗಿರುವ ಕೆಲಸಗಳು, ಇವೆಲ್ಲದರ ಬಗ್ಗೆ ಸುಮಾರು ತೊಂಬತ್ತು ನಿಮಿಷಗಳ ಕಾಲ ಮಾತನಾಡಿದರು. ಸಭೆಯಲ್ಲಿ ದೀರ್ಘ ಕರತಾಡನವಾಯಿತು. ಅನಂತರ ಅಧ್ಯಕ್ಷೀಯ ಭಾಷಣ ಮಾಡಲು ಸರ್. ಸಿ.ವಿ. ರಾಮನ್‌ರು ಎದ್ದು ನಿಂತರು. ಸಭೆ ನಿಶ್ಶಬ್ದ. ಎಲ್ಲರೂ ಏಕಚಿತ್ತರಾಗಿ ಅವರ ಭಾಷಣವನ್ನು ಕೇಳಲು ಉತ್ಸುಕರಾಗಿದ್ದರು.*

*ಅವರು ಭಾಷಣವನ್ನು ಆರಂಭಿಸಿ ಹೇಳಿದರು.*

*"ನೀವೆಲ್ಲಾ ಇಷ್ಟು ಹೊತ್ತು ಪ್ರೊಫೆಸರ್....ರವರ ಭಾಷಣವನ್ನು ಕೇಳಿದಿರಿ. ಸುಮಾರು ಎರಡು ವರ್ಷಗಳ ಕಾಲ ಅವರು ನಿರಂತರವಾಗಿ ಪಟ್ಟ ಶ್ರಮ, ಕೈಕೊಂಡ ವಿಧಾನಗಳು, ಮಾಡಿದ ಸಂಶೋಧನೆಗಳ ಬಗ್ಗೆ ಸುದೀರ್ಘವಾಗಿ ಮಾತನಾಡಿದ್ದಾರೆ. ಇಷ್ಟು ದೀರ್ಘಕಾಲ ಮಾಡಿದ ಸಂಶೋಧನೆಗಳಿಂದ ನಾವು ಏನನ್ನು ಕಂಡು ಹಿಡಿದಿದ್ದೇವೆ ನಿಮಗೆ ಗೊತ್ತೆ? ಕೃತಕ ಅಕ್ಕಿ ತಯಾರು ಮಾಡಲು ನಮಗೆ ನಿಜವಾದ ಅಕ್ಕಿ ಬೇಕೇ ಬೇಕು." ಸಭೆಯಲ್ಲಿ ನಗುವಿನ ಬುಗ್ಗೆ ಚಿಮ್ಮಿತು.* ●

● ಬಿ.ಸಿ. ಮಂಜುನಾಥ ●

# ಸುಗಂಧ ದ್ರವ್ಯಗಳ ಇತಿಹಾಸ

● ಎಚ್. ಪ್ರೇಮಾನಂದ ಕಾಮತ್ ●

ಮುಖಕ್ಕೆ ಪೌಡರ್, ತುಟಿಗೆ ಲಿಪ್‌ಸ್ಟಿಕ್ ಮುಂತಾದ ಕೃತಕ ಸೌಂದರ್ಯ ಸಾಧನಗಳೊಂದಿಗೆ ಇತ್ತೀಚಿನ ದಿನಗಳಲ್ಲಿ ಭಾರೀ ಜನಪ್ರಿಯತೆ ಗಳಿಸುತ್ತಿರುವ ಫ್ಯಾಷನ್ ಜಗತ್ತಿನ ಇನ್ನೊಂದು ಪ್ರಮುಖ ವಸ್ತುವೆಂದರೆ ಘಮಘಮಿಸುವ 'ಸುಗಂಧ ದ್ರವ್ಯ. ಪರ್ಫ್ಯೂಮ್, ಅತ್ತರ್, ಸೆಂಟ್ ಮುಂತಾದ ಹೆಸರಿನಿಂದಲೂ ಇದನ್ನು ಕರೆಯುತ್ತಾರೆ. ಪರ್ಫ್ಯೂಮ್ ಲ್ಯಾಟಿನ್ ಭಾಷೆಯ ಎರಡು ಶಬ್ದಗಳಾದ 'ಪರ್' ಮತ್ತು 'ಫ್ಯೂಮ'ಗಳಿಂದ ಉತ್ಪತ್ತಿಯಾದ ಒಂದು ಹೆಸರು. ಇದರರ್ಥ ಇನ್‌ಸೆನ್ಸ್ ಎಂದು. ಅಂದರೆ ವಸ್ತುವನ್ನು ಸುಟ್ಟಾಗ ಪರಿಮಳ ಹೊರ ಹೊಮ್ಮುವುದು ಎಂದಾಗುತ್ತದೆ. ಈ 'ಪರ್ಫ್ಯೂಮ್' ಎಂಬುದಕ್ಕೆ ಸ್ಪಷ್ಟವಾದ ವ್ಯಾಖ್ಯೆ ಏನೆಂಬುದು ಇನ್ನೂ ಸರಿಯಾಗಿ ತಿಳಿದಿಲ್ಲ. ಆದರೆ ತಜ್ಞರು ಇದುವರೆಗೆ ಬಳಸಿಕೊಂಡ ವ್ಯಾಖ್ಯೆ ಎಂದರೆ ತನ್ನದೇ ಆದ ವೈಶಿಷ್ಟ್ಯದ ಪರಿಮಳವುಳ್ಳ ದ್ರವ್ಯಗಳ ಮಿಶ್ರಣ ಒಂದಾಗಿ, ಮಧುರವಾದ ಪರಿಮಳ ಬೀರುವುದು ಎಂಬುದು.

ಒಂದು ಬೊಟ್ಟು ಸೆಂಟ್ ಅನ್ನು ಮೈಗೆ ಚಿಮುಕಿಸಿಕೊಂಡರೆ ಸಾಕು. ಹಲವು ಗಂಟೆಗಳವರೆಗೆ ಅದು ತನ್ನ ಸುವಾಸನೆಯನ್ನು ನಮ್ಮ ಮೈಯಿಂದ ಹೊರಹೊಮ್ಮಿಸುತ್ತಾ ನಮ್ಮನ್ನು ಉಲ್ಲಸಿತರನ್ನಾಗಿರಿಸುತ್ತದೆ ಎಂಬ ನಂಬಿಕೆಯನ್ನೇ ಆಧಾರವಾಗಿಟ್ಟುಕೊಂಡಿರುವ ಸಿನಿಮಾ ತಾರೆಯರಿಗೆ, ಅವರನ್ನನುಸರಿಸುವ ಕೆಲವು ಮಹಿಳೆಯರಿಗೆ ಈ ಸುಗಂಧ ದ್ರವ್ಯಗಳೆಂದರೆ ಅಚ್ಚುಮೆಚ್ಚು. ಲಿಪ್‌ಸ್ಟಿಕ್‌ನ್ನು ಹೊರತುಪಡಿಸಿದರೆ ಸ್ನೋ ಮತ್ತು ಪೌಡರನ್ನು ಉಪಯೋಗಿಸುವ ಪುರುಷರು ಸಹ ಈ ಪರ್ಫ್ಯೂಮ್‌ಗಳಿಗೆ ಮರುಳಾಗಿದ್ದಾರೆಂದ ಮೇಲೆ ಇದರ ಆಕರ್ಷಣೆಯ ಹಿನ್ನೆಲೆಯಲ್ಲಿ ಬಹುದೊಡ್ಡ ಕತೆಯೇ ಅಡಗಿರಬೇಕೆಂದು ನಾವು ಊಹಿಸಿಕೊಳ್ಳಬೇಕಾಗುತ್ತದೆ.

ಇದಕ್ಕೆ ಮುನ್ನ ಒಂದು ಚಿಕ್ಕ ಉದಾಹರಣೆ: ಹಾಲಿವುಡ್‌ನ ಖ್ಯಾತ ನಟಿ ಮರ್ಲಿನ್ ಮನ್ರೋ ಕೆಲವು ವರ್ಷಗಳ ಹಿಂದೆ ಒಂದು ಹೇಳಿಕೆಯನ್ನು ನೀಡಿದ್ದಳು "ನನಗೆ ಧರಿಸಲು ಬಟ್ಟೆ ಇಲ್ಲದಿದ್ದರೂ ತೊಂದರೆಯಿಲ್ಲ, ಆದರೆ 'ಚ್ಯಾನಲ್ ನಂ.-5ರ ಪರಿಮಳ ನನ್ನ ಮೈಯಿಂದ ಯಾವಾಗಲೂ ಹೊರಹೊಮ್ಮುತ್ತಿರಲೇಬೇಕು ಎಂದು." ಇದಿಲ್ಲದಿದ್ದರೆ ಆಕೆ ಎಷ್ಟು ಚಡಪಡಿಸುತ್ತಿರಬಹುದೆಂದು ಈ ಒಂದು ಹೇಳಿಕೆಯಿಂದಲೇ ನಾವು ಅರ್ಥಮಾಡಿಕೊಳ್ಳಬಹುದು. ಫ್ಯಾಶನ್ ಪ್ರಿಯರಿಗೆ ಮರುಳಾಗಲು ಈಕೆಯ ಈ ಹೇಳಿಕೆಯೇ ಸಾಕು. ಇಷ್ಟೆಲ್ಲಾ ಖ್ಯಾತಿ ಪಡೆದು ಇಂದಿನ ದಿನಗಳಲ್ಲಿ ಮೆರೆದಾಡುತ್ತಿರುವ ಈ ಸುಗಂಧ ದ್ರವ್ಯಗಳಿಗೆ ತನ್ನದೇ ಆದ ಪುರಾತನ ಇತಿಹಾಸವಿದೆ.

ಸುಗಂಧ ದ್ರವ್ಯಗಳ ಪ್ರಾಚೀನ ಮಾಹಿತಿ ಲಭ್ಯ

ವಾಗಲು ಹೆಚ್ಚು ದೂರ ಹೋಗಬೇಕಾಗಿಲ್ಲ. ವೇದ ಮತ್ತು ಸೂತ್ರಗಳಲ್ಲಿ ಈ ಕುರಿತಾದ ಉಲ್ಲೇಖವಿದೆ. ಇದರ ಪ್ರಕಾರ ಅಂದಿನ ಕಾಲದಲ್ಲಿ ಸುಗಂಧ ದ್ರವ್ಯಗಳನ್ನು ಕ್ರಿಯಾ ಸಂಬಂಧ ಕಾರ್ಯಗಳಿಗೆ ಉಪಯೋಗಿಸುತ್ತಿದ್ದರು ಎಂದು ತಿಳಿದುಬಂದಿದೆ. ಹಾಗೆಯೇ ಬೌದ್ಧರು ತಮ್ಮ ದೇವರ ಪ್ರತಿಮೆಗಳ ಪಾದಗಳನ್ನು ತೊಳೆಯಲು ಸುಗಂಧಭರಿತ ನೀರನ್ನೇ ಬಳಸುತ್ತಿದ್ದರು ಎಂದು ತಿಳಿಯಲ್ಪಟ್ಟಿದೆ. ಯಾವ ವಸ್ತುವನ್ನು ಸುಟ್ಟಾಗ ಪರಿಮಳ ಹೊಮ್ಮುತ್ತದೋ ಅಂತಹ ವಸ್ತುಗಳನ್ನು ಪ್ರಾಚೀನ ಭಾರತೀಯರು ಸುಗಂಧ ದ್ರವ್ಯಗಳ ತಯಾರಿಕೆಗೆ ಬಳಸುತ್ತಿದ್ದರು.

ನಮ್ಮ ದೇಶವನ್ನು ಹೊರತುಪಡಿಸಿ ಇದರ ಇತಿಹಾಸವನ್ನು ಅವಲೋಕಿಸತೊಡಗಿದರೆ ಅತ್ಯಂತ ಕುತೂಹಲಕರವಾದ ಮಾಹಿತಿಗಳು ಲಭ್ಯವಾಗುತ್ತವೆ.

ಪುರಾತನ ರೋಮನ್ನರು ತಮ್ಮ ನೂರಾರು ದೇವತೆಗಳನ್ನು ಸಂತೃಪ್ತಗೊಳಿಸಲು ಸುಗಂಧ ದ್ರವ್ಯಗಳುನ್ನು ಉಪಯೋಗಿಸುತ್ತಿದ್ದರು. ಓಗೆ ಆರಂಭದ ಕಾಲದಲ್ಲಿ ಕೇವಲ ದೇವರ ಸಂತೃಪ್ತಿಗಾಗಿ ಉಪಯೋಗಿಸಲ್ಪಡುತ್ತಿದ್ದ ಸುಗಂಧ ದ್ರವ್ಯಗಳಿಗೆ ಶೃಂಗಾರರೂಪ ಬಂದದ್ದು ಪುರಾತನ ಈಜಿಪ್ಷಿಯನ್ನರಿಂದ. ಇವರು ಸೊಗಸು, ಅಲಂಕಾರ ಮುಂತಾದ ವಿಷಯಗಳಲ್ಲಿ ರೋಮನ್ನರಿಗಿಂತ ಮುಂದಿದ್ದರು. ತಾವು ನೋಡುಗರ ಕಣ್ಣಿಗೆ ಅಂದವಾಗಿ ಕಾಣಿಸಿಕೊಳ್ಳಬೇಕೆನ್ನುವುದು ಈಜಿಪ್ಷಿಯನ್ನರ ಆಸೆ. ಅದರಂತೆ ಅವರು ಸುಗಂಧ ದ್ರವ್ಯಗಳನ್ನು ಘ್ರಾಣಿಸುವ ಮತ್ತು ಅದನ್ನು ಬಳಸಿಕೊಳ್ಳುವ ರೀತಿಯನ್ನು ಪ್ರಚುರಪಡಿಸಿದರು.

ಆರಂಭದಲ್ಲಿ ಇವರಲ್ಲೂ ಸುಗಂಧ ದ್ರವ್ಯದ ಕುರಿತಾದ ಮೂಢನಂಬಿಕೆ ಮನೆ ಮಾಡಿಕೊಂಡಿತ್ತು. ಇದನ್ನವರು ಚಂದ್ರನ ದೇವತೆಯಾದ ಥಾಥ್‌ನ ಪ್ರತಿಷ್ಠೆಗೋಸ್ಕರ ಬಳಸುತ್ತಿದ್ದರು. ನಂತರ ಕಾಲಚಕ್ರ ಉರುಳಿದ ಹಾಗೆ ಇದಕ್ಕವರು ಶೃಂಗಾರ ವಸ್ತುವಿನ ಪ್ರಾಧಾನ್ಯ ಕೊಟ್ಟು ನಾನಾ ರೀತಿಯ ಕಚ್ಚಾ ವಸ್ತುಗಳನ್ನು ಆಮದು ಮಾಡಿಕೊಂಡು ಬೇರೆ ಬೇರೆ ವಿಧದ ಸುಗಂಧ ದ್ರವ್ಯಗಳನ್ನು ತಯಾರಿಸತೊಡಗಿದರು. ನಂತರ ಪುರಾತನ ಚೀನಿಯರು ಇದರ ಬಗ್ಗೆ ಹೆಚ್ಚಿನ ಪ್ರಗತಿಯನ್ನು ಸಾಧಿಸಿದರು. ಇವರು ಕ್ರಿಸ್ತಪೂರ್ವದಲ್ಲಿಯೇ ಸುಗಂಧ ದ್ರವ್ಯಗಳನ್ನು ತಯಾರಿಸಲು ಹೂವು, ಸಸ್ಯ, ಪರಿಮಳದ ಬೇರು ಮುಂತಾದುವುಗಳನ್ನು ಉಪಯೋಗಿಸಲು ಆರಂಭಿಸಿದ್ದರಿಂದ ಇವರನ್ನು ಸುಂಗಧದ್ರವ್ಯದ ಉಪಯೋಗದ ಕಲೆಯ ಮಾರ್ಗದರ್ಶಿಗಳು ಎನ್ನುತ್ತಾರೆ.

ಜಗತ್ತಿನ ಅತ್ಯಂತ ಪುರಾತನ ರೀತಿಯ ಸುಗಂಧದ್ರವ್ಯ ತಯಾರಿಕಾ ವಿಧಾನವೊಂದು ಬ್ಯಾಬಿಲೋನಿನ ಯಹೂದ್ಯರು ಬರೆದಿಟ್ಟ ಪುಸ್ತಕವೊಂದರಲ್ಲಿ ಕಾಣಸಿಕ್ಕಿದೆ. ಇದರ ಪ್ರಕಾರ ತಯಾರಿಸಲು ಬೇಕಾದ ವಸ್ತುವಿನ ಪರಿಮಾಣವನ್ನು ಕೆಲವು "ಶಕಲ್" ಮೌಲ್ಯದಿಂದ ನಿಗದಿಪಡಿಸಿಕೊಳ್ಳುತ್ತಿದ್ದರು. (ಶಕಲ್ ಎಂದರೆ ಸುಮಾರು ಒಂದೂಕಾಲು ರೂಪಾಯಿ ಬೆಲೆಬಾಳುವ ನಾಣ್ಯ) ಗಂಧರಸ ಅಥವಾ ರಕ್ತಬೋಳ, ದಾಲ್ಚಿನ್ನಿ, ಆಲೀವ್ ಎಣ್ಣೆ ಮುಂತಾದುವು ಸುಗಂಧದ್ರವ್ಯ ತಯಾರಿಕೆಗೆ ಅವರು ಉಪಯೋಗಿಸುತ್ತಿದ್ದ ಕೆಲವು ವಸ್ತುಗಳು. ಈಗಿನ ಆಧುನಿಕ ತಯಾರಿಕಾ ಕ್ರಮದಲ್ಲಿ ಕೂಡ ಇವುಗಳನ್ನು ಸ್ವಲ್ಪ ಪ್ರಮಾಣದಲ್ಲಿ ಬಳಸಿಕೊಳ್ಳಲಾಗುತ್ತದೆ.

ಪರಿಮಳಗಳು ಫ್ಯಾಷನ್ ಲೋಕಕ್ಕೆ ಕಾಲಿಟ್ಟೊಡನೆಯೇ ಇದರ ಬಳಕೆಯ ವಿರುದ್ಧ ತತ್ವಜ್ಞಾನಿಗಳನೇಕರು ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದರು. ಅಥೇನ್ಸ್‌ನ ಶಾಸನ ಸಭೆಯ ಓರ್ವ ಸದಸ್ಯನಾಗಿದ್ದ ಸೊಲೊನ್ (ಕ್ರಿ.ಪೂ. 638ರಿಂದ ಕ್ರಿ.ಪೂ. 558) ಸುಗಂಧ ದ್ರವ್ಯಗಳ ತಯಾರಿಕೆ ಮತ್ತು ಮಾರಾಟಗಳೆರಡನ್ನೂ ಖಂಡಿಸಿದ್ದ. ಗ್ರೀಕ್‌ನ ತತ್ವಜ್ಞಾನಿ ಸಾಕ್ರಟಿಸ್ (ಕ್ರಿ.ಪೂ. 469 ರಿಂದ ಕ್ರಿ.ಪೂ. 399)ನ ಪ್ರಕಾರ ಗಂಡಸರಿಗೆ ಇದನ್ನು ಉಪಯೋಗಿಸುವ ಹಕ್ಕಿಲ್ಲ. ಏನಿದ್ದರೂ ಅದು ಹೆಂಗಸರಿಗೆ ಮೀಸಲು. ಪುರುಷರು ಸುಗಂಧ ದ್ರವ್ಯಗಳ ದಾಸರಾಗುವಂತಹ ಹೀನಮಟ್ಟಕ್ಕಿಳಿಯಬಾರದು ಎಂದು ಆತ ಎಚ್ಚರಿಸಿದ್ದ. ಈ ಎಚ್ಚರಿಕೆ ಸರ್ವಕಾಲಕ್ಕೂ ಅನ್ವಯವಾಗಬೇಕೆನ್ನುವುದು ಸಾಕ್ರೆಟಿಸ್‌ನ ಆಸೆಯಾಗಿತ್ತು. ಆದರೆ

ಈಗ? ಸಾಕ್ರೆಟಿಸ್ ಮಾತನ್ನು ಸಮರ್ಥಿಸಿದವನೆಂದರೆ ಜ್ಯೂಲಿಯಸ್ ಸೀಸರ್. ಈತ ತನ್ನ ಕಾಲದ ಪುರುಷರಿಗೆ ಹೇಳುತ್ತಿದ್ದ, "ನಿಮಗೆ ಈ ಸುಗಂಧ ದ್ರವ್ಯಗಳ ಸಹವಾಸವೇ ಬೇಡ. ಬೇಕಿದ್ದರೆ ನೀವು ಘಮಘಮಿಸುವ ಮಲ್ಲಿಗೆಯ ಪರಿಮಳವನ್ನು ಆಘ್ರಾಣಿಸಿ..." ಎಂದು. ಆದರೆ ಇವರೆಲ್ಲರಿಗಿಂತ ಒಂದು ಹೆಜ್ಜೆ ಮುಂದೆ ಹೋದ ನೆಪೋಲಿಯನ್ ತನ್ನ ಸುಂದರ ಮಡದಿ ಜೋಸ್‌ಫಿನ್ ಡಿ ಬ್ಯೂಹಾರ್ನ್‌ಸ್‌ಳಿಗೆ ಪರಿಮಳಭರಿತ ಕಸ್ತೂರಿಯನ್ನು ತಂದುಕೊಡುತ್ತಿದ್ದ. ಇದಕ್ಕಾಗಿ ಕಸ್ತೂರಿ ಮೃಗಗಳು ತಮ್ಮ ಪ್ರಾಣವನ್ನು ತೆರಬೇಕಾಗಿತ್ತು.

ಆದರೆ ಇಂದಿನ ದಿನಗಳಲ್ಲಿ ಸುಗಂಧ ದ್ರವ್ಯಗಳನ್ನು ಉಪಯೋಗಿಸುವವರಿಗೆ ಸೊಲೊನ್ ಸಾಕ್ರಟಿಸ್ ಅಥವಾ ಜ್ಯೂಲಿಯಸ್ ಸೀಸರ್ ಮುಂತಾದವರ ಮಾತುಗಳು ನೆನಪಿಗೆ ಬರುವುದಿಲ್ಲ. ಜಗತ್ತಿನಾದ್ಯಂತ ಪರಿಮಳ ತಯಾರಿಕೆಯ ಬೃಹತ್ ಉದ್ದಿಮೆಗಳೇ ಹಬ್ಬಿಕೊಂಡಿವೆ. ಹಣಗಳಿಸುವುದಷ್ಟೇ ಇವುಗಳ ಏಕೈಕ ಉದ್ದೇಶ.

ಇತ್ತೀಚಿನ ವರ್ಷಗಳಲ್ಲಿ ಸುಗಂಧ ದ್ರವ್ಯಗಳ ತಯಾರಿಕೆಗೋಸ್ಕರ ಗಂಧದ ಎಣ್ಣೆ, ಮಲ್ಲಿಗೆ ಮತ್ತು ನಿಂಬೆ ಎಣ್ಣೆ ಪರಿಮಳದ ಬೇರು ಮುಂತಾದುವುಗಳನ್ನು ಪೂರ್ವ ಏಷಿಯಾ, ಸೋವಿಯತ್ ಯುನಿಯನ್, ಫ್ರಾನ್ಸ್‌ಗಳಿಗೆ ರಫ್ತು ಮಾಡಿ ಸುಮಾರು ಐದು ಕೋಟಿ ರೂ.ಗಳಷ್ಟು ವಾರ್ಷಿಕ ಆದಾಯ ಗಳಿಸುತ್ತಿರುವ ಭಾರತವೂ ಇದಕ್ಕೆ ಮರುಳಾಗಿದೆ. ಈಗಾಗಲೇ ನಮ್ಮಲ್ಲಿ ಸುಮಾರು ಮುನ್ನೂರರಷ್ಟು ಈ ಸುಗಂಧ ದ್ರವ್ಯಗಳ ಸಣ್ಣ ದೊಡ್ಡ ಕಾರ್ಖಾನೆಗಳಿವೆ. ಕಿಲೋ ಒಂದಕ್ಕೆ ನಮ್ಮಲ್ಲಿ ಇವುಗಳ ಬೆಲೆ ಮೂವತ್ತು ರೂ.ನಿಂದ ಹಿಡಿದು 12,000ರೂ.ವರೆಗೂ ಇದೆ. ನಮ್ಮ ಬಡ ರಾಷ್ಟ್ರಕ್ಕೆ ಇಷ್ಟೊಂದು ದುಬಾರಿ ಬೆಲೆಯ ಸೌಂದರ್ಯ ಸಾಧನದ ಅವಶ್ಯಕತೆ ಯಿದೆಯೇ?

*



# ಸಮಾರಂಭಗಳ ಸಂಭ್ರಮದಲ್ಲಿ

● ಡಾ|| ಪಿ.ಎಸ್. ರಾಮಾನುಜಂ ●

ನೀವು ಯಾವುದಾದರೂ ಊರಿನಲ್ಲಿ ಮುಖ್ಯ ವ್ಯಕ್ತಿಗಳಾಗಿದ್ದರೆ, ಅಲ್ಲಿನ ಸಮಾರಂಭಗಳಲ್ಲಿ ಮುಖ್ಯ ಅತಿಥಿಯಾಗುವುದನ್ನು ತಪ್ಪಿಸಿಕೊಳ್ಳುವುದು ನಿಮ್ಮಿಂದ ಸಾಧ್ಯವಾಗುವುದಿಲ್ಲ. ಯಾವುದೋ ಸಂಸ್ಥೆ ಅಥವಾ ಇಲಾಖೆಯಲ್ಲಿ ನೀವು ಮುಖ್ಯ ವ್ಯಕ್ತಿಯಾಗಿರುವ ದೋಷದಿಂದಲೋ ಅಥವಾ ಹಲವು ಪುಸ್ತಕಗಳನ್ನು ಬರೆದು ಮಾರಲಾಗದೆ ಬಿದ್ದಿರುವ ಪುಸ್ತಕಗಳ ರಾಶಿಗೆ ನಿಮ್ಮ ಪುಸ್ತಕಗಳನ್ನು ಸೇರಿಸಿರುವ ತಪ್ಪಿನಿಂದಲೋ ನೀವು ಮುಖ್ಯ ಅತಿಥಿಗಳಾಗಿ ಕುರ್ಚಿಗೆ ಅಂಟಿಕೊಂಡು ಕುಳಿತು ಸಾವಿರಾರು ಜನರ ಅಸಹನೆಯ ದೃಷ್ಟಿಗಳನ್ನು ಎದುರಿಸಬೇಕಾಗುತ್ತದೆ.

ಶಾಲಾ ಕಾಲೇಜುಗಳಲ್ಲಿ ಮುಖ್ಯ ಅತಿಥಿಗಳಾಗಿ ಹೋಗಿಬಿಟ್ಟರೆ ನೀವು ಪಡೆಯುವ ಅನುಭವವು ನಿಮ್ಮನ್ನು ಒಂದೊಂದು ಸಮಾರಂಭದ ನಂತರವೂ ಹತ್ತು ವರುಷ ಹೆಚ್ಚು ವಯಸ್ಸಾದವರಂತೆ ಮಾಡಿಬಿಡುತ್ತದೆ. ಅನುಭವವಂತೂ ಇದ್ದಕ್ಕಿದ್ದಂತೆ ಹೆಚ್ಚಿ ಯಾವುದೇ ಕಷ್ಟ ಪರಿಸ್ಥಿತಿಯನ್ನು ಎದುರಿಸುವ ನಿಮ್ಮ ಸಾಮರ್ಥ್ಯದ ಮಟ್ಟವನ್ನು ಹೆಚ್ಚಿಸುತ್ತದೆ. ನಮ್ಮ ನಿಮ್ಮ ವ್ಯಕ್ತಿತ್ವದ ಓರೆಕೋರೆಗಳನ್ನು ಸರಿಪಡಿಸಿಕೊಳ್ಳಲು ಅಥವಾ ಗುರುತಿಸಿಕೊಳ್ಳಲು ಇಂತಹ ಅನುಭವಗಳು ಅವಶ್ಯಕ.

ನಾನು ಇಂತಹ ಅನೇಕ ಸಂದರ್ಭಗಳಿಗೆ ಬಲಿಯಾಗಿದ್ದೇನೆ. "ನೀವು ಬಂದೇ ಬರಬೇಕು ಸಾರ್, ನಿಮ್ಮನ್ನೇ ಕರೆಯಬೇಕೆಂದು ನಾವು ಸರ್ವಾನುಮತದಿಂದ ತೀರ್ಮಾನಿಸಿಬಿಟ್ಟಿದ್ದೇವೆ. ನೀವೇ ಈ ಸಮಾರಂಭಕ್ಕೆ ಸರಿಯಾದವರು ಸಾರ್, ಎರಡು ಮೂರು ವರ್ಷಗಳಿಂದ ನಿಮ್ಮನ್ನು ಕರೆಯಬೇಕೆಂದಿದ್ದು ಸಾಧ್ಯವಾಗದೆ ಈ ಸಲ ತಮ್ಮನ್ನೇ ಕರೆಯಬೇಕೆಂದು ಮನಸ್ಸು ಮಾಡಿದ್ದೇವೆ. ತಾವು ದೊಡ್ಡ ಮನಸ್ಸು ಮಾಡಿ ಒಪ್ಪಿಕೊಳ್ಳಬೇಕು ಸಾರ್" ಎಂಬ ಮಧುರ ಮಾತುಗಳಿಗೆ ಮರುಳಾಗಿ, ಇದೇ ಮಾತುಗಳನ್ನು ಅವರು ಎಲ್ಲರಿಗೂ ಹೇಳಿರುತ್ತಾರೆಂಬ ವಿಷಯದ ಪರಿಜ್ಞಾನವಿಲ್ಲದೆ ಒಪ್ಪಿಕೊಂಡುಬಿಟ್ಟು ಬಲಿಗಂಬದ ಬಳಿಗೆ ಹೋಗುವ ಪ್ರಾಣಿಯಂತೆ ಸಮಾರಂಭಕ್ಕೆ ಹೋಗಿ ಸೇರಿಕೊಳ್ಳುತ್ತೇನೆ. ಅಲ್ಲಿ ನನ್ನಂತೆಯೇ ಅನೇಕ ಮುಖ್ಯ ವ್ಯಕ್ತಿಗಳು ಅದೇ ಮರುಳು ಮಾತಿಗೆ ಬಲಿಯಾಗಿ ಬಂದಿರುವುದನ್ನು ನೋಡುತ್ತೇನೆ. ಅವರಿಗೂ ನನ್ನದೇ ಅನುಭವವಾಗಿರುವುದರಿಂದ ಪರಸ್ಪರ ಪೆಚ್ಚುನಗೆ ಬೀರಿ ಒಂದು ವೈರಾಗ್ಯಭಾವದಿಂದ ವೇದಿಕೆಯ ಮೇಲೆ ಸಾಲಾಗಿ ಹಾಕಿರುವ ಕುರ್ಚಿಗಳಲ್ಲಿ ಶಾಲೆಯ ಹುಡುಗರಂತೆ ಕುಳಿತುಕೊಳ್ಳಬೇಕಾಗುತ್ತದೆ. ಅಲ್ಲಿ ಸೇರಿದ ಮೇಲೆ ಏನೂ ಮಾಡುವಂತಿಲ್ಲ. ವ್ಯವಸ್ಥಾಪಕರು ಹೇಳಿದಂತೆ

ಕೇಳುವುದಷ್ಟೇ ಉಳಿಯುವುದು. ಅಲ್ಲಿಯ ಸನ್ನಿವೇಶಕ್ಕೆ ವಶರಾಗಿ ನಾವು ಆ ಸಮಾರಂಭವನ್ನು ಅನುಭವಿಸಬೇಕು.

ಸಮಾರಂಭದಲ್ಲಿ ವೇದಿಕೆಯ ಮೇಲೆ ಕುಳಿತುಕೊಳ್ಳುವ ವಿಚಾರವೂ ಪ್ರಯಾಸಕರವೇ. ಅದು ಅಷ್ಟು ಸುಲಭವಾದುದೇನಲ್ಲ. ಸಾಲಾಗಿ ಹಾಕಿರುವ ಕುರ್ಚಿಗಳನ್ನು ನೋಡಿ ನಡುವಿನಲ್ಲಿ, ಅಂದರೆ ಮಧ್ಯಭಾಗದಲ್ಲಿ ರಾರಾಜಿಸುತ್ತಿರುವ ಕುರ್ಚಿಯಲ್ಲಿ ನಮ್ಮನ್ನು ಕುಳ್ಳಿರಿಸುತ್ತಾರೆಂದು ನಾವು ಪ್ರತಿಯೊಬ್ಬರೂ ನಿರೀಕ್ಷಿಸುತ್ತಾ ನಿಂತಿರುವಾಗ ಯಾರೋ ಒಬ್ಬರು ಅದರಲ್ಲಿ ಕುಳಿತು ನಮ್ಮನ್ನು ನಿರಾಸೆಗೊಳಿಸುತ್ತಾರೆ. ವ್ಯವಸ್ಥಾಪಕರಲ್ಲೊಬ್ಬರು, ಅಂದರೆ ನಮಗೆ ಪರಿಚಯವಿಲ್ಲದವರು ಬಂದು ನೀವು ಮುಖ್ಯ ಅತಿಥಿಗಳಾ? ಎಂಬ ಪ್ರಶ್ನೆಯನ್ನು ಬೇರೆ ಕೇಳಿ ಮೊದಲೇ ಬಾಡಿಹೋಗಿರುವ ಮುಖವನ್ನು ಮತ್ತಷ್ಟು ಬಾಡಿಸುತ್ತಾರೆ. ಅಷ್ಟು ಜನ ಮುಖ್ಯ ಅತಿಥಿಗಳನ್ನು ಹೇಗಪ್ಪ ಕೂರಿಸುತ್ತಾರೆ ಎಂಬ ಯೋಚನೆಯಲ್ಲೋ ಅಥವಾ ಅವರೇ ನಮ್ಮನ್ನು ಕೂರಿಸಲಿ ಎಂಬ ಬಿಂಕದಿಂದಲೋ ನಾವು ನಿಂತೇ ಇದ್ದರೆ ಅಲ್ಲಿ ಇರುವ ಕುರ್ಚಿಗಳೆಲ್ಲ ಭರ್ತಿಯಾಗಿ ನಮಗೆ ಬಸ್ಸುಗಳಲ್ಲಿರುವಂತೆ ಸ್ಟಾಂಡಿಂಗ್ ಸೀಟ್ ಎನ್ನಬಹುದಾದ ಸ್ಥಳ ಮಾತ್ರ ಸಿಗಬಹುದಾದ ಪರಿಸ್ಥಿತಿಯಿರುವುದರಿಂದ ನಾವು ಮ್ಯೂಸಿಕಲ್ ಚೇರ್ ಅಂದರೆ ಸಂಗೀತ ಕುರ್ಚಿಯ ಆಟದಲ್ಲಿ ಮಾಡುವಂತೆ ಕೈಗೆ ಸಿಕ್ಕಿದ ಕುರ್ಚಿಯಲ್ಲಿ ಸರಕ್ಕನೆ ಕುಳಿತುಬಿಡಬೇಕು. ಇಲ್ಲಿ ಮಾನಮರ್ಯಾದೆಯ ಪ್ರಶ್ನೆಯಿರುವುದಿಲ್ಲ. ಎಲ್ಲ ಮುಖ್ಯ ಅತಿಥಿಗಳೂ ಹಾಗೆಯೇ ಮಾಡುವುದರಿಂದ ಯಾರಿಗೂ ಮಾನ ಹೋಗುವುದಿಲ್ಲ.

ವೇದಿಕೆಯಲ್ಲಿ ಕೆಲವು ಕಡೆ ಯಾರೋ ಒಬ್ಬರು ಬಂದು ನಮ್ಮನ್ನು ಕೂರಿಸುವ ಪದ್ಧತಿಯೂ ಇದೆ. ಆದರೆ ಅಲ್ಲಿ ಯೋಗ್ಯತೆಯ ಪ್ರಕಾರವಾಗಲಿ, ಎತ್ತರದ ಪ್ರಕಾರವಾಗಲಿ, ವಯಸ್ಸಿನ ಪ್ರಕಾರವಾಗಲಿ ಕೂರಿಸುವ ಪದ್ಧತಿಯಿಲ್ಲ. ಎಲ್ಲರೂ ಸಮಾನರೆಂದು ಪರಿಗಣಿಸುವುದರಿಂದ ಯಾರು ಯಾವ ಕುರ್ಚಿಗೆ ಹತ್ತಿರವಿರುತ್ತಾರೋ ಅವರನ್ನು ಅಲ್ಲಿ ಕೂರಿಸುತ್ತಾರೆ. ಆದರೆ ಎಲ್ಲ ಕಡೆಯೂ ಹೀಗೆ ನಡೆಯುವುದಿಲ್ಲ. ಆದ್ದರಿಂದಲೇ ಸಂಗೀತ ಕುರ್ಚಿಯ ಉಪಾಯವನ್ನು ನಾನು ಸೂಚಿಸಿರುವುದು.

ಅಂತೂ ಹೇಗೋ ಒಂದು ಕುರ್ಚಿಯನ್ನು ಸಂಪಾದಿಸಿದ ಮೇಲೆ ಮುಖ್ಯ ಅತಿಥಿಗಳಾದ ನಾವೆಲ್ಲರೂ ಸ್ವಲ್ಪ ಹೊತ್ತು ಒಬ್ಬರ ಮುಖವನ್ನು ಒಬ್ಬರು ನೋಡಿ ನಂತರ ಅಭಿವಾದನವನ್ನು ವಿನಿಮಯ ಮಾಡಿಕೊಳ್ಳುತ್ತೇವೆ. ನಾವು ವೇದಿಕೆಯಲ್ಲಿ ಕುಳಿತ ಕೂಡಲೇ ಪ್ರಖರವಾದ ಬೆಳಕು ನಮ್ಮ ಮುಖಗಳ ಮೇಲೆ ಬೀಳುವಂತೆ ವಿದ್ಯುದ್ದೀಪಗಳನ್ನು ಬೆಳಗಿಸಲಾಗುತ್ತದೆ. ಅದರಿಂದ ನಾವು ಕಣ್ಣುಗಳನ್ನು ಪೂರ್ತಿ ತೆರೆದಿಟ್ಟುಕೊಳ್ಳುವುದು ಸಾಧ್ಯವಾಗುವುದಿಲ್ಲ. ನಾವು ಚಡಪಡಿಸಿಕೊಂಡು ಅರ್ಧನಿಮೀಲಿತನೇತ್ರರಾಗಿ ಕುಳಿತುಕೊಂಡಿರುವುದನ್ನು ನೋಡಿ ಪ್ರೇಕ್ಷಕರು ಸಂತೋಷದಿಂದ ಚಪ್ಪಾಳೆ ತಟ್ಟುತ್ತಾರೆ, ಹಾಗೂ ನಮ್ಮ ಸುಂದರ ವದನಾರವಿಂದಗಳನ್ನು ನೋಡಿ ನಮ್ಮ ಯೋಗ್ಯತೆಗಳನ್ನು ಅಳೆಯುತ್ತಾ ಕುಳಿತುಕೊಳ್ಳುತ್ತಾರೆ. ಇದು ಅನೇಕ ಮುಖ್ಯ ಅತಿಥಿಗಳಿರುವ ಸಮಾರಂಭಗಳಲ್ಲಿ ಆಗುವ ಪರಿಸ್ಥಿತಿ.

ಮುಖ್ಯ ಅತಿಥಿಗಳಾಗುವ ಯೋಗ್ಯತೆಯಿರುವವರ ಪಟ್ಟಿಯಲ್ಲಿ ಇರುವವರಿಗೆ ಮತ್ತೊಂದು ಪೇಚಿನ ಅಂದರೆ ಗರ್ವಭಂಗವಾಗುವ ಸಂದರ್ಭವಿದೆ. ಅದೆಂದರೆ, ಬರಲು ಒಪ್ಪಿಕೊಂಡು ಸಮಾರಂಭಕ್ಕೆ ಬರಲು ಆಗದವರ ಸ್ಥಾನವನ್ನು ತುಂಬುವುದು. ವ್ಯವಸ್ಥಾಪಕರು ಯಾರನ್ನೋ ಮರುಳುಮಾಡಿ ಒಪ್ಪಿಸಿ ಕೊನೆಯ ಗಳಿಗೆಯಲ್ಲಿ ಅವರು ಬರದೆ ಕಾರಣಾಂತರಗಳಿಂದ ಕೈ ಕೊಟ್ಟಾಗ ಚೆಕ್ಕಿನಂತೆ ನಿಮ್ಮ ಬಳಿ ಬರುತ್ತಾರೆ. 'ನಾಳೆ ಸಮಾರಂಭ ಇಟ್ಟುಕೊಂಡಿದ್ದೇವೆ. ಬಹಳ ಅರ್ಜೆಂಟಾಗಿ ಇಟ್ಟುಕೊಳ್ಳಬೇಕಾಯಿತು ಸಾರ್. ಅದಕ್ಕೇ ತಮ್ಮನ್ನೇ ಕರೆಸಬೇಕೆಂದು ಆಡಳಿತ ಮಂಡಳಿ ತೀರ್ಮಾನಿಸಿದೆ. ತಾವು ದೊಡ್ಡ ಮನಸ್ಸು ಮಾಡಿ ಬರಬೇಕು' ಎಂದು ಬೆಣ್ಣೆಯಲ್ಲಿ ಕೂದಲನ್ನು ಎಳೆದಂತೆ ನಯವಾಗಿ ಮಾತನಾಡುತ್ತಾರೆ. ಆಹ್ವಾನ ಪತ್ರಿಕೆ ಮಾಡಲು ಸಮಯವಿಲ್ಲದ ಪರಿಸ್ಥಿತಿ ಅಥವಾ ಆಹ್ವಾನ ಪತ್ರಿಕೆಯನ್ನು ಸಂಜೆಯ ವೇಳೆಗೆ ಮುದ್ರಿಸಿ ತಂದು ಬಿಡುವ ಶಕ್ತಿಯುಳ್ಳ ಜನರೂ ಇರುತ್ತಾರೆ. ನೀವು ಬೇಗಿ ಹೋಗಿ 'ಎಷ್ಟು ಅಕ್ಕರೆಯಪ್ಪ ಇವರಿಗೆ' ಎಂದು ಮರುಳಾಗಿ ಒಪ್ಪಿಕೊಳ್ಳುತ್ತೀರಿ. ನೀವು ಒಪ್ಪಿಕೊಂಡ



"ನಾಳೆಯಿಂದ ತಂಪಾದ ನೀರು ಕುಡೀ ಬಹುದು" ಅಂತ ನೀವು ಹೇಳಿದ್ದು ನೋಡಿ ಫ್ರಿಜ್ ತರ್ತೀರಾಂತ ಅಂದ್ಕೊಂಡಿದ್ದೆ!"

ಒಡನೆ ಅವರು 'ಸದ್ಯ ಬೇಡಿದ ಕಾಡೊಳ್ ಮಳೆಯಾಯ್ತು' ಎಂದು ದೀರ್ಘವಾದ ನಿಟ್ಟುಸಿರು ಬಿಟ್ಟು ಸಂತೃಪ್ತರಾಗಿ ಏಳುತ್ತಾರೆ. ನೀವು ಮಾರನೆಯ ದಿನ ಸಮಾರಂಭಕ್ಕೆ ಹೋದಾಗ ಸ್ವಾಗತಕಾರರು ತಮ್ಮ ವಿವೇಕವನ್ನು ಗಾಳಿಗೆ ತೂರಿ 'ಇಂದು ಮುಖ್ಯ ಅತಿಥಿಗಳಾಗಿ ಶ್ರೀ..... ಯವರನ್ನು ಏರ್ಪಾಡು ಮಾಡಿದ್ದೆವು. ಅವರು ಯಾವುದೋ ಅನಾನುಕೂಲದಿಂದ ಬರಲಾಗದಿದ್ದುದರಿಂದ ಇವರನ್ನು ಕೇಳಿಕೊಂಡೆವು. ಇವರು ಸಂತೋಷದಿಂದ ಒಪ್ಪಿಕೊಂಡು ಬಂದಿದ್ದಾರೆ. ಆದ್ದರಿಂದ ಅವರಿಗೆ ಸುಸ್ವಾಗತ' ಎಂದು ಒಂದು ಬಾಂಬು ಹಾಕಿ ನಿಮ್ಮ ಸಂತೋಷವನ್ನು ಹಾಳುಮಾಡುತ್ತಾರೆ. ನೀವು ಕೇವಲ ಒಬ್ಬರ ಖಾಲಿ ಸ್ಥಾನವನ್ನು ತುಂಬಿದ ಜನ ಮಾತ್ರ ಎಂಬುದು ಸ್ಪಷ್ಟವಾಗಿ ನಿಮ್ಮ ಗರ್ವಭಂಗವಾಗುತ್ತದೆ. ನಿಮ್ಮ ತಲೆಯ ಹಿಂದೆ ನೀವೇ ರೂಪಿಸಿಕೊಂಡಿದ್ದ ಪ್ರಭಾವಲಯದ ಪ್ರಭಾವವು ಲಯವಾಗಿ ನಿಮಗೆ ಕಸಿವಿಸಿಯಾಗುತ್ತದೆ. ಸಮಾರಂಭಕ್ಕಾಗಿಯೇ ಕಾಯುತ್ತಿರುವ ವ್ಯಕ್ತಿಯೇನೋ ನೀವು ಎಂಬ ಭಾವನೆ ಜನಗಳಲ್ಲೂ ಉಂಟಾಗಿ ಪರಿಸ್ಥಿತಿ ಶೋಚನೀಯವಾಗಿಬಿಡುತ್ತದೆ.

ಇಂತಹ ಇಕ್ಕಟ್ಟಿನ ಸನ್ನಿವೇಶಗಳಿಂದ ಪಾರಾಗಲು ನಾನೊಂದು ಉಪಾಯ ಕಂಡುಕೊಂಡಿದ್ದೇನೆ. ನನ್ನನ್ನು ಕರೆಯಲು ಬರುವವರು, ನಮ್ಮನ್ನು ಹೊಗಳಿ ಅಟ್ಟಕ್ಕೇರಿಸಿ ನಮ್ಮ ಆಗಮನದ ಅನಿವಾರ್ಯತೆಯ ಬಗ್ಗೆ ಹೇಳಿದ ಮೇಲೆ ನಾನು ಆ ಊರಿನಲ್ಲಿ ಮುಖ್ಯ ಅತಿಥಿಗಳಾಗಿ ಬರಬಹುದಾದ ಕೆಲವರ ಹೆಸರನ್ನು ನಮ್ರವಾಗಿ ಸೂಚಿಸಿ, ಅವರನ್ನೇಕೆ ಕರೆಯಬಾರದು ಎಂಬ ಪ್ರಶ್ನೆಯನ್ನು ಅವರ ಮುಂದೆ ಇಡುತ್ತೇನೆ. ಆಗ ಅವರಲ್ಲೊಬ್ಬರು ರಹಸ್ಯವನ್ನು ಹೊರಗೆಡಹಿ ಬಿಡುತ್ತಾರೆ. 'ನಾವು ಅವರನ್ನು ಕರೆದೆವು ಸಾರ್, ಆದರೆ ಅವರಿಗೆ ಬೇರೆ ಕೆಲಸ ಇದೆಯಂತೆ' ಎಂದು ಬಿಡುತ್ತಾರೆ. ಓಹೋ, ನಾನೊಬ್ಬನೇ ಕೆಲಸ ಇಲ್ಲದವನು ಎಂದು ಇವರು ತಿಳಿದುಕೊಂಡಿರುವ ಹಾಗಿದೆ ಎಂದುಕೊಂಡು ನಾನು ನಮ್ರನಾಗಿ ಆಮಂತ್ರಣವನ್ನು ತಿರಸ್ಕರಿಸಿ ಬಿಡುತ್ತೇನೆ. ಆ ದಿನ ಯಾರೋ ಎಲ್ಲಿಂದಲೋ ಬರುವುದಾಗಿಯೋ, ನಾನೇ ಎಲ್ಲಿಗೋ ಹೋಗಬೇಕಾಗಿದೆಯೆಂದೋ ಹೇಳಿ ತಪ್ಪಿಸಿಕೊಳ್ಳುತ್ತೇನೆ. ಈ ರೀತಿ ಉಪಾಯ ಯೋಚಿಸುವುದು ನಮ್ಮ ಮಾನರಕ್ಷಣೆಗೆ ಬಹಳ ಅವಶ್ಯಕ. ಒಂದು ಪರ್ಯಾಯ ವ್ಯವಸ್ಥೆಯಾಗಿ ಹೋಗಲು ಇಚ್ಛಿಸದಿರುವವರು ಈ ಹಂಚಿಕೆಯನ್ನು ಹೂಡುವುದು ಶ್ರೇಯಸ್ಕರ. ಇದು ನನ್ನ ಅನುಭವಸಿದ್ಧ ಅಭಿಪ್ರಾಯ.

ಅಂತೂ ನಿಮ್ಮನ್ನೇ ಮೊದಲು ಕರೆಯಲು ಬಂದವರ ಆಹ್ವಾನವನ್ನು ತಿರಸ್ಕರಿಸುವುದು ಅಷ್ಟು ಸುಲಭವಲ್ಲ. ಎಷ್ಟೋ ಸಮಾರಂಭಗಳಿಗೆ, ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ನಾನೂ ಒಪ್ಪಿಕೊಂಡಿದ್ದೇನೆ. ಹಾಗೆ ಒಪ್ಪಿಕೊಂಡ ಸಮಾರಂಭಗಳಲ್ಲಿ ಈವರೆಗೆ ಹೇಳಿದ ಪರಿಭವಗಳನ್ನು ಬಿಟ್ಟರೆ, ಬೇರೆ ರೀತಿಯ ಸ್ವಾರಸ್ಯಕರ ಘಟನೆಗಳು, ಮುಜುಗರದ ಘಟನೆಗಳೂ ಉಂಟಾಗುತ್ತದೆ. ಅವುಗಳಲ್ಲಿ ಕೆಲವಾದರೂ ನಮ್ಮ ನಿಮ್ಮ ನೆನಪಿನಲ್ಲಿ ಉಳಿಯುವ ಶಕ್ತಿಯುಳ್ಳಂತಹವು.

ಒಮ್ಮೆ ಒಂದು ಮಹಿಳಾಮಣಿಗಳ ಕಾಲೇಜಿನ ವಾರ್ಷಿಕೋತ್ಸವಕ್ಕೆ ಬರಬೇಕೆಂದು ನನ್ನನ್ನು ಆಹ್ವಾನಿಸಿದ್ದರು. 'ನೀವು ಮುಖ್ಯ ಅತಿಥಿಗಳಾಗಿ ಬಂದು ನಡೆಸಿಕೊಡಬೇಕು ಹಾಗೂ ನಿಮ್ಮ ಶ್ರೀಮತಿಯವರು ಬಹುಮಾನ ವಿತರಣೆ ಮಾಡಬೇಕು' ಎಂದು ಪರಿಪರಿಯಾಗಿ ಕೇಳಿಕೊಂಡುದರಿಂದ ಹಾಗೂ 'ನೀವಿಬ್ಬರಿಲ್ಲದೆ ಈ ಸಮಾ

ರಂಭಕ್ಕೆ ಕಳೆಯೇ ಇಲ್ಲ' ಎಂದೆಲ್ಲ ಹೇಳಿದುದರಿಂದ ನಾನು ಒಪ್ಪಿಕೊಂಡು ನನ್ನ ಮಹಿಳಾಮಣಿಯನ್ನೂ ಒಪ್ಪಿಕೊಳ್ಳಲು ಹೇಳಿದೆ. ಮೊದಲು ನನ್ನವಳು ಸ್ವಲ್ಪ ಹೊತ್ತು 'ಗುರ್' ಎಂದು ಎಂದಿನಂತೆ ಗುರುಗುಟ್ಟಿ ಬರಲು ಒಪ್ಪಿಕೊಳ್ಳದಿದ್ದರೂ, ಕೊನೆಗೆ ನಾನು ಹೋಗಲು ಒಪ್ಪಿರುವುದು ಮಹಿಳಾ ಕಾಲೇಜು ಎಂದು ಜ್ಞಾಪಿಸಿದ ತಕ್ಷಣವೇ ತನ್ನ ನಿರ್ಧಾರವನ್ನು ಬದಲಿಸಿ ಸಂತೋಷದಿಂದ ನನ್ನೊಡನೆ ಬರಲು ತಯಾರಾದಳು.

ನಾವಿಬ್ಬರೂ ಸಮಾರಂಭಕ್ಕೆ ಆ ಕಾಲೇಜಿಗೆ ಹೋದಾಗ ನಮಗೆ ಪರಿಸ್ಥಿತಿಯ ಅರಿವಾಯಿತು. ವಾರ್ಷಿಕೋತ್ಸವದ ಆ ಸಂದರ್ಭಕ್ಕೆ ನಾನಾ ರೀತಿಯ ಆಧುನಿಕ ವೇಷಭೂಷಣಗಳಲ್ಲಿ ಲಲನೆಯರು ಹಾಡುತ್ತಾ ಕುಣಿಯುತ್ತಾ ಇಡೀ ವಾತಾವರಣವನ್ನೇ ನಿರಂಕುಶವಾಗಿ ಮಾಡಿಬಿಟ್ಟಿದ್ದರು. ನನ್ನವಳು ಅದನ್ನೆಲ್ಲ ನೋಡಿ ದಂಗಾಗಿ ಹೋದಳು. ಅಲ್ಲಿ ನಾವು ಮುಖ್ಯ ಅತಿಥಿಗಳೆಂಬ ಗರ್ವ ಭಗ್ನವಾಗಿ ಹೋಯಿತು. ಹುಡುಗರ ಕಾಲೇಜಿಗಿಂತ ಭಿನ್ನವಾಗಿ ನಾವು ಹೇಳಿದ ಹಾಗೆ ಕೇಳುವ ಅಬಲೆಯರು ತಾನೆ ಎಂಬ ನಮ್ಮ ಕಲ್ಪನೆ ತಲೆಕೆಳಕಾಗಿ ಹೋಯಿತು. ನಾವೆಲ್ಲ ಬಲೆಯೊಳಗೆ ಸಿಕ್ಕ ಮೀನುಗಳಂತಾಗಿ ಹೋದೆವು.

ಕೆಲವು ಹುಡುಗಿಯರು ನಮ್ಮನ್ನು ನೋಡಿ ತಮಾಷೆ ಮಾಡಿಕೊಂಡರು. ಅವರು ಖಂಡಿತ ನನ್ನ ಆರಡಿ ಎರಡಿಂಚು ಎತ್ತರದ ಬಗ್ಗೆ ಹಾಗೂ ನನ್ನವಳಿಗೂ ನನಗೂ ಇರುವ ಕೇವಲ ಒಂದಡಿ ವ್ಯತ್ಯಾಸದ ಬಗ್ಗೆಯೂ ಹಾಸ್ಯಮಾಡಿಕೊಂಡಿರುತ್ತಾರೆ. ನನ್ನವಳಂತೂ ಸಿಟ್ಟಾಗಿ ಇವರಿಗೆಲ್ಲ ಏಳಡಿ ಇರುವ ಗಂಡಂದಿರು ಸಿಕ್ಕಲಿ ಎಂದು ಶಪಿಸಿಯೇ ಬಿಟ್ಟಳು.

ಅಂದು ಇಡೀ ಪ್ರಪಂಚದಲ್ಲಿರುವ ಮಹಿಳಾ ಪತ್ರಿಕೆಗಳಲ್ಲಿ ಕಂಡು ಬರುವ ವರ್ಣಮಯ ಚಿತ್ರಗಳಲ್ಲಿರುವ ಎಲ್ಲ ಫ್ಯಾಷನ್ನುಗಳೂ ಏಕತ್ರ ಕೇಂದ್ರೀಕೃತವಾಗಿ ಆ ಕಾಲೇಜಿನಲ್ಲಿ ಕಂಡು ಬರುತ್ತಿದ್ದವು. ನಮ್ಮ ದೇಶದ ವೇಷಭೂಷಣಗಳ ವಿವಿಧತೆ ಹಾಗೂ ಆ ವಿವಿಧತೆಯಲ್ಲಿನ ಏಕತೆ ಇವೆಲ್ಲ ಅಲ್ಲಿ ರಾರಾಜಿಸುತ್ತಿತ್ತು.

ಅಲ್ಲಿನ ವಾತಾವರಣವನ್ನು ನೋಡಿದಾಗ ಅಂದು ವೇದಿಕೆಯ ಮೇಲೆ ಭಾಷಣ ಮುಂತಾದವುಗಳನ್ನೊಳಗೊಂಡ ಕಾರ್ಯಕ್ರಮ ಎಂಬುದೊಂದು ಇದೆ ಎಂಬ ವಿಷಯವೇ ಯಾರ ಗಮನದಲ್ಲೂ ಇದ್ದಂತೆ ಕಾಣಲಿಲ್ಲ. ಪ್ರಿನ್ಸಿಪಾಲ್ ಎಂದು ಕರೆಸಿಕೊಳ್ಳುವ ಬಡಪಾಯಿ ಮಹನೀಯರು ಮುಖದಲ್ಲಿ ಬೆವರು ಸುರಿಸಿಕೊಂಡು ಏನು ಮಾಡಬೇಕೆಂದು ತಿಳಿಯದೆ ನಮ್ಮನ್ನು ಎಲ್ಲೆಲ್ಲಿಗೋ ಕರೆದುಕೊಂಡು ಹೋಗಿಬಿಟ್ಟು, ಕೊನೆಗೆ ಹೇಗೋ ವೇದಿಕೆಯ ಮೇಲಕ್ಕೆ ತಂದು ಸೇರಿಸಿದರು. ಪ್ರಮೀಳಾ ರಾಜ್ಯವೆಂದರೆ ಇದೇ ಇರಬೇಕು ಎಂದುಕೊಂಡು ಮೆಲ್ಲನೆ ನನ್ನವಳನ್ನು ಕಡೆಗಣ್ಣಿನಿಂದ ನೋಡಿದೆ. ಆಕೆಯೋ, ಶತ್ರು ರಾಜ್ಯಕ್ಕೆ ಹಾದಿ ತಪ್ಪಿ ಬಂದುಬಿಟ್ಟ ವ್ಯಕ್ತಿಯಂತೆ ಒಂದು ವಿಧವಾದ ಆತಂಕದಿಂದ ಇದ್ದುದನ್ನು ಗಮನಿಸಿದೆ.

ಈ ಸಮಾರಂಭದಲ್ಲಿ ವೇದಿಕೆಯ ಮೇಲೆ ಕೂರಲು ಯಾವ ಕಷ್ಟವೂ ಇರಲಿಲ್ಲ. ಒಬ್ಬೊಬ್ಬರಿಗೆ ಎರಡೆರಡು ಕುರ್ಚಿಗಳಂತೆ ಲೆಕ್ಕ ಮಾಡಿ ಹಾಕಿದ್ದರು. ಇದು ಅವರ ಸೌಜನ್ಯವನ್ನೂ ಅತಿಥಿ ಸತ್ಕಾರದ ಗುಣವನ್ನೂ ತೋರಿಸುತ್ತದೆ. ನನ್ನ ಎಡಗಡೆ 'ವಾಮೇ ಭೂಮಿಸುತಾ' ಎಂಬಂತೆ ನನ್ನವಳೂ, ಬಲಗಡೆ ಸೂಕ್ಷ್ಮವಾಗಿ ಕಂಪಿಸುತ್ತಿದ್ದ ಪ್ರಿನ್ಸಿಪಾಲರೂ ಕುಳಿತಿದ್ದರು. ಆ ಕಡೆ ಮಾತ್ರ ವಿದ್ಯಾರ್ಥಿನಿಯರ ಸಂಘದ ಅಧ್ಯಕ್ಷೆ ಮತ್ತು ಇನ್ನೊಬ್ಬರು.

ಸಮಾರಂಭ ಪ್ರಾರಂಭವಾಯಿತು. ಅಂದು ಭಾಷಣಗಳ ನಂತರ ಸಾಂಸ್ಕೃತಿಕ ಕಾರ್ಯಕ್ರಮವಿತ್ತು. ಅದಕ್ಕಾಗಿ ಸಿದ್ಧತೆಯೂ ನಡೆದಿತ್ತು. ಎಲ್ಲರ ದೃಷ್ಟಿಯೂ ಅವುಗಳ ನಿರೀಕ್ಷೆಯಲ್ಲೇ. ಅಂತೂ ಹೇಗೋ ಕಾರ್ಯಕ್ರಮಗಳು ಪ್ರಾರಂಭವಾಗಿ, ಮೊದಲು ಸ್ವಾಗತಭಾಷಣವಾಗಿ ನಂತರ ಹಲವೇ ಪುಟಗಳ ವರದಿಗಳು, ಸಂದೇಶಗಳು ಇತ್ಯಾದಿಗಳನ್ನು ಓದಿಯಾದ ಮೇಲೆ ಬಹುಮಾನ ವಿತರಣೆ ನನ್ನವಳಿಂದ ಆಯಿತು. ಕೊನೆಗೆ ನನ್ನ ಭಾಷಣದ ಸರದಿ ಬಂತು. ನನ್ನ ಮಡದಿ ಆತಂಕಪೂರ್ಣ ಕಣ್ಣುಗಳಿಂದ ನನ್ನನ್ನೇ ನೋಡುತ್ತಿದ್ದಳು, ಏನೇನು ಮಾತನಾಡಿಬಿಡುತ್ತದೆಯೋ ಈ ಪ್ರಾಣಿ, ಎಂದು. ನೋಡಲಿ ಬಿಡಿ, ನನಗೇನು ಹೆದರಿಕೆ?

ಎದ್ದು ನಿಂತೆ. 'ಈ ಸಮಾರಂಭದ....' ಎಂದು ಪ್ರಾರಂಭಿಸಿದ್ದೇ ತಡ, ವಿದ್ಯಾರ್ಥಿನಿಯರ ದೊಡ್ಡ ಗುಂಪೊಂದು ನೋ....ನೋ... ಎಂದು ಕೂಗಲು ಪ್ರಾರಂಭಿಸಿತು. 'ಎಲಾ ಇವರ! ಏನು ನೋ? ಎಂದುಕೊಂಡು 'ಏನಮ್ಮ?' ಎಂದೆ. 'ನೋ ಸ್ಪೀಚ್' ಎಂದು ತಾಳ ಹಾಕುತ್ತಾ ಆ ಗುಂಪು ಕೂಗಿತು, ಕುಣಿಯಿತು. ಅವರಿಗೆ ಭಾಷಣ ಬೇಡವಂತೆ. ಹುಡುಗರ ಕಾಲೇಜಿನಲ್ಲಿ, ಅದೂ ಕೆಲವು ಕಾಲೇಜುಗಳಲ್ಲಿ ಮಾತ್ರ ಇದನ್ನು ನಿರೀಕ್ಷಿಸಿದ್ದ ನಾನು ಇವರ ಧಾರ್ಷ್ಟ್ಯಕ್ಕೆ ಅವಾಕ್ಕಾದೆ. ಆದರೆ ತಕ್ಷಣ ಸಂಭಾಳಿಸಿಕೊಂಡು ಹೇಳಿದೆ. 'ನೋಡಿಮ್ಮಾ, ನಾನು ಮಾತನಾಡೋದಿಕ್ಕೆ ಬಂದಿರೋದು, ಮಾತಾಡೇ ಆಡ್ತೀನಿ. ನೀವು ಇಂಗ್ಲೀಷಿನಲ್ಲಿ ನೋನೋ ಅಂದರೂ ನಾನು ಕನ್ನಡದಲ್ಲಿ ಭಾಷಣ ಮಾಡೇ ಮಾಡ್ತೀನಿ' ಅಂದೆ. ಅದಕ್ಕೆ ಆ ಹುಡುಗಿಯರ ಗುಂಪು ಮತ್ತೆ 'ನೋ ನೋ' ಎಂದು ಕೂಗಿತು. ನಾನಂದೆ, 'ಇಲ್ಲಿ ಸ್ವಲ್ಪ ಕೇಳಿ, ಒಂದು ರಹಸ್ಯ ಹೇಳ್ತೀನಿ, ಕೇಳ್ತೀರಾ?' ಅದನ್ನು ಕೇಳಿ ಆ ಗುಂಪು 'ಹೇಳಿ, ಬೇಗ ಹೇಳಿ' ಎಂದಿತು. ನಾನು 'ನೋಡಿ, ಇಲ್ಲಿ ನನ್ನ ಶ್ರೀಮತಿಯವರು ಬಂದಿದ್ದಾರೆ. ನೋಡಿಮ್ಮಾ, ಮನೇಲಿ ಅವರೇ ಮಾತಾಡೋದು. ಬರೀ ನಾನು ಕೇಳೋದು ಅಷ್ಟೇ. ನಾನಂತೂ ಅಲ್ಲಿ ಮಾತನಾಡೋ ಹಾಗಿಲ್ಲ. ಅವಕಾಶವೇ ಇಲ್ಲ ಅನ್ನಿ, ಆದರೆ ಒಂದೇ ಒಂದು ಅವಕಾಶ ಸಿಕ್ಕಿದೆ ನನಗೆ. ನಾನು ಇಲ್ಲಿ ಮಾತಾಡ್ಬೇಕು. ಇವರು ಅದನ್ನ ಕೇಳ್ಬೇಕು ಅಂತ ಪ್ರತೀಕಾರ ಮಾಡೋದಕ್ಕೆ ಬಂದಿದೀನಿ. ಆ ಅವಕಾಶಾನ ನನ್ನಿಂದ ಕಸಿದುಕೊಳ್ಳಬೇಡಿ. ಇಲ್ಲಂತೂ ಇವರು ಸದ್ದುಮಾಡ್ದೆ ನಾ ಹೇಳೋದನ್ನ ಕೇಳ್ತಾರೆ, ಕೇಳ್ಬೇಕು. ನೀವು ನನಗೆ ಸ್ವಲ್ಪ ಸಹಾಯ ಮಾಡ್ತೀರಾ?' ಎಂದೆ. ಇದು ಪ್ರಭಾವ ಬೀರಿತೆಂದು ಕಾಣುತ್ತದೆ. ಆ ವಿದ್ಯಾರ್ಥಿನಿಯರು 'ಪಾಪ ಕಣೇ, ಮಾತಾಡ್ಲಿ ಬಿಡೇ' ಅಂತಲೋ ಏನೋ ಪರಸ್ಪರ ಮಾತಾಡಿಕೊಂಡು ನನ್ನ ಕಳಕಳಿಯ ಮನವಿಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ಕೊನೆಗೆ 'ನೀವು ಮಾತಾಡಿ ಸಾರ್, ನಾವು ನೋಡ್ಕೋತೀವೆ' ಅಂತ ಧೈರ್ಯ ಕೊಟ್ಟೇಬಿಟ್ಟರು. ಇದೇ ಸಮಯವೆಂದು ನಾನು ಸಂಭ್ರಮದಿಂದ ಭಾಷಣ ಕುಟ್ಟಿ ಮುಗಿಸಿದೆ. ಆ ದಿನ ಮನೆಗೆ ಒಂದಿರುಗಿದ ಮೇಲೆ ಮನೆಯ ವಾತಾವರಣವನ್ನು ತಿಳಿಗೊಳಿಸುವುದು ಸ್ವಲ್ಪ ಕಷ್ಟವೇ ಆಯಿತೆನ್ನುವುದೇನೋ ನಿಜ.

ಸಮಾರಂಭಗಳು ಒಂದೊಂದೂ ಒಂದೊಂದು ವಿಧವಾಗಿರುತ್ತವೆ. ನಾಟಕವಾದರೆ ಮಧ್ಯೆ ಸ್ವಲ್ಪ ನಿಲ್ಲಿಸಿ ಅವಸರವಾಗಿ ಟೇಬಲ್ಲು ಕುರ್ಚಿಗಳನ್ನು ವೇದಿಕೆಯಲ್ಲಿ ಹಾಕಿಸಿ ನಾಟಕದ ಬಗ್ಗೆ ಎರಡು ಮಾತಾಡಲೆಂದು ಮುಖ್ಯ ಅತಿಥಿಗಳನ್ನು ವೇದಿಕೆಯ ಮೇಲೆ ಬರಲು ಕರೆಯುತ್ತಾರೆ. ರಸಿಕರಿಗೋ ಇದು ಒಂದು ರಸಭಂಗದ ಪ್ರಕರಣ. ಅತಿಥಿಗಳು ಹೇಗೋ ಅಲ್ಲಿ ಕುಳಿತು ನಂತರ ಮನಸ್ಸಿಗೆ ಹೊಳೆದ ಒಂದೆರಡು ಮಾತುಗಳನ್ನಾಡಿ ಅವರಿವರನ್ನು ಹೊಗಳಿ, ಶುಭಕೋರಿ ವೇದಿಕೆಯಿಂದ ಇಳಿದು ಬಂದುಬಿಡಬೇಕು. ಇಲ್ಲದಿದ್ದರೆ ಹಿಂದಿನ ಸಾಲಿನಲ್ಲಿ ಕುಳಿತಿರುವ ಯುವಶಕ್ತಿಗಳ ಶಿಳ್ಳೆಗಳಿಗೆ ವಸ್ತುವಾಗಬೇಕಾದೀತು. ಕೆಲವರು ಮಾತ್ರ ಶಿಳ್ಳೆಗಳಿಗೆಲ್ಲಾ ಹೆದರುವ ಪಿಳ್ಳೆಗಳಲ್ಲ. ಅವರು ಅವರ ಮುಖ್ಯತ್ವವನ್ನು ಸ್ಥಾಪಿಸಲು ತೊಡಗಿ ನಾಟಕದ ಉಗಮ, ಬೆಳೆದು ಬಂದ ರೀತಿ ಭಾರತೀಯ ಹಾಗೂ ಪಾಶ್ಚಾತ್ಯ ರಂಗಗಳ ತುಲನ, ಹೀಗೆ ಒಂದು ದೊಡ್ಡ ನಾಟಕವನ್ನೇ ಆರಂಭಿಸಿ ನಾಟಕದವರು ಹಾಕಿರುವ ಬಣ್ಣಗಳೆಲ್ಲ ಕರಗಿ ನೀರಾಗುವ ಪರಿಸ್ಥಿತಿ ಬರುವವರೆಗೂ ಬಿಡುವುದಿಲ್ಲ.

ಎಂತಹ ಸಮಾರಂಭವಾದರೂ ನಿಭಾಯಿಸಿ ಬಿಡಬಹುದು. ಒಂದೇ ಒಂದು ಮಾತ್ರ ನನಗೆ ಕಷ್ಟ. ಅದೆಂದರೆ ಫ್ಯಾಶನ್ ಷೋ. ಅತ್ಯಾಧುನಿಕ ಉಡುಗೆ ತೊಡುಗೆ ಧರಿಸಿ ಅಥವಾ ಧರಿಸದೆ, ಬೆಡಗು ಬಿನ್ನಾಣದಿಂದ ಹೆಜ್ಜೆ ಹಾಕುವ ರಮಣಿಯರ ಬಗ್ಗೆ, ಅವರ ಬೆಡಗಿನ ಪ್ರದರ್ಶನದ ಬಗ್ಗೆ, ವಸ್ತ್ರ ವಿನ್ಯಾಸಗಳ ಬಗ್ಗೆ, ಮುಖ್ಯ ಅತಿಥಿಗಳಾದ ನಮ್ಮಂಥವರು ಏನು ಹೇಳುವುದು? ಅವರ ವಸ್ತ್ರಾಲಂಕಾರಗಳ ಬಗ್ಗೆ ಮಾತನಾಡಿದರೆ ನಗೆಪಾಟಲಾದೀತು. ಈ ಪ್ರದರ್ಶನ ಚೆನ್ನಾಗಿದೆ, ಇದನ್ನು ಎಲ್ಲರೂ ನೋಡಬೇಕು, ಎಲ್ಲರೂ ಹೀಗೆಯೇ ಇರಬೇಕು ಎಂದೂ ಹೇಳಲಾಗುವುದಿಲ್ಲ. ಇವೆಲ್ಲ ನಮ್ಮ ವಯೋಧರ್ಮಕ್ಕೆ ಸರಿಹೊಂದದ ವಿಷಯಗಳು. ಇಂತಹ ಸಮಾರಂಭಗಳನ್ನು ಒಪ್ಪಿ

ಕೊಳ್ಳದೇ ಇರುವುದೇ ಮೇಲಾದರೂ, ಅವರು ಬಿಡಬೇಕಲ್ಲ. ಈ ಸಮಾರಂಭಕ್ಕೆ ನೀವೇ ಸರಿ ಎಂದೆಲ್ಲಾ ಹೇಳಿ ನಾವು ನಮ್ಮ ವಯಸ್ಸನ್ನು ಮರೆಯುವಂತೆ ಮಾಡುವುದರಲ್ಲಿ ಅವರು ಯಶಸ್ವಿಗಯಾಗುತ್ತಾರೆ. ನಾವು ಆ ಸಮಾರಂಭಕ್ಕೆ ಹತ್ತಾರು ವರ್ಷಗಳ ಹಿಂದೆ ಹೊಲಿಸಿಕೊಂಡ ಚೀಲದಂತಹ ಸೂಟನ್ನು ಹಾಕಿಕೊಂಡು ಆ ಆಧುನಿಕ ಲಲನೆಯರ ತಿರಸ್ಕಾರಕ್ಕೆ ಗುರಿಯಾಗಬೇಕಾಗುತ್ತೆದೆ. ಅವರು ನಾವು ಏನನ್ನೂ ನೋಡದವರಂತೆ, ಹಾಗೂ ಎಲ್ಲವನ್ನು ನೋಡಿದವರೆಂಬಂತೆ ಒಂದು ಗಂಭೀರವಾದ, ಸುಖದುಃಖ ಸಮನ್ವಯದ ಮುಖಮುದ್ರೆಯನ್ನು ಧರಿಸಿ ಅಲ್ಲಿ ಕುಳಿತಿದ್ದು ಏನೋ ಒಂದೆರಡು ಮಾತುಗಳನ್ನು ನಡುನಡುವೆ ಫ್ಯಾಶನ್ ಎಂಬ ಪದ ಬರುವಂತೆ ಮಾತನಾಡಿ ಬೆವರೊರೆಸಿಕೊಂಡು ಬಂದು ಬಿಡುವುದಷ್ಟೇ ನಮಗೆ ಉಳಿದಿರುವ ದಾರಿ.

ಬಹುತೇಕ, ಕಾಲೇಜು ಮುಂತಾದ ಸಂಸ್ಥೆಗಳ ಸಮಾರಂಭಗಳು ಸಾಂಪ್ರದಾಯಿಕವಾಗಿರುತ್ತವೆ. ಯಾರೂ ಕೇಳದಿದ್ದರೂ ಭಾಷಣಗಳು. ಕೆಲವೆಡೆ ನೀವೇನೇ ಹೇಳಿದರೂ ಅಲ್ಲಿಯ ಗಲಾಟೆಯ ಶಬ್ದದಲ್ಲಿ ಅದು ಐಕ್ಯವಾಗಿ ವಿಶೇಷವೆಂದೇನೂ ಅನಿಸುವುದಿಲ್ಲ. ಬಹುಮಾನ ವಿತರಣೆಯಲ್ಲಿ ಮಾತ್ರ ನಮ್ಮ ರಟ್ಟೆಯ ಬಲವನ್ನು ಪರೀಕ್ಷಿಸಲಾಗುತ್ತದೆ. ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು. ಬಹುಮಾನ ತೆಗೆದುಕೊಳ್ಳುವಾಗ ಕೆಲವರು ಕೈ ಕುಲುಕುತ್ತಾರೆ. ಕೆಲವರು ಕೈ ಮುಗಿಯುತ್ತಾರೆ. ಇಲ್ಲಿ ಆಗುವ ದುರಂತವೆಂದರೆ ನಾವು ಕೈ ಕುಲುಕಲು ನೋಡಿದಾಗ ಹುಡುಗರು ನಮಸ್ಕಾರ ಮಾಡುತ್ತಾರೆ. ನಾವು ನೀಡಿಕೊಂಡಿರುವ ಕೈಯನ್ನು ಒಂದು ದೇಶಾವರದ ನಗೆಯೊಂದಿಗೆ ಒಂದಕ್ಕೆ ಎಳೆದುಕೊಳ್ಳಬೇಕಾಗುತ್ತದೆ. ಮತ್ತೆ ಮುಂದಿನ ಬಹುಮಾನ ವಿಜೇತ ಬಂದಾಗ ನಾವು ನಮಸ್ಕಾರ ಮಾಡಿಬಿಡುತ್ತೇವೆ. ಆಗ ಆತ ಕುಲುಕಲು ಕೈ ನೀಡುತ್ತಾನೆ. ಆಗ ನಾವು ಅಚಾತುರ್ಯವಾಯಿತಲ್ಲ ಎಂದು ತಕ್ಷಣ ಕೈ ನೀಢಿದಾಗ ಅಷ್ಟರೊಳಗೆ ಅವನು ಕೈ ಹಿಂತೆಗೆದುಕೊಂಡು ನಮಸ್ಕಾರ ಮಾಡುತ್ತಾನೆ. ಮತ್ತೆ ನಾವು ನಮಸ್ಕಾರ ಮಾಡಿದಾಗ ಆತ ಕೈ ನೀಡಿ... ಹೀಗೆ ಒಂದರೆ-ನಿಮಿಷ ನಮ್ಮ ಸರ್ಕಸ್ಸು ನಡೆಯುತ್ತದೆ. ನಂತರ ಇಬ್ಬರೂ ಪೆಚ್ಚಾಗಿ ಸುಮ್ಮನಾಗಬೇಕಾಗುತ್ತದೆ. ಕೆಲವರಂತೂ ನಿರ್ದಾಕ್ಷಿಣ್ಯವಾಗಿ ನಮ್ಮ ಕೈ ಹಿಡಿದು ಎಳೆದು ಫೋಟೋಗೆ ಪೇಸು ಕೊಡುತ್ತಾರೆ. ಅದೊಂದು ಬಲವಂತದ ಪಾಣಿಗ್ರಹಣ.

ಮಹಿಳೆಯರ ವಿಚಾರದಲ್ಲಿ ಈ ಕ್ಲೇಶವಿರುವುದಿಲ್ಲ. ಅವರು ದುಷ್ಟರನ್ನು ಕಂಡರೆ ದೂರ ಇರು ಎಂಬ ನಾಣ್ನುಡಿಯಂತೆ ದೂರದಿಂದಲೇ ನಮಸ್ಕಾರ ಹಾಕಿ ಬಿಡುತ್ತಾರಾದ್ದರಿಂದ ನಮಗೆ ಯಾವ ಮುಜುಗರವೂ ಇಲ್ಲ, ಸಂದಿಗ್ಧತೆಯೂ ಇಲ್ಲ. ಹುಡುಗರ ಹಸ್ತಲಾಘವ ಮಾತ್ರ ನಮ್ಮನ್ನು ಆಗಾಗ ಸಂದಿಗ್ಧತೆಗೆ ಸಿಲುಕಿಸುತ್ತದೆ.

ಅಂತೂ ಸಮಾರಂಭಗಳೆಂದರೆ ಏನಾದರೊಂದು ಮುಜುಗರದ ಅಥವಾ ಮೋಜಿನ ಸನ್ನಿವೇಶವಿದ್ದೇ ಇರುತ್ತದೆ. ಕೈ ಕುಲುಕಾಟವಂತೂ ಮುಖ್ಯ ಅತಿಥಿಗಳನ್ನು ಯಾವುದಾದರೊಂದು ರೀತಿಯಲ್ಲಿ ಪೇಚಿಗೆ ಸಿಲುಕಿಸುತ್ತದೆ. ನಾವು ನಿರೀಕ್ಷಿಸಲು ಸಾಧ್ಯವೇ ಇಲ್ಲದಂತಹ ಒಂದು ಪೇಚಿಗೆ ಒಮ್ಮೆ ಈ ಹಸ್ತಲಾಘವ ನಮ್ಮನ್ನೆಲ್ಲ ಸಿಲುಕಿಸಿದ್ದುದು ನನಗೆ ನೆನಪಿದೆ. ಒಮ್ಮೆ ಒಂದು ಕಾಲೇಜಿಗೆ ಮುಖ್ಯ ಅತಿಥಿಯಾಗಿ ಹೋಗಿದ್ದೆ. ಅದು ಹುಡುಗರ ಕಾಲೇಜು, ನನ್ನ ಸ್ನೇಹಿತರೊಬ್ಬರು ಸಮಾರೋಪ ಭಾಷಣಕಾರರು, ಮತ್ತೊಬ್ಬರು ಬಹುಮಾನ ವಿತರಕರು, ಆ ಕಾಲೇಜಿನ ಪ್ರಿನ್ಸಿಪಾಲರದೇ ಅಧ್ಯಕ್ಷತೆ. ಕಾರ್ಯಕ್ರಮ ಆರಂಭವಾಗಿ ಸ್ವಾಗತ ಮುಂತಾದವುಗಳು ಮುಗಿದವು. ನನ್ನ ಸರದಿ ಬಂದು ನನ್ನ ಭಾಷಣವೂ ಮುಗಿಯಿತು. ನಂತರ ಬಹುಮಾನ ವಿತರಣೆ ಎಂದು ಮೈಕಿನಲ್ಲಿ ಪ್ರಕಟಿಸಿದರು. ನನ್ನ ಮಿತ್ರರಿಗೆ ಏನೋ ಆತಂಕ. ಅವರು ಚಡಪಡಿಸುತ್ತಿದ್ದರು. ಸ್ವಲ್ಪ ಅತ್ತಿತ್ತ ಹೊರಳಿ ಅವರು ಅಧ್ಯಕ್ಷರಿಗೆ ಹೇಳಿದರು, 'ಸ್ವಾಮಿ, ನನ್ನ ಭಾಷಣ ಮುಗಿಸಿಬಿಡ್ತೀನಿ.' ಇವರು ಬೇಗ ಹೋಗಬೇಕಾಗಿದೆ ಎಂದು ತಿಳಿದುಕೊಂಡ ಅಧ್ಯಕ್ಷರು ಕಾರ್ಯಕ್ರಮವನ್ನು ಬದಲಾಯಿಸಿ ಸಮ್ಮತಿಸಿದರು. ಮಿತ್ರರು ಸಂತೋಷದಿಂದ ತಮ್ಮ ಭಾಷಣ ಮುಗಿಸಿದರು. 'ಉಶ್ಶಪ್ಪಾ' ಎಂದು ಕುರ್ಚಿಯಲ್ಲಿ ಕುಳಿತು ನನ್ನ ಕಡೆ ಬಾಗಿ ಹೇಳಿದರು, 'ನೀವೇನೋ ಭಾಷಣ ಮಾಡಿಬಿಟ್ರಿ, ಬಹುಮಾನ ವಿತರಣೆ ಮಾಡಿದ್ಮೇಲೆ ಹುಡುಗರೆಲ್ಲ

ಹೊರಟೇಹೋಗ್ತಾರೆ. ಆಗ ನನ್ ಭಾಷಣ ಯಾರು ಕೇಳೋವ್ರು? ಈಗ ಎಷ್ಟು ಹೊತ್ತು ಬೇಕಾದ್ರೂ ಬಹುಮಾನ ವಿತರಣೆ ಮಾಡ್ಲಿ' ಎಂದು ಹಾಯಾಗಿ ಕುರ್ಚಿಗೆ ಒರಗಿದರು. ಬಹುಮಾನ ವಿತರಣೆ ಆರಂಭವಾಯಿತು. ಬಹುಮಾನ ಕೊಟ್ಟ ಅತಿಥಿಯ ಕೈಯನ್ನು ಕುಲುಕಿದ ಪ್ರತಿಯೊಬ್ಬರೂ ನಮ್ಮೆಲ್ಲರ ಕೈಗಳನ್ನೂ ಕುಲುಕಿದರು. ಒಬ್ಬೊಬ್ಬರು ಆರಾರು ಜನರ ಕೈಗಳನ್ನು ಕುಲುಕಿ ಹೋಗುತ್ತಿದ್ದರು. ಈ ಹಸ್ತಲಾಘವದಿಂದ ನನ್ನ ಮಿತ್ರರಿಗೆ ಕೈ ನೋವು ಬಂದು ಅವರಿಗೆ ನಾನು ಮಹಾನಾರಾಯಣೀ ತೈಲವನ್ನು ಸವರಿ ಬಿಸಿನೀರು ಹಾಕಲು ಹೇಳಿದೆ. ಹೀಗೆ ಕೈ ಕುಲುಕುವ ಕಾರ್ಯಕ್ರಮ ನಡೆಯುತ್ತಿದ್ದಾಗ ಒಮ್ಮೆ ಒಬ್ಬ ಹುಡುಗ ಕೈ ಕುಲುಕುವ ರಭಸದಲ್ಲಿ ಟೇಬಲ್ಲಿನ ಮೇಲೆ ಇಟ್ಟಿದ್ದ ಹೂದಾನಿಯನ್ನು ಉರುಳಿಸಿದ. ಅದನ್ನು ತೆಗೆದು ನಾನು ನೆಲದ ಮೇಲಿಟ್ಟೆ. ಯಾರ ಮನೆಯದೋ ಏನೋ ಪಾಪ. ಟೇಬಲ್ಲಿನ ಮೇಲೆ ನೀರು ಕುಡಿಸಲೆಂದು ಎರಡು ಲೋಟ ನೀರನ್ನು ಇಟ್ಟಿದ್ದರು. ಭಾಷಣದಲ್ಲಿ ಗಂಟಲೊಣಗಿದರೆ ಬೇಕಾಗುತ್ತದೆಯಲ್ಲ? ಆ ಎರಡು ಲೋಟಗಳಲ್ಲಿ ಒಂದನ್ನು ಒಬ್ಬ ಹುಡುಗ ಕೈ ಕುಲುಕುವಾಗ ಉರುಳಿಸಿದ. ಅದರೊಳಗಿದ್ದ ನೀರು ಹರಿದು ನನ್ನ ಪ್ಯಾಂಟಿನ ಮೇಲೆ ಸುರಿಯಿತು. ನಾನು 'ಇನ್ನು ಮುಗಿಯಿತು. ಇದು ಒಣಗುವವರೆಗೆ ಏಳುವಂತಿಲ್ಲ. ಜನ ಏನೆಂದಾರು? ವೇದಿಕೆಯಲ್ಲಿ ಹೆದರಿಕೊಂಡುಬಿಟ್ಟನೇನೋ ಎಂದುಕೊಳ್ಳುವುದಿಲ್ಲವೇ' ಎಂದು ನನ್ನ ಮಿತ್ರರೊಡನೆ ಹೇಳಿದೆ. ಅವರಿಗೆ ಮಾತ್ರ ನನ್ನ ಸ್ಥಿತಿ ನೋಡಿ ಏನೋ ಒಂದು ಅನಿರ್ವಚನೀಯವಾದ ಆನಂದ, ನನ್ನ ಪ್ಯಾಂಟು ನೆನೆಯಿತಲ್ಲ, ಎಂದು. ಆದರೆ ಅವರ ಆನಂದ ಕೇವಲ ಕ್ಷಣಿಕವಾಗಿತ್ತು. ಮುಂದಿನ ಹುಡುಗ ಕೈ ಕುಲುಕುವಾಗ ಎರಡನೆಯ ಗ್ಲಾಸನ್ನು ಉರುಳಿಸಿದ. ಆ ನೀರು ಹರಿದು ನನ್ನ ಮಿತ್ರರ ಪ್ಯಾಂಟನ್ನು ನೆನೆಸಿತು. ನಾನು ಒಂದು ಅನಿರ್ವಚನೀಯವಾದ ಆನಂದವನ್ನು ಅನುಭವಿಸಿದೆ. ಆ ಹುಡುಗನನ್ನು ಮನಸ್ಸಿನಲ್ಲಿಯೇ ಆಶೀರ್ವದಿಸಿದೆ.

ಹೀಗೆ ಪ್ರತಿ ಸಮಾರಂಭದಲ್ಲೂ ಏನಾದರೂ ಒಂದು ಪ್ರಸಂಗ ನಡೆದೇ ತೀರುತ್ತದೆ. ನಾವಂತೂ ನಮ್ಮ ಮುಖ್ಯ ಅತಿಥಿತ್ವವನ್ನು ನಿರ್ವಹಿಸಲೇಬೇಕಾಗುತ್ತದೆ. ಇಂತಹ ಪ್ರಸಂಗಗಳನ್ನು ನೆನಪಿನಲ್ಲಿಟ್ಟುಕೊಂಡು ಮುಂದಿನ ಸಮಾರಂಭಗಳಲ್ಲಿ ನಮ್ಮ ಭಾಷಣಗಳಲ್ಲಿ ಅವುಗಳನ್ನೇ ಉಪಯೋಗಿಸಿಕೊಂಡು ಬಿಡಬಹುದು.

ಸಮಾರಂಭಗಳೆಲ್ಲ ಒಂದು ಮನೋಭಾವದ ಪ್ರತಿಬಿಂಬಗಳು. ಸಮಾರಂಭಗಳಲ್ಲಿ ಏನೋ ಒಂದು ಉತ್ಸಾಹ, ಹೆಮ್ಮೆ, ಛಲ ಎಲ್ಲ ಇರುತ್ತದೆ. ಮುಖ್ಯ ಅತಿಥಿಗಳು ಇಬ್ಬರು ಇರಬೇಕು. ಒಬ್ಬರು ಬರದಿದ್ದರೂ ಮತ್ತೊಬ್ಬರು ಇರುತ್ತಾರಲ್ಲ ಎಂದು. ಈ ಸಂಭ್ರಮದಲ್ಲಿ ರಸ, ವಿರಸ ಎಲ್ಲ ಇರುತ್ತದೆ. ಅಂತೂ ಇದೊಂದು ವಿಶೇಷವಾದ ಅನುಭವ. ಈ ಅನುಭವಕ್ಕೋಸ್ಕರ ಮುಖ್ಯ ಅತಿಥಿಯಾಗಲು ನಿಮ್ಮನ್ನು ಕರೆದಾಗ ನೀವು ಒಪ್ಪಿಕೊಂಡು ಬಿಡಬೇಕು. ಅಲ್ಲಿಯ ಅನುಭವದ ಬಗ್ಗೆ ನಿಮಗೆ ಒಂದು ಪುಸ್ತಕ ಬರೆಯಲು ಅನುಕೂಲವಾಗುತ್ತದೆ, ಅಥವಾ ಒಂದು ಲೇಖನವನ್ನಾದರೂ ಬರೆಯಲು ಅನುಕೂಲವಾಗುತ್ತದೆ. ●



"ನೋಯಿಸದ ಅಪ್ರಿಯ ಸಂಗತಿಗಳನ್ನು ಹೇಳಬಲ್ಲ ಜನರಲ್ಲಿ ನನ್ನನ್ನು ನನ್ನ ಮೊದಲನೇ ನೌಕರಿಯಿಂದ ತೆಗೆದುಹಾಕಿದ ಮಹಾನುಭಾವನಂಥವರು ಬೇರೆ ಸಿಗಲಿಕ್ಕಿಲ್ಲ" ಎಂದೊಬ್ಬ ದೊಡ್ಡ ಕಾರ್ಖಾನೆ ಮಾಲಿಕರು ಹೇಳುತ್ತಾರೆ. ಒಂದು ದಿನ ಆ ಮನುಷ್ಯ ನನ್ನನ್ನು ತನ್ನ ಕೋಣೆಗೆ ಕರೆಸಿಕೊಂಡು ಹೀಗೆ ಹೇಳಿದ. 'ನೀನು ಇಲ್ಲದಿದ್ದರೆ ಈ ಆಫೀಸಿನ ಕೆಲಸ ಹೇಗೆ ನಡೆದೀತೋ ಎಂದು ಚಿಂತೆ ಯಾಗಿದೆ ನಮಗೆ. ಆದರೂ ನಾವದನ್ನು ಒಂದನೇ ತಾರೀಖಿನಿಂದ ಪ್ರಯತ್ನಿಸಿ ನೋಡಬೇಕೆಂದು ನಿರ್ಧರಿಸಿದ್ದೇವೆ.'

ಪುಸ್ತಕ ವಿಭಾಗ




# ಭವಾಲ ಸಂನ್ಯಾಸಿ

ಸಂಗ್ರಾಹಕ: ನೆಗಳೂರು ರಂಗನಾಥ

**'ಭವಾಲ ಸಂನ್ಯಾಸಿ ಪ್ರಕರಣ'ವೆಂದೇ ಹೆಸರಾದ ಮೊಕದ್ದಮೆಯ ವಿವರಗಳನ್ನು ಓದುವಾಗ "ನಂಬಿದರೆ ನಂಬಿ, ಬಿಟ್ಟರೆ ಬಿಡಿ"ಯಂತಹ ವರದಿಗಳ ನೆನಪಾಗುತ್ತವೆ. ಇದು ಇಬ್ಬರು ವ್ಯಕ್ತಿಗಳ ದೃಢ ನಂಬಿಕೆಗಳಲ್ಲಿ ದಿಟ ಯಾವುದು ಎಂಬುದನ್ನು ನಿರ್ಧರಿಸಲು ದೇಶದ ಸರ್ವೋಚ್ಚ ನ್ಯಾಯಾಲಯದವರೆಗೂ ನಿಕರದ ಹೋರಾಟ ನಡೆಯಿತು. *1959* ಫೆಬ್ರವರಿ 'ಕಸ್ತೂರಿ'ಯು ತನ್ನ ಪುಸ್ತಕ ವಿಭಾಗದಲ್ಲಿ ಈ ಪ್ರಕರಣವನ್ನು ಆಮೂಲಾಗ್ರ ಪ್ರಕಟಿಸಿತು. ನಿಮಗಾಗಿ ಅದನ್ನು ಪುನಃ ಎತ್ತಿ ತಂದಿದ್ದೇವೆ.**

**(1959ರ ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾದದ್ದು.)**

ನಮ್ಮ ದೇಶದ ನ್ಯಾಯಾಲಯಗಳಲ್ಲಿ ನಡೆದ ಅನೇಕ ಮಹತ್ವದ ದಾವೆಗಳಲ್ಲಿ ಭವಾಲ ಸಂನ್ಯಾಸಿಯ ದಾವೆಯೂ ಒಂದು. ಜನಸಾಮಾನ್ಯರ ಮನವನ್ನು ಸೆಳೆದು ವರ್ಷಾನುಗಟ್ಟಲೆ ಆಕರ್ಷಣೆಯನ್ನು ಇಟ್ಟುಕೊಂಡಂಥ ದಾವೆಯಿದು. 1930ರಲ್ಲಿ ದಾಖಲು ಆದ ದಾವೆಯು ಮೂಲತಃ ಮೂರು ಸಲ ನಂಬರು ಪಡೆದು ಕೊನೆಗೆ ಮೂಲ ದಾವೆಯು 1936ರಲ್ಲಿ ನಿಕಾಲೆ ಆಯಿತು.

ನಂತರ ಕಲಕತ್ತಾ ಹಾಯ್‌ಕೋರ್ಟಿನಲ್ಲಿ ಅಪೀಲು ಆಗಿ 1940ರಲ್ಲಿ ನಿರ್ಣಯಿಸಲ್ಪಟ್ಟಿತು. ಆದರೆ ದಾವೆಯು ಮುಂದೆ ಪ್ರಿವಿ ಕೌನ್ಸಿಲ್‌ದವರೆಗೆ ಹೋಗಿ ಅಲ್ಲಿ ಕೊನೆಯ ನಿರ್ಣಯವು 1946 ರಲ್ಲಿ ಕೊಡಲ್ಪಟ್ಟಿತು.

ಕೇವಲ ಹದಿನಾರು ವರುಷಗಳವರೆಗೆ ನಡೆದ ವ್ಯವಹರಣೆ ಎನ್ನುವದು ಅದರ ಮಹತ್ವವಲ್ಲ. ಹಾಗೆ ನೋಡಿದರೆ ನಾಲ್ವತ್ತು, ಐವತ್ತು ವರುಷಗಳವರೆಗೆ ನಡೆದ, ತಲೆಮಾರುಗಳ ಜನ ಪಕ್ಷಕಾರರಾದ ದಾವೆಗಳು ಸಾಕಷ್ಟು ನೋಡಲು ದೊರೆಯುತ್ತವೆ. ಇದರ ಮಹತ್ವವು ಇದರಲ್ಲಿ ಅಡಕವಾದ ವಿಷಯದಲ್ಲಿದೆ. ಸಂನ್ಯಾಸಿಯೊಬ್ಬನು ತಾನು ಒಂದು ರಾಜಮನೆತನದವನೆಂದು ಪ್ರಸ್ತಾಪಿಸಿ ತಾನು ಆ ಮನೆತನದ ಆಸ್ತಿಯ ಮೂರರಲ್ಲೊಂದು ಅಂಶಕ್ಕೆ ವಾರಸುದಾರನೆಂದು ದಾವಾ ಮಾಡಿದ್ದನು.

ಸಂನ್ಯಾಸಿಗೆ ಸಂಸಾರದ ಮೋಹವೇಕೆ? ಎಂದು ಯಾರಾದರೂ ಕೇಳಬಹುದು. ಸಂನ್ಯಾಸದೀಕ್ಷೆ ತೆಗೆದುಕೊಂಡವರು ಕೂಡ ಸಂಸಾರದ ವ್ಯಾಮೋಹಗಳಿಗೆ ಒಳಪಟ್ಟುದುಂಟು. ಆದರೆ ಈ ದಾವೆಯಲ್ಲಿಯ ವಾದಿಯಾದ ಸಂನ್ಯಾಸಿಯು ಹಾಗೆ ದೀಕ್ಷೆ ತೆಗೆದುಕೊಂಡ ವಿರಕ್ತನಲ್ಲ. ಸಂನ್ಯಾಸಿಗಳ ಒಡನಾಟದಲ್ಲಿ ಹನ್ನೆರಡು ವರ್ಷ ಕಳೆಯಬೇಕಾಗಿ ಬಂದು ಸಂನ್ಯಾಸಿಯ ವೇಷಭೂಷಣದ ಆವರಣ ಬಂದ ಸಂನ್ಯಾಸಿ. ಸಂನ್ಯಾಸಿಯಾಗಿದ್ದವನು ತಾನು ಭವಾಲ ರಾಜ್ಯದ ಎರಡನೆಯ ಕುಮಾರ ರಾಮೇಂದ್ರ ನಾರಾಯಣ ರಾಯನೇ ಎಂದು ಹೇಳಿಕೊಳ್ಳತೊಡಗಿದಾಗ ಜನರಿಗೆ ಅತ್ಯಾಶ್ಚರ್ಯವಾಯಿತು. ಏಕೆಂದರೆ ಎರಡನೆಯ ಕುಮಾರ ರಾಮೇಂದ್ರ ನಾರಾಯಣ ರಾಯನು 1909ರಲ್ಲಿ ತೀರಿಕೊಂಡಿದ್ದನು. ಸತ್ತ ರಾಜಕುಮಾರನು ಸಂನ್ಯಾಸಿಯಾಗಿ ಬರುವದೆಂದರೇನು? ಅದೇ ಆಶ್ಚರ್ಯಕ್ಕೆ ಕಾರಣ, ಅದೇ ಈ ದಾವೆಯ ಮೂಲ.

ಭವಾಲ ರಾಜ್ಯವು ಉತ್ತರ ಭಾರತದ ಬಂಗಾಲ ಪ್ರಾಂತದಲ್ಲಿಯ ಢಾಕಾ ಮತ್ತು ಮೈಮನಸಿಂಗ ಜಿಲ್ಲೆಗಳಲ್ಲಿ ಹಬ್ಬಿಕೊಂಡಿದೆ. ಈ ರಾಜ್ಯದ ವಿಸ್ತಾರವು ಸುಮಾರು 600 ಚದರು ಮೈಲು. ಆಗಿನ ಕಾಲದಲ್ಲಿ ಈ ರಾಜ್ಯದಿಂದ ಲಾವಣಿ ಹಣವೆಂದು ಸುಮಾರು ಏಳು ಲಕ್ಷ ರೂಪಾಯಿ ವಾರ್ಷಿಕವಾಗಿ ಬರುತ್ತಿತ್ತು. ಭವಾಲ ರಾಜಮನೆತನದವರು ಆ ಭಾಗದಲ್ಲಿಯೇ ಅತಿ ದೊಡ್ಡ ಒಂದು ಜಮೀನುದಾರರು. ಡಾಕಾದಿಂದ ಸುಮಾರು 15-20 ಮೈಲು ಅಂತರದ ಮೇಲೆ ಇರುವ ಜಯದೇವಪುರ ಎಂಬುದು ಈ ರಾಜಮನೆತನದ ನಿವಾಸಸ್ಥಾನವಾಗಿತ್ತು. ಜಯದೇವಪುರದಲ್ಲಿಯ ನಿವಾಸವು ಅರಮನೆಯೆಂದು ಕರೆಯಲ್ಪಡುತ್ತಿತ್ತಲ್ಲದೆ ಅದರ ಆವಾರವೆಲ್ಲವೂ ರಾಜವಾಡಿ ಎಂಬ ಹೆಸರಿನಿಂದ ಗುರುತಿಸಲ್ಪಡುತ್ತಿತ್ತು.

ಭವಾಲ ರಾಜಮನೆತನದ ಮೂಲ ಪುರುಷನು ಕೃಷ್ಣ ನಾರಾಯಣ ರಾಯನೆಂಬುವನು. ಅವನಿಂದ ಆರು ತಲೆಮಾರಿನವನಾದ ಕಾಲಿ ನಾರಾಯಣರಾಯನಿಗೆ ಮೂವರು ಹೆಂಡಂದಿರು. ಕಿರಿಯ ಹೆಂಡತಿಯಾದ ಸತ್ಯಭಾಮಾದೇವಿಯಿಂದ ಇಬ್ಬರು ಮಕ್ಕಳು-ಮಗ ರಾಜೇಂದ್ರ ನಾರಾಯಣರಾಯ ಮತ್ತು ಮಗಳು ಕೃಪಾಮಯೀದೇವಿ. ರಾಜೇಂದ್ರ ನಾರಾಯಣನ ಹೆಂಡತಿ ರಾಣಿ ವಿಲಾಸಮಣಿ ದೇವಿ ಎಂಬವಳು. ಈ ದಂಪತಿಯಿಂದ ಮೂರು ಕುಮಾರರು, ಮೂರು ಕುಮಾರಿಯರು ಹುಟ್ಟಿದರು. ರಾಜೇಂದ್ರ ನಾರಾಯಣನು ಮೊದಲನೆಯ ಕುಮಾರನು. ರಾಮೇಂದ್ರ ನಾರಾಯಣನು ಎರಡನೆಯ ಕುಮಾರನು. ರವೀಂದ್ರ ನಾರಾಯಣನು ಮೂರನೆಯ ಕುಮಾರನು. ಇಂದುಮಯಿ ದೇವಿ, ಜ್ಯೋತಿರ್ಮಯಿದೇವಿ ಮತ್ತು ತಾರಿಣ್ಮಯಿದೇವಿ ಎಂಬುವರು ಕುಮಾರಿಯರು. ಕುಮಾರ ಕುಮಾರಿ ಎಂಬುದು ರಾಜಮನೆತನದವರೆಂದು ಸೂಚಿಸುವುದಕ್ಕಾಗಿ ಎಂಬುದನ್ನು ನೆನೆಯಬೇಕು. ರಾಜೇಂದ್ರ ನಾರಾಯಣನ ಎರಡನೆಯ ಕುಮಾರನಾದ ರಾಮೇಂದ್ರ ನಾರಾಯಣ ರಾಯನೇ ತಾನೆಂದು ಭವಾಲ ಸಂನ್ಯಾಸಿಯ ವಾದ.

ರಾಜೇಂದ್ರ ನಾರಾಯಣನು 1901ರಲ್ಲಿ ತೀರಿಕೊಂಡ ನಂತರ ಮೂವರು ಕುಮಾರರೇ ಮನೆತನದ ವಾರಸುದಾರರಾದರು. ತಂದೆ ತೀರಿದ ಮೇಲೆಯೂ ಕುಮಾರರು ಅವಿಭಕ್ತ ಕುಟುಂಬವಾಗಿಯೇ ಉಳಿದರು. ಕುಮಾರಿಯರು ಮದುವೆ ಮಾಡಿಕೊಂಡ ಮೇಲೆಯೂ ಮನೆಯಲ್ಲಿಯೇ ಉಳಿದಿದ್ದರು. ಮನೆತನದ ಹಿರಿಯರೆಂದರೆ ಕುಮಾರರ ಅಜ್ಜಿಯಾದ ರಾಣಿ ಸತ್ಯಭಾಮಾದೇವಿ. ಸತ್ಯಭಾಮಾದೇವಿಯ ಮಗಳು ಕೃಪಾಮಯಿ ಕೂಡ ತನ್ನ ಗಂಡನೊಂದಿಗೆ ಇವರ ಜತೆಯಲ್ಲಿಯೇ ರಾಜವಾಡೆಯಲ್ಲಿದ್ದರೂ ಬೇರೆ ಬಿಡಾರ ಮಾಡಿಕೊಂಡಿದ್ದಳು. ರಾಜಾ ರಾಜೇಂದ್ರ ನಾರಾಯಣ ರಾಯನು ತೀರಿಕೊಂಡಾಗ ಕುಮಾರರ ವಯಸ್ಸು 19, 17, 14 ಹೀಗೆ ಇದ್ದಿತು.

ಭವಾಲ ರಾಜ್ಯವು ವಿಸ್ತಾರದಲ್ಲಿ ವಿಶಾಲವಾಗಿದ್ದಂತೆ ವೈಭವದಲ್ಲಿಯೂ ಭವ್ಯವಾಗಿದ್ದಿತು. ರಾಜವಾಡೆಯಲ್ಲಿ ಅಶ್ವಶಾಲೆ, ಗಜಶಾಲೆಗಳು, ಗರಡೀಮನೆ, ನಾಟ್ಯ ಮಂದಿರಗಳು, ಬೇರೆ ಬೇರೆ ವಿಭಾಗಗಳ ವ್ಯವಸ್ಥಾಪಕರಲ್ಲದೆ, ಆಸ್ಥಾನದ ಸಂಗೀತಗಾರರು, ಶಿಕ್ಷಕರು, ಮಲ್ಲರು, ವೈದ್ಯರು, ಪುರೋಹಿತರು, ಆಳುಗಳು ಮುಂತಾಗಿ ನೂರಾರು ಜನರು ಕೆಲಸಗಾರ ಆಶ್ರಿತರು ಇದ್ದರು. ವ್ಯವಸ್ಥೆಯು ರಾಜಮನೆತನಕ್ಕೆ ತಕ್ಕಂತೆ ಶೋಭಿಸುತ್ತಿತ್ತು.

ರಾಜಮನೆತನದಲ್ಲಿ, ಶ್ರೀಮಂತ ಮನೆತನಗಳಲ್ಲಿ ಯಾವುದಕ್ಕೂ ಕೊರತೆಯಿಲ್ಲ. ಕೈಗೊಬ್ಬರಂತೆ ಆಳು, ಕೆಲಸಕ್ಕೊಬ್ಬ, ಕಾರಕೂನ, ಹೀಗಾಗಿ ಮನೆತನದ ಮಾಲಕರಿಗೆ ಯಾವ ಕೆಲಸವನ್ನು ಮಾಡುವ ಪ್ರಸಂಗವೇ ಬರುವುದಿಲ್ಲ. ಜಾಗರೂಕತೆ ಮತ್ತು ಸಮಯೋಚಿತ ಮೇಲ್ವಿಚಾರಣೆ ನಡೆಸಿದರೆ ಸಾಕು, ಎಂಬಷ್ಟು ಅನುಕೂಲತೆ ಇರುವುದು. ಆದರೆ, ವೈಭವದ ಜತೆಯಿರುವ ವಿಲಾಸೀ ಮನೋವೃತ್ತಿ ಬೆಳೆಯಲು ಅಸ್ಪದವೂ ಇರುವುದು. ಶಿಕ್ಷಣ ಸೌಕರ್ಯ ಸಾಕಷ್ಟಿದ್ದರೂ ಕಲಿಯಬೇಕೆಂಬ ಮನಪ್ರವೃತ್ತಿ ಇಲ್ಲದಿದ್ದರೆ, ಶಿಕ್ಷಕನು ರಾಜವೈಭವದ ವ್ಯವಸ್ಥೆಯ ಗುರುತು ಆಗುವನೇ ಹೊರತು ಗುರುವು ಆಗುವುದಿಲ್ಲ. ಮೂವರು ಕುಮಾರರಿಗೆ ಯೋಗ್ಯ ಶಿಕ್ಷಣ ಕೊಡಲು ಶಿಕ್ಷಕರು, ಇಂಗ್ಲಿಷ್ ಶಿಕ್ಷಕರು ಕೂಡ ಇದ್ದರು. ಕುಮಾರರಿಗೆ ಯಾವ ಪ್ರಯೋಜನವೂ ಆಗದೆ, ಅವರು ತಮ್ಮದೇ ಆದ ರೀತಿಯಲ್ಲಿ ವಿಲಾಸೀ ಜೀವನ ನಡೆಸಿದರು. ಮುಖ್ಯವಾಗಿ ಎರಡನೆಯ ಕುಮಾರನಂತೂ ಯಾವ ಮಿತಿಯಿಲ್ಲದಂತೆ ತಾರುಣ್ಯೋತ್ಸಾಹದಲ್ಲಿ ಕಾಲ ಕಳೆಯತೊಡಗಿದನು. ಅಜ್ಜಿ ಸತ್ಯಭಾಮಾದೇವಿಯು ಯಾವುದನ್ನೂ ತಡೆವ ಸ್ಥಿತಿಯಲ್ಲಿರಲಿಲ್ಲ. ಮದುವೆ ಮಾಡಿದರೆ ಮಾರ್ಗಕ್ಕೆ ಹತ್ತುವನೆಂಬ ಸಾಂಪ್ರದಾಯಿಕ ತಿಳಿವಳಿಕೆಯಿಂದ ಎರಡನೆಯ ಕುಮಾರ ರಾಮೇಂದ್ರ ನಾರಾಯಣನ ಮದುವೆಯನ್ನು ವಿಭಾವತಿ ದೇವಿಯೊಡನೆ 1902ರಲ್ಲಿ ಮಾಡಿದರು. ಸಕಲ ಬಗೆಯಲ್ಲಿ ಸ್ತ್ರೀ ಸಹವಾಸದ ಸವಿಗಂಡ ಕುಮಾರನು, ಮದುವೆಯಿಂದ ತನ್ನ ಹಳೆಯ ಹವ್ಯಾಸಗಳನ್ನು ಬಿಡಲಿಲ್ಲ. ಮನೆಯಲ್ಲಿದ್ದು, ಮನೆತನಸ್ಥ ರೀತಿಯಲ್ಲಿ ಬಾಳಿದರೆ ಮದುವೆಯ ಹೆಂಡತಿಯಿಂದ ಪ್ರಯೋಜನ. ಸುಖ ವಿಲಾಸಗಳಿಗಾಗಿ ಊರು ಅಲೆದರೆ, ಊರಿಗೊಂದು "ಮನೆ" ಮಾಡುವ ವೃತ್ತಿಯನ್ನು ಬೆಳೆಯಿಸಿಕೊಂಡರೆ ಹೆಂಡತಿ ಹೆಸರಿಗೆ ಮಾತ್ರ. ಅದರಂತೆಯೇ ಆಗಿ ಎರಡನೆಯ ಕುಮಾರನು 'ಹೊರಚಾಳಿ'ಯಿಂದ ಹೆಂಡತಿಗ

ಏರವಾಗಿ ಸೂಳೆಯರ, ಕಸುಬೆಯರ ಸಹವಾಸದಲ್ಲಿ ಕಾಲ ಕಳೆಯತೊಡಗಿದನು. ದಾಂಪತ್ಯ ಜೀವನವೇ ಇಲ್ಲದಂತಾಗಿ ಹೆಂಡತಿ ಗಾಸಿಯಾದಳು. ಗಂಡನಿಗೆ ಅಂಟಿದ ಮೇಹರೋಗ-ಉಪದಂಶ ಗಳ ಮೂಲಕ ಗಂಡನ ಸಹವಾಸವೇ ಅವಳಿಗೆ ಬೇಡವಾಗಿ ಅವನ ಬಗ್ಗೆ ಜಿಗುಪ್ಸೆ ಉಂಟಾಗ ತೊಡಗಿತು. ವಿಲಾಸೀ ಜೀವನಕ್ಕಾಗಿ ರಾಮೇಂದ್ರ ನಾರಾಯಣನು ಸಾವಿರಾರು ಗಟ್ಟಲೆ ಹಣವನ್ನು ಹಾಳುಮಾಡತೊಡಗಿದನು.

ಮೇಹರೋಗಗಳ ಉಲ್ಬಣಾವಸ್ಥೆಯ ಮೂಲಕ ಮೈಮೇಲೆ ಹುಣ್ಣುಗಳಾಗಿ ಮನಸ್ಸಿನ ನೆಮ್ಮದಿ ಕಡಿಮೆಯಾಗಿ ಆಗಾಗ ರುದ್ರಾವತಾರ ತಾಳುವಂತಾಯಿತು. ಹೀಗಿರುತ್ತಿರುವಾಗ 1908ರಲ್ಲಿ ಕುಮಾರರ ತಾಯಿ ರಾಣಿ ವಿಲಾಸಮಣಿ ದೇವಿ ತೀರಿಕೊಂಡಳು. ಆಗಂತೂ ಕುಮಾರರಿಗೆ ಕಡಿವಾಣ ವಿಲ್ಲದಾಯಿತು. ತಂದೆ ತಾಯಿ ಇಬ್ಬರೂ ತೀರಿಕೊಂಡರು. ಅಜ್ಜಿ ಸತ್ಯಭಾಮಾದೇವಿಗೆ ಏನೂ ಮಾಡಲು ಸಾಧ್ಯವಿಲ್ಲದಾಯಿತು. ಆದ್ದರಿಂದ ರಾಜಮನೆತನದ ಆಸ್ತಿಯು ಕುಮಾರರ ವಿಲಾಸೀ ಜೀವನದ ಮೂಲಕ ಹಾಳಾಗತೊಡಗಿತು. ವಿಲಾಸೀ ಜೀವನದ ಹೊರಚಾಳಿಗಳ ಮೂಲಕ ಮನೆ ಯಲ್ಲಿ ದಾಂಪತ್ಯ ಜೀವನವಿಲ್ಲದೆ ಸಂತತಿಹೀನ ಸಂಸಾರವಾಯಿತು.

ಇಂತಹ ವಿಲಾಸೀ ವೃತ್ತಿಯುಳ್ಳ ಎರಡನೆಯ ಕುಮಾರನು ಸಂನ್ಯಾಸಿಯಾದುದು ಹೇಗೆ? ಮೇಲಾಗಿ ಸಂನ್ಯಾಸಿಯಾಗಿ ಉದಯವಾದವನು ಮೊದಲು ಸತ್ತಿದ್ದನಂತೆ! ಏನಿದು ವಿಚಿತ್ರ! ಮಾನವ ಜೀವನದಲ್ಲಿ ನಡೆಯುವ ಸಂಗತಿಗಳನ್ನು ಸಾಲಾಗಿರಿಸಿ ನೋಡಿದಾಗ ಅವುಗಳಿಗೆ ಒಂದು ಅರ್ಥ ಮತ್ತು ಸುಸಂಬದ್ಧತೆ ಕಾಣುವುದು. ಅದೂ ಹಿನ್ನೋಟ ತೆಗೆದುಕೊಂಡಾಗ. ಇಲ್ಲದಿದ್ದ ನಿತ್ಯಜೀವನದ ಆಗುಹೋಗುಗಳು ಸಾಮಾನ್ಯವಾಗಿ ಯಾರ ಲಕ್ಷ್ಯಕ್ಕೂ ಬರುವುದಿಲ್ಲ. ರಾಜವಾಡೆ ಹಿರಿಯರಿಲ್ಲದ ಮನೆ, ಗುರುವಿಲ್ಲದ ಮಠದಂತೆ ಆಗಿ, ಕಂಡವರು ಕೈಹಾಕುವಂತಾಯಿತು. ಆಗ ಎರಡನೆಯ ಕುಮಾರನ ಹೆಂಡತಿಯಾದ ರಾಣಿ ವಿಭಾವತಿದೇವಿಯ ಅಣ್ಣನಾದ ಸತ್ಯೇಂದ್ರನಾಥ ಬ್ಯಾನರ್ಜಿ ಎಂಬವನು ರಾಜವಾಡೆಯಲ್ಲಿ ಬಂದು ಇರತೊಡಗಿದನು. ಅಲ್ಲಿಯ ಅನವಸ್ಥೆ, ಕುಮಾರನ ವಿಲಾಸೀವೃತ್ತಿ, ಅವರ ಸಂತತಿಹೀನ ದಾಂಪತ್ಯ ಜೀವನ ದೊಡ್ಡ ಆಸ್ತಿ, ಬೇಕಾದಷ್ಟು ದೊರೆವ ಹಣ, ಕುಮಾರರ ವ್ಯವಹಾರಶೂನ್ಯತೆ, ಇವು ಎಲ್ಲ ಸತ್ಯೇಂದ್ರನಾಥನಿಗೆ ಯಾವುದೋ ಆಮಿಷ ತೋರಿದವು. ಸತ್ಯೇಂದ್ರನಾಥನು ಪದವೀಧರನು, ಕಾಯದೆಯ ವಿದ್ಯಾರ್ಥಿ ಬೇರೆ. ರಾಜವಾಡೆಗೆ ಬಂದು ಅಲ್ಲಿಯ ಬಂಧು-ಬಾಂಧವರ ವಿಶ್ವಾಸ ಗಳಿಸಿದನು.

ವಿಭಾವತಿದೇವಿಯ ಅಣ್ಣನಾಗಿದ್ದ ಕಾರಣದಿಂದ ಸತ್ಯೇಂದ್ರನಾಥನು ಎರಡನೆಯ ಕುಮಾರ ರಾಮೇಂದ್ರನ ಸಮೀಪದವನಾದನು. ರಾಮೇಂದ್ರನ ಮೇಹರೋಗಕ್ಕೆ ಚಿಕಿತ್ಸೆ ಮಾಡಿಸಲು ಅವನನ್ನು ಕಲಕತ್ತೆಗೆ ಕರೆದುಕೊಂಡು ಹೋದ ಗುಂಪಿನಲ್ಲಿಯೂ ಸತ್ಯೇಂದ್ರನು ಇದ್ದನು. ಹವೆ ಬದಲಾಯಿಸಿದರೆ ಬೇನೆ ಗುಣವಾಗುವುದೆಂದು ಎರಡನೆಯ ಕುಮಾರನ ತಲೆಯಲ್ಲಿ ತುಂಬಿ ಡಾರ್ಜಿಲಿಂಗಕ್ಕೆ ಹೋಗಿ ವಾಸ ಮಾಡಲು ತಯಾರಿ ಮಾಡಿಸಿದನು. ಡಾರ್ಜಿಲಿಂಗದಲ್ಲಿಯ ವಾಸನಿವಾಸದ ವ್ಯವಸ್ಥೆಯನ್ನು ಸತ್ಯೇಂದ್ರನೇ ಮಾಡಿದನು. ಡಾರ್ಜಿಲಿಂಗದಲ್ಲಿಯ ಮನೆಯು ಚಿಕ್ಕದಾಗಿರುವುದರಿಂದ ಅನಾವಶ್ಯಕ ಜನರು ಯಾರೂ ಬರುವ ಅಗತ್ಯವಿಲ್ಲೆಂದು ಸೂಚಿಸಿ, ಪರ್ಯಾಯವಾಗಿ ಮನಗಾಣಿಸಿ, ಅವಶ್ಯಕ ಸಿಬ್ಬಂದಿಯೊಡನೆ ಎರಡನೆಯ ರಾಜಕುಮಾರ ರಾಮೇಂದ್ರನು ತನ್ನ ರಾಣಿ ವಿಭಾವತಿದೇವಿಯೊಬ್ಬಳೊಡನೆ ತನ್ನ ಕಣ್ಗಾರಿಕೆಯಲ್ಲಿ ವಿಶ್ರಾಂತಿ-ಶುಶ್ರೂಷೆ ಪಡೆಯುವದಕ್ಕೆಂದು ಡಾರ್ಜಿಲಿಂಗಕ್ಕೆ ಬರುವಂತೆ ಮಾಡಿದನು. 1909 ಏಪ್ರಿಲ್ 20ಕ್ಕೆ ಎರಡನೆಯ ಕುಮಾರ ರಾಮೇಂದ್ರನು ತನ್ನ ಹೆಂಡತಿ ವಿಭಾವತಿದೇವಿ, ಅವಳ ಅಣ್ಣ ಸತ್ಯೇಂದ್ರ ಡಾ. ಆಶುತೋಷ ಕಾರ್ಯದರ್ಶಿ ವೀರೇಂದ್ರ ಆದಿಯಾಗಿ ಸುಮಾರು 25 ಜನರು ಬಂದರು. ಅಲ್ಲಿಯ ಮನೆಯಾದ Step Aside ದಲ್ಲಿ ಇರಲಾರಂಭಿಸಿದರು.

ಹವೆ ಬದಲಾಯಿಸಲಿಕ್ಕೆ ಬಂದ ರಾಮೇಂದ್ರನಿಗೆ ಉಪದಂಶ (Syphilils) ದ ಹೊರತು ಬೇರೆ ಯಾವ ಬೇನೆಯಿರಲಿಲ್ಲ. ಆದರೆ ಮುಂದೆ 14-15 ದಿನಗಳುರುಳುವಷ್ಟರಲ್ಲಿ ಅವನ ಪರಿಸ್ಥಿತಿಯು ಹದಗೆಟ್ಟು, 1909ರ ಮೇ 8ನೆಯ ದಿನಾಂಕ ಎರಡನೆಯ ಕುಮಾರ ರಾಮೇಂದ್ರನು ತೀರಿ



ಎರಡನೇ ಕುಮಾರ ರಾಮೇಂದ್ರ ನಾರಾಯಣ



ಸಂನ್ಯಾಸಿ ರಾಮೇಂದ್ರ ನಾರಾಯಣ

ಕೊಂಡನೆಂದೂ, ಅವನ ದಹನ ಕ್ರಿಯೆಯು ಅಂದೇ ರಾತ್ರಿ ನಡೆಯಿತೆಂದೂ ವಾರ್ತೆ ಎಲ್ಲೆಡೆಗೂ ಪಸರಿಸಿತು. ಸತ್ತ ಸುದ್ದಿಯನ್ನು 9ಕ್ಕೆ ಜಯದೇವಪುರಕ್ಕೆ ತಂತಿಯಿಂದ ತಿಳಿಸಲಾಯಿತು. ಎರಡನೆಯ ಕುಮಾರನ ಜೊತೆಗೆ ಬಂದ ಜನರೆಲ್ಲರೂ ಮೇ 10ಕ್ಕೆ ಜಯದೇವಪುರಕ್ಕೆ ಹೊರಟುಬಿಟ್ಟರು. ಜಯದೇವಪುರದಲ್ಲಿಯ ಜನಕ್ಕೆ ಎರಡನೆಯ ಕುಮಾರನ ಮರಣದ ವಾರ್ತೆಯು ಒಂದು ಆಘಾತವನ್ನುಂಟು ಮಾಡಿತು. ರಾಜವಾಡೆಯಲ್ಲಿಯ ಸಂಬಂಧಿಕರು ಮಾತ್ರ ಸತ್ಯೇಂದ್ರನ ಬಗ್ಗೆ ಸಂಶಯ ತಾಳಿದರು.

ರಾಜಕುಮಾರನು ಸತ್ತರೆ ಯಾವ ರೀತಿಯಲ್ಲಿ ಶ್ರಾದ್ಧ ವಿಧಿಗಳು ನಡೆಯಬೇಕೊ ಹಾಗೆ ನಡೆಯದೆ, ಕಾಟ ತೀರಿಸುವಂತೆ ಶ್ರಾದ್ಧ ವಿಧಿಗಳು ಮುಗಿಸಲ್ಪಟ್ಟವು. ಅದಕ್ಕೊಂದು ಕಾರಣವಿದ್ದಿತೆಂದು ಹೇಳಲಾಯಿತು. ಸತ್ತ ಕುಮಾರನ ದೇಹವನ್ನು ಸ್ಮಶಾನಕ್ಕೆ ಸಾಗಿಸಿದಾಗ ದಹನ ಕ್ರಿಯೆಯ ಮೊದಲೇ ಅದು ಮಾಯವಾಗಿದ್ದಿತು. ಮರುದಿನ ಬೇರೊಂದು ಸ್ಮಶಾನದಲ್ಲಿ ದಹನಕ್ರಿಯೆ ನಡೆಯಿತೆಂಬುದಕ್ಕೆ ಅಲ್ಲಲ್ಲಿ ಸಂಶಯಗಳು ಹುಟ್ಟಿದುವು. ಕುಮಾರನ ದಹನ ಕ್ರಿಯೆಯೇ ಆಗಿಲ್ಲವೆಂಬ ಹಾರಿಕೆ ಸುದ್ದಿಗಳ ಜೊತೆಗೆ ಕುಮಾರನು ಸತ್ತೇ ಇಲ್ಲ ಎಂಬ ಸುದ್ದಿಗಳೂ ಗಾಳಿಯಲ್ಲಿದ್ದವು.

ಆದರೆ ಸಂಶಯವು ಸಂಶಯವಾಗಿಯೇ ಉಳಿಯಿತು. ಕಾಲಕ್ರಮದಲ್ಲಿ ಕುಮಾರನು ಸತ್ತಿರಬೇಕೆಂಬ ಗ್ರಹಿಕೆಯು ಮೂಡಿಬಂದಿತು. ಕುಮಾರನ ಜೀವ ವಿಮೆಯ ಹಣ 30,000 ರೂಪಾಯಿಗಳನ್ನು ಪಡೆಯುವಾಗ ಅಧಿಕೃತ ಸರ್ಟಿಫಿಕೇಟ್ ಹಾಜರ ಮಾಡಲಾಯಿತು. ರಾಜವಾಡೆಯಲ್ಲಿಯ ಜನರಿಗೆ ಯಾವುದೂ ತಿಳಿಯದಂತಾಗಿ ವಿಚಿತ್ರ ಮೌನದ ಸಾಕ್ಷಿಯಾಯಿತು. ಎರಡನೆಯ ಕುಮಾರ ರಾಮೇಂದ್ರನ ಹೆಂಡತಿ ವಿಭಾವತಿದೇವಿಯು ಜಯದೇವಪುರವನ್ನು ಬಿಟ್ಟು ಅಣ್ಣ ಸತ್ಯೇಂದ್ರನೊಡನೆ ಕಲಕತ್ತೆಗೆ ಹೋಗಿ ವಾಸಿಸತೊಡಗಿದಳು.

ಮರುವರುಷ 1910ರ ಸೆಪ್ಟೆಂಬರ್ 14ಕ್ಕೆ ಮೊದಲನೆಯ ಕುಮಾರ ರಾಜೇಂದ್ರ ನಾರಾಯಣನು ತೀರಿಕೊಂಡನು. ಅವನ ಹೆಂಡತಿ ಮೊದಲನೆಯ ರಾಣಿಯೂ ಕೂಡ ಮುಂದೆ ಕಲಕತ್ತೆಗೆ ಹೋಗಿ ಪ್ರತ್ಯೇಕವಾಗಿ ಇರತೊಡಗಿದಳು. ಮೂರನೆಯ ಕುಮಾರ ರವೀಂದ್ರನಾರಾಯಣನೂ 1913ರ ಸೆಪ್ಟೆಂಬರದಲ್ಲಿ ತೀರಿಕೊಂಡನು. ಅವನ ಹೆಂಡತಿ ಸಹ ಕಲಕತ್ತೆಗೆ ಹೋಗಿ ಅವಳ ಬಂಧುಗಳ ಜೊತೆಯಲ್ಲಿ ಇರತೊಡಗಿದಳು. ಮೂರೂ ಕುಮಾರರಿಗೆ ಸಂತತಿಯಾಗಿರಲಿಲ್ಲ. ರಾಣಿಯರು

ಜಯದೇವಪುರವನ್ನು ಬಿಟ್ಟು ಕಲಕತ್ತೆಗೆ ಹೋಗಿ ಇರ ತೊಡಗಿದ್ದರಿಂದ ರಾಜವಾಡೆಯು ದಿಕ್ಕಿಲ್ಲದಂತಾಯಿತು. ರಾಜೇಂದ್ರ ನಾರಾಯಣನ ಕಾಲದಲ್ಲಿ ಆಸರಕ್ಕೆ ಬಂದವರೆಲ್ಲ ಆಸರ ಕಡಿದಂತಾಗಿ ತಮ್ಮ ದಾರಿ ಕಂಡುಕೊಂಡರು. ರಾಜವಾಡೆಯ ಆಸ್ತಿಯು, ಭವಾಲರಾಜ್ಯದ ಆಸ್ತಿಯೆಲ್ಲ ಕೋರ್ಟ್ ಆಫ್ ವಾರ್ಡ್ಸ್ ಇವರ ತಾಬಾಕ್ಕೆ ಬಂದಿತು. ಸಾಮಾನ್ಯ ಜನತೆಯ ದೃಷ್ಟಿಯಿಂದ, ಸರಕಾರದ ದೃಷ್ಟಿಯಿಂದ ಭವಾಲ ರಾಜ್ಯವು ವಾರಸಾಹೀನವಾದಂತೆ ಆಗಿದ್ದಿತು. ಆದರೆ ಎರಡನೆಯ ಕುಮಾರನು ಮಾತ್ರ ಸತ್ತಿರಲಿಕ್ಕಿಲ್ಲವೆಂಬ ವಿಶ್ವಾಸವು ಅವನ ಸೇವಕನಾದ ಆನಂದ ಖಾನ ಸಾಮನಿಗೆ ಇದ್ದಿತಾದ್ದರಿಂದ ಅವನು ಆ ಕುಮಾರನು ರಾಜವಾಡೆಯಲ್ಲಿ ವಾಸಿಸುತ್ತಿದ್ದ ಕೋಣೆಯಲ್ಲಿ ಪ್ರತಿ ಸಂಜೆಗೆ ಧೂಪ ಹಾಕುತ್ತಿದ್ದನು.

ಎರಡನೆಯ ಕುಮಾರನು ಸತ್ತಿರದೆ ಬದುಕಿರಬೇಕೆಂಬ ಭಾವನೆಯು ಒಳಗಿಂದೊಳಗೆ ಇದ್ದಿತು. ಪ್ರಕಟವಾಗಿ ಹೇಳಲು ಯಾರಿಗೂ ಆಧಾರವಿರಲಿಲ್ಲ. ಒಂದುವೇಳೆ ಬದುಕಿದ್ದರೆ ರಾಜ್ಯಕ್ಕೆ ಬಾರದ ಹಾಗೆ ಏನಾಗಿರಬೇಕು? ಸತ್ತಿರುವನೆಂದೇ ಖಚಿತವಾಗಿ ತಿಳಿಯಬೇಕೆಂದರೆ ಸ್ಮಶಾನದಲ್ಲಿಯ ಹೆಣ ಮಾಯವಾದ ಸಂಗತಿಯು ಅಡ್ಡಿಯಾಗುತ್ತಿದ್ದಿತು. ಎರಡು ಸಲ ಎರಡು ಸ್ಮಶಾನದಲ್ಲಿ ಎರಡು ದಹನ ಕ್ರಿಯೆ ನಡೆದ ಸಂಗತಿಯೂ ಅಡ್ಡಬರುತ್ತಿತ್ತು.

ಸುಮಾರು 12 ವರುಷಗಳು ಕಳೆದುವು. ಒಂದು ದಿನ ಒಬ್ಬ ಸಂನ್ಯಾಸಿಯು ಡಾಕಾದಲ್ಲಿಯ ಬಕ್ಲಂಡ ಬಂಡೆಯ ಮೇಲೆ ಕೂತಿದ್ದುದು ಜನರ ಕಣ್ಣಿಗೆ ಬಿದ್ದಿತು. ಅವನ ರೂಪ, ಸಂನ್ಯಾಸಿಯ ವೇಷ ಇವು ಜನರ ಲಕ್ಷ್ಯವನ್ನು ಸೆಳೆಯತೊಡಗಿದುವು. ಸಮೀಪ ಬಂದು ನೋಡಿದವರಿಗೆಲ್ಲ ಈ ಸಂನ್ಯಾಸಿಯು ಭವಾಲ ರಾಜ್ಯದ ಎರಡನೆಯ ಕುಮಾರ ರಾಮೇಂದ್ರ ನಾರಾಯಣ ರಾಯನಂತೆ ಕಂಡನು. ಅವರು ತಮ್ಮತಮ್ಮೊಳಗೆ ಪಿಸುಮಾತಿನಲ್ಲಿ 'ಇವನು ಎರಡನೆಯ ಕುಮಾರ' ಎಂದು ಆಡಿಕೊಳ್ಳುತ್ತಿದ್ದುದು ಸಂನ್ಯಾಸಿಯ ಕಿವಿಗೆ ಬೀಳತೊಡಗಿತು. ಜನರಲ್ಲಿ ಉಂಟಾದ ಈ ಸಂಶಯಕ್ಕೂ ಎರಡನೆಯ ಕುಮಾರನು ಸತ್ತಿಲ್ಲವೆಂಬ ಹಾರಿಕೆ ಸುದ್ದಿಗಳಿಗೂ ಸಂಬಂಧ ಉಂಟಾಗತೊಡಗಿತು. ಸಂನ್ಯಾಸಿಯನ್ನು ನೋಡಲು ಜನ ಜಂಗುಳಿಯಾಗಿ ಬರತೊಡಗಿತು. ಹಾಗೆ ನೋಡಲು ಬಂದವರಲ್ಲಿ ಎರಡನೆಯ ಕುಮಾರನ ಅಕ್ಕ ಜ್ಯೋತಿರ್ಮಯಿ ದೇವಿಯ ಮಗನೂ ಒಬ್ಬನು. ಅವನಿಗೂ ಬಲವಾದ ಸಂಶಯ ಬಂದಿತು. ಕಾಸೀಮಪುರದ ಜಮೀನುದಾರನೂ ನೋಡ ಬಂದವರಲ್ಲಿ ಒಬ್ಬನು. ಅವನು ಎರಡನೆಯ ಕುಮಾರನ ಸ್ನೇಹಿತನಾಗಿದ್ದನು. ಅವನು ಈ ಸಂನ್ಯಾಸಿಯನ್ನು ಕಾಸೀಮಪುರಕ್ಕೆ ಕರೆದುಕೊಂಡು ಹೋದನು. ಅವನ ಸಮೀಪದ ಸಹವಾಸದಿಂದ ಆ ಜಮೀನುದಾರನಿಗೆ ಈ ಸಂನ್ಯಾಸಿಯು ಭವಾಲದ ಎರಡನೆಯ ಕುಮಾರನೆಂದು ಖಚಿತವಾಯಿತು. ಮುಂದೆ ಸಂನ್ಯಾಸಿ ಜಯದೇವಪುರಕ್ಕೆ ಬಂದನು. ರಾಜವಾಡೆಯ ಹತ್ತಿರದ ಒಂದು ಗಿಡದ ಕೆಳಗೆ ಕುಳಿತನು. ರಾಜವಾಡೆಯ ಜನರು, ಊರಿನ ಜನರು ಬಂದು ಬಂದು ಹೋಗತೊಡಗಿದರು. ಜ್ಯೋತಿರ್ಮಯಿ ದೇವಿಯ ಮಗ ಬುದ್ದು ಬಾಬು ಸಂನ್ಯಾಸಿಯನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಜ್ಯೋತಿರ್ಮಯಿ ದೇವಿಗೂ ಈ ಸಂನ್ಯಾಸಿಯು ಎರಡನೆಯ ಕುಮಾರನೆಂದು ಅನ್ನಿಸಿತು. ಮರುದಿನ ಸತ್ಯಭಾಮಾದೇವಿಯೂ ಬಂದಳು. ಸುತ್ತಲ ಸಂಬಂಧಿಕರು ಬಂದರು. ಅವರು ಮುಖ ನೋಡುತ್ತಲೂ ಸಂನ್ಯಾಸಿಗೆ ಒಂದು ಬಗೆಯ ಸಂವೇದನೆಯಾಗತೊಡಗಿತು. ಅಲ್ಲಿ ನಿಂತ ವಿಧವೆಯೊಬ್ಬಳು ಇಂದುಮಯಿದೇವಿಯ ಮಗಳೆಂದು ತಿಳಿದಾಗ ಸಂನ್ಯಾಸಿಯ ಕಣ್ಣಲ್ಲಿ ನೀರೂರಿತು.

ಮನೆತನದ ಜನರಿಗೆ ಬಂದ ಸಂಶಯವು ದೃಢವಾಗತೊಡಗಿತು. ಮನೆಯಲ್ಲಿದ್ದ ಒಂದನೆಯ ಮತ್ತು ಮೂರನೆಯ ಕುಮಾರರ ಫೋಟೋ ತೋರಿಸಿದಾಗ ಸಂನ್ಯಾಸಿಯು ಗದ್ಗದಿತನಾದನು. ಮೂರು ವರುಷಗಳ ಹಿಂದೆ ಜಯದೇವಪುರಕ್ಕೆ ಒಬ್ಬ ಮೌನಿ ಸಾಧು ಬಂದಾಗ ಅವನಿಗೆ ಒಂದು ಪ್ರಶ್ನೆ ಕೇಳಲಾಗಿದ್ದಿತು-ಎರಡನೆಯ ಕುಮಾರನು ಜೀವಿಸಿದ್ದಾನೆಯೇ, ಹೇಗೆ? ಎಂದು ಆ ಸಂನ್ಯಾಸಿಯು ಭವಿಷ್ಯ ನುಡಿದಿದ್ದ-ಎರಡನೆಯ ಕುಮಾರ ಜೀವಿಸಿದ್ದಾನೆಂದು. ಈ ಸಂನ್ಯಾಸಿಗೂ ಕೇಳಬೇಕೆಂದು ಜ್ಯೋತಿರ್ಮಯಿದೇವಿ ಮುಂದಾದಳು. ಎರಡನೆಯ ಕುಮಾರನು ಡಾರ್ಜಿಲಿಂಗದಲ್ಲಿ ಮೃತಪಟ್ಟನೆಂದೂ ವಾರ್ತೆಯಿದೆ. ಆದರೆ ಅವನ ದಹನಕ್ರಿಯೆ ಆಗಲಿಲ್ಲವೆಂದೂ ಸುದ್ದಿ

ಯಿದೆ. ಇದರಲ್ಲಿ ಯಾವುದು ಸತ್ಯವಾಗಿದೆ? ಆಗ ಸಂನ್ಯಾಸಿಯು ಸರಳವಾಗಿ ಹೇಳಿದ. ಎರಡನೆಯ ಕುಮಾರನ ದಹನಕ್ರಿಯೆ ಆಗಲಿಲ್ಲ ಅವನು ಜೀವಂತ ಇದ್ದಾನೆ. ಆಗ ಜ್ಯೋತಿರ್ಮಯಿದೇವಿ ನೇರವಾಗಿಯೇ ಕೇಳಿಬಿಟ್ಟಳು. "ನಿಮ್ಮ ದೇಹ, ಮುಖ-ಲಕ್ಷಣಗಳೆಲ್ಲ ನಮ್ಮ ಎರಡನೆಯ ಕುಮಾರನ ಹಾಗೇ ಇವೆ. ನೀವೇ ಎರಡನೆಯ ಕುಮಾರ ಇರಬಹುದೇ?" ಸಂನ್ಯಾಸಿಯು ಹೌದೆಂದು ಹೇಳಲಿಲ್ಲ.

1921ರ ಮೇ ತಿಂಗಳ ಮೊದಲನೆಯ ವಾರ. ಸಂನ್ಯಾಸಿಯು ಅಷ್ಟರಲ್ಲಿ ವಾತಾವರಣಕ್ಕೆ ಒಗ್ಗಿದ್ದನು. ಜ್ಯೋತಿರ್ಮಯಿ ದೇವಿಯ ಮಗ ಬುದ್ಧು ಸಂನ್ಯಾಸಿಯ ದೇಹದ ಮೇಲೆ ಇರುವ ಗುರುತಿನ ಕಲೆಗಳನ್ನು ನೋಡತೊಡಗಿದನು. ಎರಡನೆಯ ಕುಮಾರನ ಮೈಮೇಲೆ ಇದ್ದ ಕಲೆಯ ಗುರುತುಗಳು, ದೇಹದ ಆಯಾ ಭಾಗಗಳಲ್ಲಿ ಈ ಸಂನ್ಯಾಸಿಯ ಮೈಮೇಲೆ ಕಂಡವು. ಮನೆಯ ಜನರಿಗೆ ಸಂನ್ಯಾಸಿಯೇ ಎರಡನೆಯ ಕುಮಾರ ಎಂದು ಖಚಿತವಾಯಿತು.

ಈ ಸುದ್ದಿ ಊರಲ್ಲಿ ಹಬ್ಬಿ ಮರುದಿನ ಬೆಳಿಗ್ಗೆ ಸಾವಿರಾರು ಜನರು ಸಂನ್ಯಾಸಿಯನ್ನು ನೋಡಲು ಬಂದರು. ಆಗ ಸಂನ್ಯಾಸಿಯನ್ನು ಒತ್ತಾಯಪಡಿಸಿ ಅವನ ಹೆಸರು-ದೆಸೆಗಳನ್ನು ಸಾರ್ವಜನಿಕವಾಗಿ ಕೇಳಲಾಯಿತು. ತನ್ನ ಹೆಸರು, ತಂದೆ ತಾಯಿಯ ಹೆಸರು, ತನ್ನನ್ನು ಸಾಕಿದವಳ ಹೆಸರುಗಳನ್ನು ಸಂನ್ಯಾಸಿ ಹೇಳಲಾಗಿ ನೆರೆದ ಜನರಿಗೆ ಸಂಶಯ ನಿವಾರಣೆಯಾಗಿ ಅವರು ಹರುಷ ಪುಲಕಿತರಾಗಿ 'ಮಧ್ಯಮ ಕುಮಾರ ಕೀ ಜೈ, ಮಧ್ಯಮ ಕುಮಾರ ಕೀ ಜೈ' ಎಂದು ಏಕಕಂಠದಿಂದ ಜಯಜಯಕಾರ ಮಾಡಿ ಸಂನ್ಯಾಸಿಯು ಎರಡನೇ ಕುಮಾರ ರಾಮೇಂದ್ರ ನಾರಾಯಣ ರಾಯನೆಂದು ಒಪ್ಪಿಕೊಂಡರು. ರಾಜವಾಡೆಯ ಜನರು, ರಾಜಮನೆತನದ ಕೆಲಸಗಾರರು, ಊರಲ್ಲಿಯ ಜನರು, ರೈತರು, ಮುಂತಾದವರು ಕಾಣಿಕೆ ಅರ್ಪಿಸಿದರು. ತನ್ನ ಗುರುತು ಪರಿಚಯ ಸರಿಯಾಗಿ ಆದುದನ್ನು ತಿಳಿದು ಅದುವರೆಗೆ ಹಿಂದಿಯಲ್ಲಿ ಮಾತನಾಡುತ್ತಿದ್ದ ಸಂನ್ಯಾಸಿಯು ಬಂಗಾಲಿಯಲ್ಲಿ ಮಾತನಾಡತೊಡಗಿದನು.

ಸಂನ್ಯಾಸಿಯೇ ಎರಡನೇ ಕುಮಾರನೆಂದು ಜನ ಒಪ್ಪಿಕೊಂಡು ಕಾಣಿಕೆಗಳನ್ನು ಕೊಡಲು ಬರುತ್ತಿರುವದು ಭವಾಲ ರಾಜ್ಯದಲ್ಲೆಲ್ಲ ವಿಶೇಷ ವಾತಾವರಣವನ್ನು ಹುಟ್ಟಿಸಿತು. ಭವಾಲ ರಾಜ್ಯದ ಆಸ್ತಿಯೆಲ್ಲ ಕೋರ್ಟ ಆಫ್ ವಾರ್ಡ್ಸ ಇವರ ತಾಬಾದಲ್ಲಿದ್ದಿತು. ವಾರಸುದಾರರಾದ ಮೂರು ಕುಮಾರರು ತೀರಿ ಕೊಂಡದ್ದು, ಸಂನ್ಯಾಸಿಯೊಬ್ಬ ಬಂದು ತಾನು ಎರಡನೆಯ ಕುಮಾರನೆಂದು ಹೇಳಿಕೊಳ್ಳುತ್ತಿರುವುದನ್ನು ಜನರು ನಂಬಿ ಕಾಣಿಕೆ ಸಲ್ಲಿಸತೊಡಗಿದುದೂ, ಆಸ್ತಿಯ ಪುನಃ ಪ್ರಾಪ್ತಿಗಾಗಿ ಅಧಿಕಾರ ಪ್ರಸ್ಥಾಪಿಸಲು ಕೆಲಸ ನಡೆಸಲು ಬೇಕಾಗುವ ಹಣ ಸಂಗ್ರಹವನ್ನು ಜನತೆ ಮಾಡತೊಡಗಿದುದೂ ವಿಶೇಷ ಗಡಿಬಿಡಿಯನ್ನುಂಟು ಮಾಡಿತು. ಅಧಿಕಾರಿಗಳು ವಸ್ತುಸ್ಥಿತಿ ಏನಿದೆಯೆಂಬುದನ್ನು ತಿಳಿಯಬೇಕೆಂದು ಬಂದು ಸಂನ್ಯಾಸಿಯ ಸಂದರ್ಶನ ಮಾಡಿದರು. ಸಂನ್ಯಾಸಿಯು ತನ್ನ ಹಿಂದಿನ ಜೀವನದ ಬಗ್ಗೆ ಯಾವ ವಿವರಗಳನ್ನು ಕೊಡಲು ಒಪ್ಪಲಿಲ್ಲ. ಆದ್ದರಿಂದ ಅವನು ನಿಜವಾಗಿ ಎರಡನೇ ಕುಮಾರ ರಾಮೇಂದ್ರ ನಾರಾಯಣನು ಇರದೆ ಯಾವನೋ ಮತಲಬಿಯ ಸೋಗುಗಾರನಿರಬೇಕು. ಅವನು ತನ್ನ ಗುರುತು ಪರಿಚಯವನ್ನು ಪ್ರಸ್ಥಾಪಿಸಬೇಕು. ಇಲ್ಲವಾದರೆ ಮೋಸಗಾರನಾಗಿ ನಡೆಯುತ್ತಿರುವುದಕ್ಕೆ ಅವನ ಮೇಲೆ ಯೋಗ್ಯ ಕಾಯದೇಶೀರ ಇಲಾಜ ಮಾಡಬೇಕು ಎಂದು ಅಧಿಕಾರಿಗಳು ಆಸ್ತಿಯ ಮ್ಯಾನೇಜರರಿಗೆ ತಿಳಿಸಿದರು. ಯಾವುದೇ ನಿರ್ದಿಷ್ಟ ಕ್ರಮವನ್ನು ಯೋಗ್ಯ ರೀತಿಯಲ್ಲಿ ಸಕಾಲದಲ್ಲಿ ತೆಗೆದುಕೊಳ್ಳದಿದ್ದರೆ ಆಸ್ತಿಯ ಆಡಳಿತ ವ್ಯವಸ್ಥೆ ಮಾಡುವುದೇ ಕಠಿಣವಾದೀತೆಂಬ ಸೂಚನೆಯನ್ನು ಕೊಟ್ಟರು.

ಮುಂದಾಗುವ ಅನಾಹುತಗಳನ್ನು ತಡೆಯಬೇಕೆಂದು ಢಾಕಾದ ಕಲೆಕ್ಟರನು (ಕೋರ್ಟ ಆಫ್ ವಾರ್ಡ್ಸ) ಒಂದು ನೋಟಿಸಿನಂತಹ ಪರಿಪತ್ರವನ್ನು ಹೊರಡಿಸಿದನು: 3-6-1921.

"ಹನ್ನೆರಡು ವರುಷಗಳ ಹಿಂದೆ ಡಾರ್ಜಿಲಿಂಗ ಪಟ್ಟಣದಲ್ಲಿ ಭವಾಲದ ಎರಡನೆಯ ಕುಮಾರನ ಮೃತ ದೇಹವು ಬೂದಿಯಾಗುವಂತೆ ಸುಡಲ್ಪಟ್ಟಿದೆ ಎಂದು ನಿರ್ಣಾಯಕವಾದ ದಾಖಲೆಯು ಬೋರ್ಡಿನವರ ಹತ್ತಿರವಿದೆ. ಆದ್ದರಿಂದ ತಾನು ಎರಡನೆಯ ಕುಮಾರನೆಂದು ಹೇಳಿಕೊಳ್ಳುವ ಸಾಧುವು ಮೋಸಗಾರನೆಂದು ಸಿದ್ಧವಾಗುತ್ತದೆ. ಯಾರಾದರೂ ಅವನಿಗೆ ಲಾವಣಿ ಇಲ್ಲವೆ ಚಂದಾ

ಕೊಟ್ಟರೆ ಅವರು ತಮ್ಮ ಹೊಣೆಗಾರಿಕೆಯ ಮೇಲೆಯೇ ಕೊಟ್ಟಂತಾಗುವುದು, ಎಂದು ಈ ಮೂಲಕ ನೋಟೀಸು ಕೊಡಲಾಗಿದೆ."

ಆದರೆ ಭವಾಲ ರಾಜ್ಯದ ಜನತೆ ಈ ನೋಟೀಸನ್ನು ಗಮನಿಸದೆ ಲಾವಣಿ ಮತ್ತು ಚಂದಾ, ಎರಡನೆಯ ಕುಮಾರನೆಂದು ಅವರು ಒಪ್ಪಿಕೊಂಡ ಸಂನ್ಯಾಸಿಗೆ ಕೊಡುವುದನ್ನು ನಿಲ್ಲಿಸಲಿಲ್ಲ.

ಸಂನ್ಯಾಸಿಯು ಎರಡನೆಯ ಕುಮಾರನೆಂದು ಪ್ರಸ್ತಾಪಿಸುವ ಪ್ರಚಾರ ಸಾಹಿತ್ಯವು ಪ್ರಕಟವಾಗ ತೊಡಗಿತು. ಈ ಸಾಹಿತ್ಯದ ಮಾರಾಟವು ಆಶ್ಚರ್ಯಕಾರಕವಾಗಿತ್ತು. ಮಾರಾಟದಿಂದ ಹಣಗಳಿಸಿ ದವರೆಷ್ಟೋ ಜನ. ಈ ಸಂನ್ಯಾಸಿಯ ಬಗ್ಗೆ ಲಾವಣಿಗಳು ಕಟ್ಟಲ್ಪಟ್ಟು, ಹಳ್ಳಿ ಹಳ್ಳಿಗೆ ಜನ ಹೋಗಿ ಒಳ್ಳೇ ಹುರುಪಿನಿಂದ ಹಾಡತೊಡಗಿದರು. ನಿಧಿ ಸಂಗ್ರಹಕ್ಕಾಗಿ ಜನರು ಊರೂರು ಅಲೆಯ ತೊಡಗಿದರು. ವೃತ್ತ ಪತ್ರಿಕೆಗಳಲ್ಲಿ ಇದೊಂದು ಮಹತ್ವದ ಸುದ್ದಿ ಸಂಗತಿಯೇ ಆಯಿತು. ಹೀಗೆಲ್ಲ ಒಮ್ಮುಖವಾಗಿ ಪ್ರಚಾರ ನಡೆದಾಗ ಒಂದು ಪುಸ್ತಿಕೆ 1921ರ ಸೆಪ್ಟೆಂಬರದಲ್ಲಿ ಪ್ರಸಿದ್ಧವಾಯಿತು. "ಸಂನ್ಯಾಸಿಯ ವೇಷದಲ್ಲಿರುವ ನಮ್ಮ ಹೃದಯ ದೇವತೆ" ಎಂಬ ಹೆಸರಿನಲ್ಲಿ ಪ್ರಸಿದ್ಧವಾದ ಪುಸ್ತಿಕೆಯಲ್ಲಿ ದಾರ್ಜಿಲಿಂಗದಲ್ಲಿ ಎರಡನೆಯ ಕುಮಾರನನ್ನು ಡಾ|| ಅಶುತೋಷರು ವಿಷಹಾಕಿ ಕೊಲ್ಲುವ ಪ್ರಯತ್ನ ಮಾಡಿದರೆಂಬ ಸಂಗತಿಯು ಪ್ರಕಟವಾಯಿತು. ಈ ಪುಸ್ತಿಕೆಯನ್ನು ಬರೆದವನ ಮೇಲೆ ಡಾ|| ಅಶುತೋಷರು ಮಾನಹಾನಿ ಖಟ್ಲೆಯನ್ನು ಹಾಕಿದರು. ಬರಹಗಾರ ಆರೋಪಿಯ ಗುನ್ಹೆಯು ಸಾಬೀತಾಗಿ ಅವನ ಶಿಕ್ಷೆಯನ್ನು ಹಾಯ್‌ಕೋರ್ಟು ಕಾಯಂ ಮಾಡಿತು. ಇದರಿಂದ ಶ್ರದ್ಧಾವಂತ ಜನತೆಯಲ್ಲಿ ಕಳವಳವುಂಟಾಯಿತು. ವಿಷಪ್ರಯೋಗವಾಗಿಲ್ಲವೆಂದಾದರೆ ನೈಸರ್ಗಿಕ ಮರಣ ಬಂದಿತ್ತೆ? ಸತ್ತದ್ದೆ ಸುಳ್ಳೆ? ಇಲ್ಲವೆ ಸತ್ತದ್ದು ನಿಜವಿದ್ದರೆ ಈ ಸಂನ್ಯಾಸಿಯು ಯಾರು? ಸೋಗು ಹಾಕಿಕೊಂಡು ಬಂದ ಪೊಂಚುಗಾರನೆ? ಎರಡನೆಯ ಕುಮಾರನ ಹಾಗೆ ಕಾಣುತ್ತಾನೆಂದು ಜನರು ಆಡುತ್ತಿರುವುದರ ದುರ್ಲಾಭ ಪಡೆವ ದುರ್ಬುದ್ಧಿಯವನೆ?

ಕೆಲವರಿಗೆ ಸಂಶಯವು ಪುನಃ ಬಂದಿದ್ದರೆ ಇನ್ನು ಕೆಲವರಿಗೆ ಸಂಶಯದ ಪ್ರಶ್ನೆಯೇ ಬರಲಿಲ್ಲ. ಎರಡನೆಯ ಕುಮಾರನ ಅಜ್ಜಿ ಸತ್ಯಭಾಮಾದೇವಿ ಡಾಕಾದಲ್ಲಿದ್ದ ಸಂನ್ಯಾಸಿಯ ಹತ್ತಿರವೇ ಬಂದು ಇರತೊಡಗಿದಳು. ಅಲ್ಲದೆ ಎರಡನೆಯ ಕುಮಾರನ ಹೆಂಡತಿಯು ಕಲಕತ್ತೆಯಲ್ಲಿದ್ದವಳು ಡಾಕಾಕ್ಕೆ ಬಂದು ಗಂಡನೊಡನೆ ಇರಬೇಕೆಂದು ಅವಳಿಗೆ ಪತ್ರ ಕೂಡ ಬರೆದಳು. ಎರಡನೆಯ ಕುಮಾರನು ಜೀವಂತ ವಾಗಿರುವನೆಂದು? ಅಲ್ಲಿಗೆ ವಿಭಾವತಿದೇವಿಯು ಬರಬೇಕೆಂದೂ ಬರೆದ ಪತ್ರಕ್ಕೆ ವಿಭಾವತಿದೇವಿ ಬರಲೂ ಇಲ್ಲ, ತನ್ನ ಪತಿ ಜೀವಂತವಿರುವುದನ್ನು ಅಲ್ಲಗಳೆಯಲು ಯಾವ ಕ್ರಮ ವನ್ನು ತೆಗೆದುಕೊಳ್ಳಲೂ ಇಲ್ಲ. ಇದೂ ಆಶ್ಚರ್ಯವೆನ್ನಿಸುವಂತಿತ್ತು.

1922ರಲ್ಲಿ ಸತ್ಯಭಾಮಾದೇವಿ ತೀರಿಕೊಂಡರು. ಮೊಮ್ಮಗನಾದ ಎರಡನೆಯ ಕುಮಾರನೆಂದು ಹೇಳಿಕೊಳ್ಳುವ ಸಂನ್ಯಾಸಿಯೇ ಅವಳ ಅಂತ್ಯಕ್ರಿಯೆಗಳನ್ನು ಮಾಡಿದನು. ಸಂನ್ಯಾಸಿಯೇ ತನ್ನ ಅಂತ್ಯಕ್ರಿಯೆಗಳನ್ನು ಮಾಡಬೇಕೆಂದು ಅವಳು ಜೀವಂತ ಇದ್ದಾಗ್ಗೆ ಸೂಚಿಸಿದ್ದಳು. ಅವಳಿಗೆ ಸಂನ್ಯಾಸಿಯು ಎರಡನೇ ಕುಮಾರನೇ ಎಂದು ಮನದಟ್ಟಾಗಿ ಹೋಗಿತ್ತು.

ಸಂನ್ಯಾಸಿಯು ಕೂಡ ಮುಂದೆ ತಾನು ಎರಡನೆಯ ಕುಮಾರನೇ ಎಂಬಂತೆ ವರ್ತಿಸತೊಡಗಿ ದನು. ಲಾವಣಿ-ಚಂದಾ ಪಡೆಯುವುದು, ಕಾಣಿಕೆ ಪಡೆಯುವುದು ನಡದೇ ಇದ್ದಿತು. ಯಾವುದೊಂದು ರೀತಿಯಲ್ಲಿ ಅಧಿಕೃತವಾಗಿ ಅಧಿಕಾರವನ್ನು ಪಡೆಯಬೇಕೆಂದು 1926ರಲ್ಲಿ ಕಂದಾಯ ಬೋರ್ಡಿಗೆ ಮನವಿಯನ್ನು ಒಪ್ಪಿಸಿ ತನ್ನ ಬಗ್ಗೆ ಏನು ಬೇಕಾದ ವಿಚಾರಣೆ ನಡೆಸ ಬೇಕೆಂದು ಬೇಡಿದನು. ಆದರೆ ಕಂದಾಯ ಬೋರ್ಡಿನವರು ಇದಕ್ಕೆ ಒಪ್ಪಲಿಲ್ಲ. ಕೊನೆಗೆ ಯಾವ ಇತರ ಪ್ರಯತ್ನಗಳೂ ಫಲಿಸಲಿಲ್ಲವೆಂದು ಸಂನ್ಯಾಸಿಯು ತನ್ನ ಅಧಿಕಾರ ಪ್ರಸ್ತಾಪನೆಗೆ ಆಸ್ತಿಯ ಪಾಲು ಪಡೆಯುವುದಕ್ಕೆ 1930ರ ಏಪ್ರಿಲ್ 24ಕ್ಕೆ ದಾವಾ ಮಾಡಿದನು. ಎರಡನೆಯ ಕುಮಾರನ ಹೆಂಡತಿ ರಾಣಿ ವಿಭಾವತಿದೇವಿಯು 1ನೇ ಪ್ರತಿವಾದಿಯೆಂದೂ, 1ನೆಯ ಮತ್ತು 3ನೆಯ ರಾಣಿ ಯರು, 1 ಮತ್ತು 3ನೆಯ ಕುಮಾರರ ಹೆಂಡಂದಿರನ್ನು, ಮೂರನೆಯ ರಾಣಿಯ ದತ್ತಕ ಮಗನನ್ನು

ಇತರ ಪ್ರತಿವಾದಿಯರನ್ನಾಗಿ ಮಾಡಿ ದಾವಾ ಮಾಡಲಾಯಿತು.

ವಾದಿಯಾದ ಸಂನ್ಯಾಸಿಯು ತನ್ನ ಅಸಲರ್ಜಿಯಲ್ಲಿ ಕಾಣಿಸಿದ ವಿವರ ಹೀಗಿದ್ದಿತು:

ತಾನು ಭವಾಲದ ಎರಡನೆಯ ಕುಮಾರನಾದ ರಾಮೇಂದ್ರ ನಾರಾಯಣರಾಯನು. 1909 ನೆಯ ಮೇ 8ಕ್ಕೆ ಸತ್ತಿರುವನೆಂಬುದು ಸುಳ್ಳು. 12 ವರುಷಗಳ ನಂತರ ಸಂನ್ಯಾಸಿ ರೂಪದಲ್ಲಿ ಪ್ರಕಟವಾದಾಗ ಸಂಬಂಧಿಕರು ಮತ್ತು ಸಾರ್ವಜನಿಕರು ತನ್ನನ್ನು ಎರಡನೆಯ ಕುಮಾರನೆಂದು ಗುರುತಿಸಿ ಒಪ್ಪಿಕೊಂಡಿದ್ದಾರೆ. ತನ್ನ ಹೆಂಡತಿ ವಿಭಾವತಿದೇವಿ ಮತ್ತು ಇನ್ನು ಕೆಲವರು ಮಾತ್ರ ಒಪ್ಪಿಕೊಂಡಿಲ್ಲ. ವಿಭಾವತಿದೇವಿಯು ಅವಳ ಅಣ್ಣನ ಅಂಕಿತದಲ್ಲಿರುವುದರಿಂದ ಒಪ್ಪಿಕೊಳ್ಳಲು ಅವಳಿಗೆ ಅನುಕೂಲತೆ ಇಲ್ಲ. ತಾನು ಎರಡನೆಯ ಕುಮಾರನೆಂದು ಒಪ್ಪಿಕೊಳ್ಳಲ್ಪಟ್ಟರೆ, ವಿಭಾವತಿ ದೇವಿಯ ಅಣ್ಣನಾದ ಸತ್ಯೇಂದ್ರನಿಗೆ ಆಸ್ತಿಯ ಉಪಭೋಗ ತಪ್ಪುತ್ತದೆ. ಡಾರ್ಜಿಲಿಂಗದಲ್ಲಿ ವಾಸ ವಾಗಿರುವಾಗ ತನಗೆ ವಿಷಪ್ರಯೋಗವಾಯಿತು. ಅದರಿಂದ ಎಚ್ಚರ ತಪ್ಪಿತು. ಎಚ್ಚರ ತಪ್ಪಿದ್ದನ್ನು ಮರಣವೆಂದು ನಂಬಿ ತನ್ನನ್ನು ಸ್ಮಶಾನಕ್ಕೆ ಸಾಗಿಸಲಾಯಿತು. ಸ್ಮಶಾನ ಮುಟ್ಟಿದ ನಂತರ ಭಯಂಕರ ಬಿರುಗಾಳಿ ಮತ್ತು ಭೀಕರ ಮಳೆ ಪ್ರಾರಂಭವಾದ್ದರಿಂದ ಸಿದಿಗೆಯನ್ನು ಅಲ್ಲಿಯೇ ಬಿಟ್ಟು ಹೆಣ ಹೊತ್ತು ಬಂದವರು ದೂರ ಹೋದರು. ಅಲ್ಲಿ ಸಮೀಪದಲ್ಲಿ ಯಾವ ಮಳಿಗೆ ಇರಲಿಲ್ಲ. ಮಳೆ ಕಡಿಮೆಯಾಗಿ ಬಿರುಗಾಳಿ ನಿಂತ ನಂತರ ಬಂದು ನೋಡಿದಾಗ ಸಿದಿಗೆಯ ಮೇಲೆ ಹೆಣ ಇರಲಿಲ್ಲ. ಎರಡು ಮೂರು ದಿನಗಳ ನಂತರ ತನಗೆ ಎಚ್ಚರಿಕೆ ಬಂದಾಗ ತಾನು ಸಂನ್ಯಾಸಿಗಳ ಮಧ್ಯದಲ್ಲಿದ್ದುದು ತಿಳಿದು ಬಂದಿತು. ಸಂನ್ಯಾಸಿಗಳ ಆರೈಕೆಯಿಂದ ಗುಣವಾಗಿ ಆರೋಗ್ಯವಂತನಾದನು. ಅವರೊಡನೆ ಸಂಚಾರ ಮಾಡಿದನು. ಮುಂದೆ ಸಂಚಾರ ಮಾಡುತ್ತ ಡಾಕಾಕ್ಕೆ ಬಂದನು.

ತಾನು ರಾಜೇಂದ್ರ ನಾರಾಯಣರಾಯರ ಮೂರು ಕುಮಾರರಲ್ಲಿ ಎರಡನೆಯವನು. ಆದ್ದರಿಂದ ಭವಾಲ ರಾಜ್ಯದ ಆಸ್ತಿಯಲ್ಲಿ ತನ್ನದು 3/1 ಪಾಲು ಇದೆ. ರಾಜೇಂದ್ರ ನಾರಾಯಣನು 1901ರಲ್ಲಿ ತೀರಿಕೊಂಡನು. ತಾನು ಸಂನ್ಯಾಸಿಯ ವೇಷದಲ್ಲಿ ಪ್ರಕಟವಾದ ಮೇಲೆ ಜನರು ಗುರುತಿಸಿ ತನಗೆ ನಜರಾಣೆ ಮತ್ತು ಲಾವಣಿ ಕೊಡತೊಡಗಿದರು. ಇದನ್ನು ತಪ್ಪಿಸಲು ಕಲೆಕ್ಟರನು ನೋಟೀಸು ಕೊಟ್ಟನು. ತಾನು ಕಂದಾಯ ಬೋರ್ಡಿಗೆ ಮನವಿ ಒಪ್ಪಿಸಿದರೂ ಅವರು ಅದರ ವಿಚಾರಣೆ ಮಾಡಲಿಲ್ಲ. ಆದ್ದರಿಂದ ಯೋಗ್ಯ ವಿಚಾರಣೆ ನಡೆದು ತಾನು ಎರಡನೆಯ ಕುಮಾರನೆಂದು ನಿರ್ಣಯಿಸಲ್ಪಡಬೇಕು. ತನ್ನ ಪಾಲಿನ 3/1 ಆಸ್ತಿಯನ್ನು ನಿರ್ದಿಷ್ಟಪಡಿಸಿ ಅದರ ಕಬಜಾ ಕೊಡಿಸ ಬೇಕು.

ಪ್ರತಿವಾದಿಯರ ಕೈಫಿಯತ್ತಿನ ಮುಖ್ಯಾಂಶ ಹೀಗೆ ಇದ್ದಿತು: ವಾದಿಯ ದಾವಾ ಸುಳ್ಳು ಮತ್ತು ಮತಲಬಿಯದು ಹಾಗೂ ಸಾಧಣೂಕಿಯದು ಇದೆ. ಎರಡನೆಯ ಕುಮಾರ ರಾಮೇಂದ್ರ ನಾರಾಯಣನು 1909ರ ಮೇ 8ಕ್ಕೆ ತೀರಿಕೊಂಡದ್ದು ನಿಜ. ಮತ್ತು ಅವನ ದೇಹವು ಬೂದಿಯಾಗು ವಂತೆ ಸುಡಲ್ಪಟ್ಟಿದೆ. ಆದ್ದರಿಂದ ವಾದಿಯು ಒಬ್ಬ ಹೊಂಚುಗಾರನು (Impostser) ಇದ್ದಾನೆ.

ಇದರಿಂದ ಈ ಕೆಳಗಿನ ಮುದ್ದೆಗಳು ಹೊರಟವು.

1. ಎರಡನೆಯ ಕುಮಾರ ರಾಮೇಂದ್ರ ನಾರಾಯಣನು ಜೀವಂತ ಇರುವನೆ? ಇದ್ದರೆ ವಾದಿಯು ತಾನು ಎರಡನೆಯ ಕುಮಾರ ರಾಮೇಂದ್ರ ನಾರಾಯಣರಾಯನೆಂದು ಸಾಬೀತು ಮಾಡತಕ್ಕದ್ದು.

2. ಎರಡನೆಯ ಕುಮಾರ ರಾಮೇಂದ್ರ ನಾರಾಯಣರಾಯನು ಮೃತಪಟ್ಟಿದ್ದು, ಅವನ ದಹನ ಕ್ರಿಯೆ ಆಗಿದೆಯೆಂದು ಪ್ರತಿವಾದಿಯರು ಸಾಬೀತು ಮಾಡತಕ್ಕದ್ದು.

ಮೊದಲನೆಯ ಮುದ್ದೆಯ ಎರಡನೆಯ ಭಾಗ ಸಾಬೀತು ಮಾಡಲ್ಪಟ್ಟರೆ, ಮೊದಲನೆಯ ಭಾಗವು ಸಿದ್ಧವಾದಂತೆಯೆ, ಆದರೂ ಪ್ರತಿವಾದಿಯರ ವಾದವನ್ನು ಮನ್ನಿಸಿ ಮುದ್ದೆಗೆ ಆ ಸ್ವರೂಪ ಕೊಡಲಾಯಿತು.

ಮುದ್ದೆಗಳು ಸ್ಥೂಲವಾಗಿ ಎರಡೇ ಕಂಡರೂ ಅವುಗಳಲ್ಲಿ ಅಡಕವಾದ ವಿಷಯಗಳು ಅನೇಕವಾಗಿ ದ್ದವು. ಒಂದು ರಾಜ್ಯದ ಆಸ್ತಿಗೆ ವಾರಸುದಾರನಾಗಿ ಬಂದವನು ಒಬ್ಬ ಸಂನ್ಯಾಸಿಯು. ಎರಡನೆಯ

# ರಸ್ತೆ ಸುರಕ್ಷತೆ

## ಇದು ಶಾಲೆಯಲ್ಲಿ ಪ್ರಾರಂಭವಾಗುತ್ತದೆ.

ಅವರು ಚಿಕ್ಕವರಿದ್ದಾಗಲೇ ಕಲಿಸಿರಿ. ರಸ್ತೆ ಸುರಕ್ಷತಾ ಸಪ್ತಾಹದ ಅವಧಿಯಲ್ಲಿ ಪ್ರತಿದಿನ ಪ್ರಾರ್ಥನೆಯ ನಂತರ ಎಲ್ಲಾ ಶಾಲಾ ಶಿಕ್ಷಕರು ಮಕ್ಕಳಿಂದ ರಸ್ತೆ ಸುರಕ್ಷತೆ ನಿಯಮಗಳನ್ನು ಪಾಲಿಸುವಂತೆ ಪ್ರತಿಜ್ಞೆ ಮಾಡಿಸಿರಿ.

## ಪ್ರತಿಜ್ಞೆ

- ನಾನು ರಸ್ತೆಯನ್ನು ನಿಗದಿಪಡಿಸಿದ ಸುರಕ್ಷಿತ ಸ್ಥಳದಲ್ಲೇ ದಾಟುತ್ತೇನೆ.
- ನಾನು ರಸ್ತೆ ಪಕ್ಕದ ಕಾಲುದಾರಿಯ ತುದಿಯಲ್ಲೇ ನಿಲ್ಲುತ್ತೇನೆ.
- ನಾನು ವಾಹನಗಳು ಬರುತ್ತಿವೆಯೇ ಎಂದು ಗಮನಿಸಿ, ಕೇಳಿಸಿಕೊಳ್ಳುತ್ತೇನೆ.
- ನಾನು ವಾಹನಗಳು ಬರುತ್ತಿದ್ದರೆ ಅವುಗಳನ್ನು ಹೋಗಲು ಬಿಡುತ್ತೇನೆ.
- ನಾನು ವಾಹನಗಳು ಬರುತ್ತಿವೆಯೇ ಎಂದು ಸುತ್ತಲೂ ಗಮನಿಸಿ, ರಸ್ತೆಯನ್ನು ನೇರವಾಗಿ ದಾಟುತ್ತೇನೆ.
- ನಾನು ವಾಹನಗಳು ಬರುತ್ತಿರುವುದನ್ನು ನೋಡುತ್ತಾ, ಕೇಳಿಸಿಕೊಳ್ಳುತ್ತಾ ಗಮನವಿಟ್ಟು ರಸ್ತೆಯನ್ನು ದಾಟುತ್ತೇನೆ.

**ಕರ್ನಾಟಕ ವಾರ್ತೆ**

ಕುಮಾರನೇ ತಾನು ಎಂದು ಹೇಳಿಕೊಳ್ಳುತ್ತಿರುವಾಗ ಆ ಎರಡನೆಯ ಕುಮಾರನು ದಾವೆ ದಾಖಲ ತಾರೀಖಿಗೆ 20 ವರುಷ ಸುಮಾರು ಮೊದಲು ತೀರಿಕೊಂಡನೆಂದು ಸಾರಲಾಗಿತ್ತು. ಮಾಡಿಕೊಂಡ ಹೆಂಡತಿಯೇ ವಿರುದ್ಧವಾಗಿ ನಿಂತಿದ್ದಳು. ಅಧಿಕಾರಿಗಳ ವರದಿ ಮುಂತಾದ ದಾಖಲೆಗಳು ಎರಡನೆಯ ಕುಮಾರನು ಸತ್ತದ್ದೇ ನಿಜವೆಂದು ನಂಬಿ ಈ ವಾದಿ ಸಂನ್ಯಾಸಿಯು ಮೋಸಗಾರನೆಂದು ಸಾರುತ್ತಿದ್ದವು. ಇಂತಹ ಪರಿಸ್ಥಿತಿಯಲ್ಲಿ ದಾವೆಯ ಚೌಕಾಶಿ ಪ್ರಾರಂಭವಾಯಿತು– 1933ನೆಯ ನವೆಂಬರ್ 27ನೆಯ ದಿನಾಂಕಕ್ಕೆ. ಒಟ್ಟಿನಲ್ಲಿ 1200ಕ್ಕೆ ಮೇಲ್ಪಟ್ಟು ಸಾಕ್ಷಿಗಳಾದವು. ಅಸಂಖ್ಯ ಕಾಗದ ಪತ್ರಗಳು ಹಾಜರಾದುವು. ಸುಮಾರು ಮೂರು ವರುಷಗಳವರೆಗೆ ಚೌಕಾಶಿ ನಡೆದು 1936ರ ಮೇ 20ಕ್ಕೆ ಮುಗಿಯಿತು. 1936ರ ಆಗಸ್ಟ್ 24ಕ್ಕೆ ಠರಾವು ಕೊಡಲ್ಪಟ್ಟಿತು.

ವಾದಿಯಾಗಿ ಬಂದು ನಿಂತಿದ್ದ ಸಂನ್ಯಾಸಿಯು ದೇಹ, ಮುಖ-ಲಕ್ಷಣ, ಮನೋವ್ಯಾಪಾರಗಳಲ್ಲಿ ಎರಡನೆಯ ಕುಮಾರ ರಾಮೇಂದ್ರ ನಾರಾಯಣರಾಯನನ್ನು ಯಾವ ದೃಷ್ಟಿಯಿಂದ ಹೋಲುತ್ತಾನೆ ಎಂಬುದು ಮುಖ್ಯ ಮಾತಾಯಿತು. ವಾದಿಯ ತರ್ಫಿನಲ್ಲಿ ಬಂದ ಎಲ್ಲ ಸಾಕ್ಷಿದಾರರು, ಸಂಬಂಧಿಕರು, ಸಾರ್ವಜನಿಕರು ಎಲ್ಲರೂ ವಾದಿಯನ್ನು ಎರಡನೆಯ ಕುಮಾರ ರಾಮೇಂದ್ರನೆಂದು ಗುರುತು ಹಿಡಿದರು. ವಾದಿಯ ಗುರುತು ಸಾಕ್ಷಿದಾರರಿಗೆ ಹತ್ತಿತು ಇಷ್ಟೆ ಅಲ್ಲ, ವಾದಿಯು ಸಾಕ್ಷಿದಾರರ ಗುರುತು ಹಿಡಿದನು. ಪ್ರತಿವಾದಿಯರ ತರ್ಫಿನಲ್ಲಿ ಸಾಕ್ಷಿ ನುಡಿಯಲು ಬಂದವರಲ್ಲಿ 100 ಸಾಕ್ಷಿದಾರರು ವಾದಿ ಸಂನ್ಯಾಸಿಯು ಎರಡನೆಯ ಕುಮಾರನೆಂದು ಗುರುತು ಹಿಡಿದರು. ಇನ್ನು ಕೆಲವರು ಸಾಕ್ಷಿ ನುಡಿದಾಗ ತಮಗೆ ಸಂನ್ಯಾಸಿಯು ಎರಡನೆಯ ಕುಮಾರನೆಂದು ಗುರುತು ಸಿಕ್ಕಿದೆಯೆಂದೂ, ಹಾಗೆ ನುಡಿದರೆ ತಮ್ಮನ್ನು ನೌಕರಿಯಿಂದ ತೆಗೆದು ಹಾಕುವ ಹೆದರಿಕೆ ಹಾಕಿದ್ದಾರೆಂದು ಹೇಳಿದರು. ಪ್ರತಿವಾದಿಯರ ಸಾಕ್ಷಿಗಳಲ್ಲಿ ನಿರ್ದಿಷ್ಟವಾಗಿ ವಾದಿಯು ಎರಡನೆಯ ಕುಮಾರ ರಾಮೇಂದ್ರನಲ್ಲವೆಂದು ಧೈರ್ಯವಾಗಿ ಹೇಳಿದವರಲ್ಲಿ ಎರಡನೆಯ ಕುಮಾರನ ಹೆಂಡತಿ ವಿಭಾವತಿದೇವಿ ಮತ್ತು ಅವಳ ಅಣ್ಣ ಸತ್ಯೇಂದ್ರರು ಮಾತ್ರ. ಆಳಿಗೆ ಆಳಿನ ಲೆಕ್ಕವಿದ್ದರೆ ವಾದಿಯ ಪರವಾಗಿ ಸಾವಿರಾರು ಜನರು ಹೇಳಿದರೂ ಅತಿ ಸಮೀಪದವರಾದ ಅವನ ಹೆಂಡತಿ, ಹೆಂಡತಿಯ ಅಣ್ಣ ಇವರು ಅಲ್ಲಗಳೆಯುತ್ತಿದ್ದಾರೆಂದ ಮೇಲೆ ಈ ಬಗ್ಗೆ ಹೆಚ್ಚಿನ ಪುರಾವೆ ಅಗತ್ಯವಾಯಿತು. ಜನ ಸುಳ್ಳು ಹೇಳಬಹುದು. ಆದರೆ ಸಂಗತಿಗಳು ಸತ್ಯವನ್ನೇ ನುಡಿಯುವವು. ಎರಡನೆಯ ಕುಮಾರ ರಾಮೇಂದ್ರ ನಾರಾಯಣನ ಮೈಮೇಲೆ ಇದ್ದುವೆಂದು ಒಪ್ಪಿಕೊಂಡ ಗುರುತುಗಳು ದೇಹದ ಅದೇ ಭಾಗದಲ್ಲಿ ಬೇರೊಬ್ಬ ವ್ಯಕ್ತಿಯಲ್ಲಿ ಇರಲಾರವು. ಇದ್ದರೆ ಎರಡೂ ವ್ಯಕ್ತಿಗಳು ಒಬ್ಬನೇ ಎಂದು ಹೇಳುವುದಕ್ಕೆ ಆಧಾರ ದೊರೆತಂತಾಗುವದು. ಆದರೆ ರಾಣಿ ವಿಭಾವತಿದೇವಿ ಮತ್ತು ಅವಳ ಅಣ್ಣ ಸತ್ಯೇಂದ್ರ ಇವರು ಹೀಗೆ ವಿರುದ್ಧ ಸಾಕ್ಷಿ ಏಕೆ ನುಡಿಯುತ್ತಿದ್ದರೆಂಬುದು ಸ್ಪಷ್ಟವಿದೆ. ರಾಣಿಗೆ ಎರಡನೆಯ ಕುಮಾರನ ಬಗ್ಗೆ ಜಿಗುಪ್ಸೆಯುಂಟಾಗುವಷ್ಟು "ಹೊರಚಾಳಿ" ಅವನದಾಗಿತ್ತು. ಹೊರಚಾಳಿಯಿಂದ ಬೇನೆ, ರೋಗಗಳು ಅಂಟಿಕೊಂಡಿದ್ದರ ಭೀತಿ ಹೆಂಡತಿಗೆ. ಸತ್ಯೇಂದ್ರನಿಗೆ ಆಸ್ತಿಯ ಉಪಭೋಗವು ಕೈತಪ್ಪುವುದೆಂದು ಹೆದರಿಕೆ.

ಈ ಭೀತಿ, ಹೆದರಿಕೆಗಳು ಏನೇ ಇದ್ದರೂ ವಿಷಯವು ನ್ಯಾಯಾಲಯದ ಎದುರು ಬಂದಿದೆಯೆಂದ ಮೇಲೆ ಎರಡೂ ವ್ಯಕ್ತಿಗಳು ಒಬ್ಬನೆ ಎಂದು ಸಾಬೀತು ಮಾಡಲು ಬಂದ ಪುರಾವೆಯನ್ನು ನೋಡಬೇಕಲ್ಲವೆ? ಎರಡನೆಯ ಕುಮಾರನೆಂದು ಬಾಳಿ ದಾವೆಯ ಚೌಕಾಶಿಯ ಹೊತ್ತಿಗೆ ಸುಮಾರು 25 ವರುಷಗಳು ಗತಿಸಿ ಹೋಗಿದ್ದವು. ದಾವೆಯ ಚೌಕಾಶಿ ನಡೆದಾಗ ಸಂನ್ಯಾಸಿಗೆ 52 ವಯಸ್ಸು ಮಿಕ್ಕಿತ್ತು. ಹಳೆಯ ಛಾಯಾಚಿತ್ರಗಳಿಂದ ಎರಡನೆಯ ಕುಮಾರನ ಚಿತ್ರವನ್ನು ರಚಿಸಲಾಯಿತು. ಜೀವಂತ ಇದ್ದಾಗ ಮೊಚ್ಚೆಕಾರನಲ್ಲಿಯ ಕಾಲಳತೆ, ಸಿಂಪಿಗರಲ್ಲಿಯ ದೇಹದ ಅಳತೆ, ತಂಟೆ ಪ್ರಾರಂಭವಾಗುವ ಮೊದಲು ಇದ್ದ ದಾಖಲೆಗಳು, ಅದರಲ್ಲಿ ಮುಖ್ಯವಾಗಿ ಎರಡನೆಯ ಕುಮಾರನ ಇನ್ಶೂರೆನ್ಸ್ ಪಾಲಿಸಿಯ ಕಾಲಕ್ಕೆ ಸಲ್ಲಿಸಲಾದ ಡಾಕ್ಟರರ ವರದಿ, ಇವು ಉಳಿದ ಸಾಕ್ಷಿದಾರರ ಬಾಯಿಮಾತಿನ ಪುರಾವೆಗೆ ಸಮರ್ಥನೆ ಕೊಡಲು ನೆರವಿಗೆ ಬಂದವು.

1905ರಲ್ಲಿ ಎರಡನೆಯ ಕುಮಾರನು 30,000 ರೂಪಾಯಿಗಳಿಗೆ ಜೀವ ವಿಮಾ ಇಳಿಸಿದ್ದನು.

ಇದರ ಸಲುವಾಗಿ ಡಾಕ್ಟರರ ವರದಿಯೊಂದು ಇದ್ದಿತು. ಅದರಲ್ಲಿ ಮನೆತನದ ಇತಿಹಾಸ, ಹುಟ್ಟಿದ ತಾರೀಖು, ದೇಹದ ಸ್ಫುಟವಾದ ಲಕ್ಷಣಗಳು, ಗುರುತು ಹಿಡಿಯಲು ಅನುಕೂಲವಾಗುವ ದೇಹದ ಮೇಲಿನ ಗುರುತುಗಳು ಇದ್ದವು. ಈ ವರದಿಯನ್ನು ಪ್ರತಿವಾದಿಯರು ಸಂನ್ಯಾಸಿಯು ಮೋಸಗಾರನೆಂದು ಸಿದ್ಧಮಾಡಲು ಹಾಜರ ಮಾಡಬಹುದಾಗಿದ್ದಿತು. ಆದರೆ ಅವರು ತಮ್ಮದೇ ಆದ ಕಾರಣಕ್ಕಾಗಿ ಹಾಜರು ಮಾಡಲಿಲ್ಲ.

1904ರಲ್ಲಿ ಎರಡನೆಯ ಕುಮಾರನು ಕುದುರೆಯ ಲಾಯದಲ್ಲಿ ಅಪಘಾತಕ್ಕೆ ಈಡಾಗಿದ್ದನು. ಎಡದ ಕಾಲಮೇಲೆ ಗಾಲಿ ಹಾದು ಗಾಯವಾಗಿ ಅಲ್ಲಿ ಕಲೆ ಬಿದ್ದಿತ್ತು. ವಿಮಾ ವರದಿಯಲ್ಲಿ ಈ ಗಾಯದ ಸೂಚನೆ ಇದ್ದಿತು. ವಾದಿ ಸಂನ್ಯಾಸಿಯ ಎಡದ ಕಾಲಿನ ಮೇಲೆ ಅಂತಹ ಗಾಯದ ಗುರುತು ಇತ್ತು. ಪಾದದ ರಚನೆಯು ಕೂಡ ಎರಡನೆಯ ಕುಮಾರನ ಪಾದಗಳಿದ್ದಂತೆ ಇದ್ದಿತು. ಮೈದೊಗಲು ಒರಟಾಗಿದ್ದು ಅಲ್ಲಲ್ಲಿ ಗೆರೆಗಳು ಬಿದ್ದಿದ್ದವು. ಮೀನದ ಮೈದೊಗಲು ಇದ್ದಂತೆ ಇದು ಅನುವಂಶಿಕವಾಗಿ ಬಂದ ಲಕ್ಷಣವಾಗಿದ್ದಿತು. ರಾಜೇಂದ್ರ ನಾರಾಯಣ, ಜೋತಿರ್ಮಯಿದೇವಿ, ಮೂವರು ಕುಮಾರರಿಗೆ ಈ ತರಹದ ಮೈದೊಗಲು ಇದ್ದಿತು. ವಾದಿ ಸಂನ್ಯಾಸಿಯ ಮೈದೊಗಲಿನ ಲಕ್ಷಣವೂ ಆ ರೀತಿಯಲ್ಲಿ ಇತ್ತು. ಎರಡನೆಯ ಕುಮಾರನಿಗೆ ಅವನ 'ಮರಣ'ದ ಪೂರ್ವದಲ್ಲಿ ಮೇಹ–ಉಪದಂಶ (Syphylis) ರೋಗವಿದ್ದು ಅದು ಹುಣ್ಣಾಗಿ ಮೈಮೇಲೆ ಕಾಣಿಸಿಕೊಂಡಿತ್ತು ಎಂಬುದು ಒಪ್ಪಿತವಾದ ಸಂಗತಿಯಾಗಿತ್ತು. ವಾದಿ ಸಂನ್ಯಾಸಿಯ ದೇಹದ ಪರೀಕ್ಷಣ ಮಾಡಿದಾಗ ಅವನು ಆ ರೋಗದಿಂದ ಬಳಲಿದ ವ್ಯಕ್ತಿಯೆಂಬುದು ಸಿದ್ಧವಾಯಿತು. ಮತ್ತು ಮೈಮೇಲೆ ಕಾಣಿಸಿಕೊಂಡಿದ್ದವೆಂದು ಒಪ್ಪಿಕೊಳ್ಳಲಾದ ಹುಣ್ಣುಗಳ ಕಲೆಗಳು ಆಯಾ ಭಾಗದಲ್ಲಿ ವಾದಿ ಸಂನ್ಯಾಸಿಯ ಮೇಲೆ ಬಂದವು. ಶಸ್ತ್ರಕ್ರಿಯೆ ಮಾಡಲ್ಪಟ್ಟ ಗುರುತು ಕೂಡ ಸಂನ್ಯಾಸಿಯ ಮೈಮೇಲೆ ಎರಡನೆಯ ಕುಮಾರನ ಮೈಮೇಲೆ ಇದ್ದ ಭಾಗದಲ್ಲಿಯೇ ಇದ್ದಿತು. ಎರಡನೆಯ ಕುಮಾರನ ಒಂದು ಹಲ್ಲು ಮುಕ್ಕಾಗಿದ್ದಿತು. ವಾದಿ ಸಂನ್ಯಾಸಿಯು ಅದೇ ಹಲ್ಲು ಮುಕ್ಕಾಗಿದ್ದಿತು. ಎರಡನೆಯ ಕುಮಾರನ ಹಣೆಗೆ ಆದ ಕುರುವಿನ ಗಾಯದ ಕಲೆ, ಬೆನ್ನಮೇಲೆ ಆದ ಕುರುವಿನ ಗಾಯದ ಕಲೆ, ಬಲಗೈ ಮುಂಗೈಯ ಮೇಲೆ ಹುಲಿಯ ಉಗುರಿನ ಗಾಯದ ಕಲೆ, ಶಿಶ್ನದ ಮೇಲೆ ಮಚ್ಚೆ ಇದ್ದುದು ಈ ಎಲ್ಲವೂ ವಾದಿ ಸಂನ್ಯಾಸಿಯ ಮೈಮೇಲೆ ಆಯಾ ಸ್ಥಳಗಳಲ್ಲಿಯೇ ಕಂಡು ಬಂದುವು. ಎರಡನೆಯ ಕುಮಾರನು ನಡೆವ ರೀತಿ, ಧ್ವನಿ, ಮಾತಿನ ರೀತಿ, ಹಾವಭಾವ ಇವು ಕೂಡ ವಾದಿ ಸಂನ್ಯಾಸಿಯಲ್ಲಿ ಕಂಡು ಬಂದವು.

ಒಂದೇ ಮುಖಚರ್ಯೆಯ ಎರಡು ವ್ಯಕ್ತಿಗಳು ಇರುವದು ಸಾಮಾನ್ಯವಾಗಿ ಅಶಕ್ಯವಾದ ಸಂಗತಿ. ಒಂದು ವೇಳೆ ಇದ್ದರೂ ಅದೇ ತರಹದ ಕಲೆಗಳು, ಅದೇ ದೇಹದ ಭಾಗದಲ್ಲಿ ಇರುವುದು ಅಪರೂಪ. ಜೀವನದಲ್ಲಿಯ ಘಟನೆಗಳ ಮೂಲಕ ಉಂಟಾದ ಕಲೆಗಳು ಎರಡು ವ್ಯಕ್ತಿಗಳಲ್ಲಿ ಒಂದೇ ತೆರನಾಗಿ ಕಾಣುವುದು ತೀರ ದುರ್ಲಭ. ಹಾಗೆ ಒಂದು ವೇಳೆ ಕಂಡುಬಂದರೆ, ಎರಡು ವ್ಯಕ್ತಿಗಳೆಂದು ಕಂಡು ಬಂದವರು ಬೇರೆಯಾಗಿರದೆ ಒಬ್ಬನೇ ವ್ಯಕ್ತಿಯೇ ಅವನು ಎಂದು ತಿಳಿಯಲು ಆಧಾರ ದೊರೆತಂತಾಗುವುದು. ಯಾವನೊಬ್ಬನು ತನ್ನ ಗುರುತು ಪರಿಚಯ ಮಾಡಿಕೊಡಬೇಕಾದರೆ ಇದಕ್ಕಿಂತ ಹೆಚ್ಚಿಗೆ ಏನನ್ನು ತೋರಬಹುದಾದೀತು? ದೇಹ ಲಕ್ಷಣಗಳಿಂದ ವಾದಿ ಸನ್ಯಾಸಿಯು ಎರಡನೆಯ ಕುಮಾರ ರಾಮೇಂದ್ರನೆಂದು ತಿಳಿಯಲು ಆಗ್ರಹಪಡುವಂತಾಯಿತು.

ಇನ್ನು ಮನೋವ್ಯಾಪಾರ. ಪ್ರತಿವಾದಿಗಳ ವಾದದ ಪ್ರಕಾರ ಎರಡನೆಯ ಕುಮಾರನು ವಿದ್ಯಾವಂತ. ಸುಧಾರಿಸಿದ ಶಿಷ್ಟ ಸದ್ಗೃಹಸ್ಥ ಕುಮಾರನಿಗೆ ಪಾಶ್ಚಾತ್ಯ ಆಟಗಳು ಬರುತ್ತಿದ್ದವು. ಆದರೆ ಇವು ವಾದಿ ಸಂನ್ಯಾಸಿಯಲ್ಲಿ ಕಂಡುಬರಲಿಲ್ಲ. ಪುರಾವೆಯನ್ನು ಸೋಸಿ ನೋಡಲಾಗಿ ಪ್ರತಿವಾದಿಗಳ ವಾದವು ಅಸತ್ಯ ವಿಧಾನದ್ದು ಇದ್ದು, ವಾದಿ ಸಂನ್ಯಾಸಿಯಷ್ಟೆ ಎರಡನೆಯ ಕುಮಾರನು 'ಅವಿದ್ಯಾವಂತ' ಪಾಶ್ಚಾತ್ಯ ಆಟ-ನೋಟಗಳು ಗೊತ್ತಿದ್ದಿಲ್ಲ ಎಂಬುದಾಗಿ ಸ್ಪಷ್ಟವಾಯಿತು. ಕುಮಾರನು ಒಳ್ಳೇ ಸುಸಂಸ್ಕೃತ ಬರೆಹಗಾರನಾಗಿದ್ದನೆಂದು ತೋರಲು ವಿಭಾವತಿದೇವಿ ಹಾಜರುಪಡಿಸಿದ ಪತ್ರಗಳು ಖೊಟ್ಟಿಯೆಂದು ಸಿದ್ಧವಾದುವು. ಮತ್ತು ಕುಮಾರನ ಬರಹವೆಂದು ಒಪ್ಪಿಕೊಳ್ಳಲಾಗಿದ್ದ,

ಅವನ ಸಹಿಗಳು ವಾದಿ ಸಂನ್ಯಾಸಿಯ ಸಹಿಯನ್ನು ಹೋಲುತ್ತಿದ್ದವು. ಈ ಎಲ್ಲ ಸಾಮ್ಯ ಲಕ್ಷಣಗಳಿಂದ ವಾದಿ ಸಂನ್ಯಾಸಿಯು ಎರಡನೆಯ ಕುಮಾರನೆಂದು ಸಿದ್ಧಮಾಡಿಕೊಡಲು ಸಹಾಯ ಮಾಡಿ ಮೊದಲನೆಯ ಮುದ್ದೆಯ ಎರಡನೆಯ ಭಾಗವು ಸಾಬೀತು ಮಾಡಲ್ಪಟ್ಟಿತು. ಆದರೆ ಮೊದಲನೆಯ ಮುದ್ದೆಯ ಮೊದಲನೆಯ ಭಾಗವು ಉತ್ತರವನ್ನು ಅಪೇಕ್ಷಿಸುತ್ತಿತ್ತು. ಎರಡನೆಯ ಕುಮಾರನು ಇಂದಿಗೆ ಜೀವಂತ ಇರುವನೆ? ಜೀವಂತ ಇರುವನೆಂದು ಸಿದ್ಧವಾದರೆ ವಾದಿ ಸಂನ್ಯಾಸಿಯೇ ಎರಡನೆಯ ಕುಮಾರನೆಂದು ನಿರ್ಣಯಿಸಲು ಸಹಾಯವಾಗುತ್ತಿತ್ತು. ಆದರೆ ಒಂದು ವೇಳೆ ಎರಡನೆಯ ಕುಮಾರನು ಸತ್ತಿದ್ದೇ ನಿಜವಿದ್ದರೆ ದೇಹಲಕ್ಷಣ, ಮನೋವ್ಯಾಪಾರಗಳ ಪುರಾವೆಗೆ ನಿಲುಮೆ ಇಲ್ಲದಂತಾಗುತ್ತಿತ್ತು. ವಾದಿಯು ತನ್ನ ಗುರುತು ಸಾಬೀತು ಮಾಡಿ ಕೊಟ್ಟಂತೆಯಾಗಿತ್ತು. ಇನ್ನು ಪ್ರತಿವಾದಿಯುವರು ಎರಡನೆಯ ಕುಮಾರನು ಸತ್ತದ್ದೇ ನಿಜ, ಅವನ ದೇಹವು ಬೂದಿಯಾಗುವಂತೆ ಸುಟ್ಟಿದ್ದು ನಿಜ ಎಂಬುದನ್ನು ಸಿದ್ಧಮಾಡಿಕೊಡುವ ಪ್ರಸಂಗ ಬಂದಿತು. ಪ್ರತಿವಾದಿಯರು ಅದನ್ನು ಸಿದ್ಧಮಾಡಿಕೊಡಲಾಗದಿದ್ದರೆ ವಾದಿಯು ತನ್ನ "ಜೀವಂತ ಸಾವಿ"ನ ಐತಿಹ್ಯವನ್ನು ಬಿಡಿಸಿ ತೋರಬೇಕಾಗುವುದು.

ಈ ಭಾಗದ ಪುರಾವೆಯುಳ್ಳ ಕಥಾನಕಕ್ಕೆ ದಾರ್ಜಿಲಿಂಗ ಪ್ರಕರಣವೆಂಬ ಹೆಸರು ಬಂದಿತು. ಇಲ್ಲಿ ಮುಖ್ಯ ಪ್ರಶ್ನೆಗಳು ಎರಡು– 1. ಎರಡನೆಯ ಕುಮಾರನು ಮೃತಪಟ್ಟನೆ? 2. ಅವನ ದೇಹದ ದಹನಕ್ರಿಯೆ ಆಯಿತೆ? ಈ ಎರಡು ಪ್ರಶ್ನೆಗಳಿಗೆ ಸಂಬಂಧಿಸಿ ಇನ್ನು ಅನೇಕ ಪ್ರಶ್ನೆಗಳು ಏಳುವುವು. ಈ ಆನುಷಂಗಿಕ ಪ್ರಶ್ನೆಗಳ ಬಗ್ಗೆ ವಾದಿ, ಪ್ರತಿವಾದಿಯರ ವಾದಗಳು ಬೇರೆಯಾಗಿರುವುವು. ಎರಡನೆಯ ಕುಮಾರನು ಸಾಯಲಿಲ್ಲ. ಮತ್ತು ಅವನ ದಹನಕ್ರಿಯೆ ನಡೆಯಲಿಲ್ಲವೆಂದು ವಾದಿ ಸಂನ್ಯಾಸಿಯು ವಾದ ಹೂಡಿದರೆ, ಎರಡನೆಯ ಕುಮಾರನು ಸತ್ತುದೆ ನಿಜ ಮತ್ತು ಅವನ ದಹನಕ್ರಿಯೆ ನಡೆದುದೇ ನಿಜ, ಎಂದು ಪ್ರತಿವಾದ ಹೂಡಿದ್ದರು. ಆದ್ದರಿಂದ ಈ ವಿಷಯಗಳ ನಿರ್ಣಯವಾಗಬೇಕಾಯಿತು.

1. ಎರಡನೆಯ ಕುಮಾರನ ಬೇನೆಯ ಸ್ವರೂಪ ಮತ್ತು ಕಾಲಾವಧಿ.
2. ಸಾವಿನ ಕಾರಣ ಇಲ್ಲವೆ ಸತ್ತಂತೆ ಆದುದರ ಕಾರಣ.
3. ಸತ್ತನೆಂದು ಹೇಳಲಾದ ಸಮಯ.
4. ಅಂತ್ಯ ವಿಧಿಯ ಮೆರವಣಿಗೆ.
5. 1909ರ ಮೇ 8ಕ್ಕೆ ಸಂಜೆಯ ಮಳೆ-ಬಿರುಗಾಳಿ ವಿಷಯ.
6. ಮರುದಿನ ನಡೆದ ಅಂತ್ಯಕ್ರಿಯೆ ಮೆರವಣಿಗೆ.

ಎರಡನೆಯ ಕುಮಾರನಿಗೆ ಅಸ್ವಸ್ಥವಾದುದು 1909ರ ಮೇ 6ನೇಯ ತಾರೀಖಿಗೆ ಎಂದು ವಾದಿ ಪ್ರತಿವಾದಿಯರು ಒಪ್ಪಿದ್ದರು. ಆದರೆ ಬೇನೆಯು ಉಲ್ಬಣಾವಸ್ಥೆ ತಲುಪಿದ್ದು 8ನೇಯ ತಾರೀಖಿನ ಸಂಜೆಯವರೆಗೆ ಎಂದು ವಾದಿಯು ಅಂದರೆ, ಮಧ್ಯ ರಾತ್ರಿಯವರೆಗೆ ಎಂದು ಪ್ರತಿವಾದಿಯರು. ಸತ್ತಂತೆ ಆದುದಕ್ಕೆ ವಿಷಪ್ರಯೋಗವೇ ಕಾರಣವೆಂದು ವಾದಿಯ ಮತ. ಸಾವಿನ ಕಾರಣವು (Beliary colic) ಎಂದು ಪ್ರತಿವಾದಿಯರ ವಾದ. ಸತ್ತನೆಂದು ಹೇಳಲಾದ ಸಮಯವು ವಾದಿಯ ಪ್ರಕಾರ ಮೇ 8ರ ಮುಚ್ಚಂಜೆ ಪ್ರತಿವಾದಿಯರ ಪ್ರಕಾರ ರಾತ್ರಿಯ ಸುಮಾರು 11-45 ಗಂಟೆ. ಅಂತ್ಯವಿಧಿಯ ಮೆರವಣಿಗೆಯು ಮೇ 8ರ ಸಂಜೆಗೆ ಹಳೆಯ ಸ್ಮಶಾನದ ಕಡೆಗೆ ಎಂದು ವಾದಿಯು ಹೇಳಿಕೆಯಾದರೆ, ಮೆರವಣಿಗೆ ಮೇ 9ರ ಬೆಳಗಿನಲ್ಲಿ ಹೊಸ ಸ್ಮಶಾನದ ಕಡೆಗೆ ಎಂದು ಪ್ರತಿವಾದಿಯರ ವಾದ. ಮೇ 8ಕ್ಕೆ ಸಂಜೆಗೆ ಭಯಂಕರ ಮಳೆಗಾಳಿ ಇದ್ದಿತೆಂದು ವಾದಿಯು ಹೇಳಿಕೆಯಾದರೆ, ಮಳೆ-ಗಾಳಿ ಇದ್ದೇ ಇಲ್ಲವೆಂದು ಪ್ರತಿವಾದಿಯರ ವಾದ. 9ನೆಯ ತಾರೀಖು ಬೆಳಗು ಹೊರಟ ಮೆರವಣಿಗೆಯು ಎರಡನೆಯ ಕುಮಾರನ ದೇಹವನ್ನು ಕೊಂಡೊಯ್ಯದೆ ಬೇರೆ ದೇಹವನ್ನು ಮುಖ ಮುಚ್ಚಿ ಹೊಸ ಸ್ಮಶಾನಕ್ಕೆ ಒಯ್ಯಲಾಯಿತು ಎಂದು ವಾದಿಯು ಹೇಳಿಕೆಯಾದರೆ, ಅದು ಕುಮಾರನ ಮೃತ ದೇಹವನ್ನು ಹೊತ್ತ ಮೆರವಣಿಗೆಯೆಂದು ಪ್ರತಿವಾದಿಯರ ವಾದವಾಗಿದ್ದಿತು.

ಈ ವಾದ ಪ್ರತಿವಾದಗಳು ತೀರ ವಿಸಂಗತವಾಗಿದ್ದುದರಿಂದ ಒಂದು ಸಿದ್ಧವಾದರೆ ಇನ್ನೊಂದು ಸುಳ್ಳು ಎಂದು ತೋರಿಸಿದಂತಾಗುತ್ತಿತ್ತು. ಇದೊಂದು ದಿವಾಣಿ ಮೊಕದ್ದಮೆಯಾದರೂ, ವಿಚಾರಣೆಯು ವಿವರದಲ್ಲಿ ಕ್ರಿಮಿನಲ್ ಪ್ರಕರಣದಂತೆ ಕಂಡು ಬಂದಿತು. ಕೊಲೆಯ ಪ್ರಯತ್ನ ನಡೆಯಿತೆಂದು ಪುರಾವೆಗಳು ಮುಂದೆ ಬಂದರೂ ಆ ರೀತಿಯ ಗುನ್ಹೆಯ ವಿಚಾರಣೆ ನಡೆಯದೆ ಎರಡನೆಯ ಕುಮಾರನೆಂದು ಹೇಳಿಕೊಳ್ಳುತ್ತಿದ್ದ ವಾದಿ ಸಂನ್ಯಾಸಿಯ ವಾದ ಸಮರ್ಥನೆಗೆ ಎಷ್ಟು ಬಲ ವಿದೆಯೆಂಬುದನ್ನು ನೋಡುವುದೇ ಈ ದಾರ್ಜಿಲಿಂಗ ಪ್ರಕರಣದ ವಿಚಾರಣೆಯ ಉದ್ದೇಶ ವಾಗಿದ್ದಿತು. ಆದರೆ ಒಂದು ಬಗೆಯ ಒಳಸಂಚು ನಡೆಯಿತೆಂಬುದಕ್ಕೆ ಸಾಕಷ್ಟು ಆಧಾರಗಳಿದ್ದುವು.

ದಾರ್ಜಿಲಿಂಗ ಸಿವಿಲ್ ಸರ್ಜನ್‌ನಾದ ಕರ್ನಲ್ ಕ್ಯಾಲ್‌ವರ್ಟನು ಮೊದಲನೆಯ ಕುಮಾರನಿಗೆ ಬರೆದ ಸಾಂತ್ವನದ ಪತ್ರವು ಈ ಸಂಬಂಧದಲ್ಲಿ ಹಾಜರಾಗಿದ್ದಿತು. ಅದರಲ್ಲಿ ಅವನು ಎರಡನೆಯ ಕುಮಾರನು 'ಕಾಲಿಕ್' (Colic) ಬೇನೆಯಿಂದ ಸತ್ತನು ಎಂದು ಉಲ್ಲೇಖಿಸಿದ್ದನು. ಮುಂದೆ 2 ತಿಂಗಳ ನಂತರ ಇದೇ ಸರ್ಜನ್‌ನು ಎರಡನೆಯ ಕುಮಾರನ ವಿಮಾ ಹಣವನ್ನು ವಾಸದಾರರು ಪಡೆಯುವುದಕ್ಕೆ ಅನುಕೂಲವಾಗಲು ಒಂದು ಅಫಿಡವೇಟು ಮಾಡಿ ಅದರಲ್ಲಿ ಎರಡನೆಯ ಕುಮಾರನು 1909ರ ಮೇ 8ನೆಯ ದಿನಾಂಕ ರಾತ್ರಿ 11-45ಕ್ಕೆ ಮೃತಪಟ್ಟನು ಎಂದು ಹೇಳಿದ್ದನು. ಕರ್ನಲ್ ಕ್ಯಾಲ್‌ವರ್ಟನು ಈ ದಾವೆಯ ಚೌಕಾಶಿ ನಡೆದಾಗ ಇಂಗ್ಲೆಂಡದಲ್ಲಿದ್ದನು. ಅವನ ಸಾಕ್ಷಿಯು ಕಮೀಶನ್ ಮೇಲೆ ನಡೆಯಿತು. ಅವನು ಎರಡನೆಯ ಕುಮಾರನಿಗೆ ಒಟ್ಟು 14 ದಿನ ಜಡ್ಡಾಗಿದ್ದಿತೆಂದೂ, 'ಕಾಲಿಕ್' ಬೇನೆಯು ಆಗಾಗ್ಗೆ ಬರುತ್ತಿತ್ತೆಂದೂ ತನ್ನ ಸಾಕ್ಷಿಯಲ್ಲಿ ಹೇಳಿದನು. ಈ ಸಂಗತಿಯು ವಾದಿ ಪ್ರತಿವಾದಿಯರ ವಾದಗಳಲ್ಲಿ ಇರಲಿಲ್ಲ. ಮೇ 6ನೆಯ ತಾರೀಖಿನವರೆಗೆ ಎರಡನೆಯ ಕುಮಾರನು ಆರೋಗ್ಯವಾಗಿದ್ದನೆಂದು ಅವರ ವಾದವಾಗಿತ್ತು. ಆದ್ದರಿಂದ ಈ ಸಾಕ್ಷಿಯು ನುಡಿದುದು ಮತ್ತು ಅವನು 1909ರಲ್ಲಿ ಬರೆದ ಪತ್ರ ಮಾಡಿದ ಅಫಿಡವೇಟು ಅಷ್ಟು ಬೆಲೆಯವು ಅನ್ನಿಸಲಿಲ್ಲ. ಆ ಕಾಗದ ಪತ್ರಗಳ ಅಸಂಬದ್ಧತೆಯನ್ನು ಕಂಡುಕೊಳ್ಳಲು ಇನ್ನೂ ಬೇರೆ ದಾಖಲೆಗಳು ಇದ್ದವು.

1909 ಮೇ 6ನೆಯ ತಾರೀಖಿನಿಂದ 8 ತಾರೀಖಿನವರೆಗೆ ದಾರ್ಜಿಲಿಂಗದಿಂದ ಜಯದೇವಪುರಕ್ಕೆ ಜಯದೇವಪುರದಿಂದ ದಾರ್ಜಿಲಿಂಗಕ್ಕೆ ಬಂದ ತಾರುಗಳು ಬಹು ಮಹತ್ವದ ದಾಖಲೆಗಳಾ ಗಿದ್ದವು. ಈ ಅವಧಿಯಲ್ಲಿ ಒಟ್ಟು ಎಂಟು ತಾರುಗಳು ಕಳಿಸಲ್ಪಟ್ಟಿದ್ದವು. ಮೊದಲನೆಯ ತಾರು ಮೇ 6ರಂದು ಬೆಳಗಿನ 10ಕ್ಕೆ ಜಯದೇವಪುರಕ್ಕೆ ಕಳಿಸಿದ್ದು– "ನಿನ್ನೆರಾತ್ರಿ ಕುಮಾರನಿಗೆ 99 ಡಿಗ್ರಿಗಿಂತ ಕಡಿಮೆ ಜ್ವರ ಇತ್ತು. ಕಾಳಜಿ ಮಾಡುವ ಕಾರಣವಿಲ್ಲ. ಈಗ ಜ್ವರವಿಲ್ಲ. ನಿಮ್ಮ ಆರೋಗ್ಯಕ್ಕೆ ತಾರು ಮಾಡಿರಿ." 2ನೆಯ ತಾರು ಅಂದೇ ಸಂಜೆ 6-45ಕ್ಕೆ ಜಯದೇವಪುರಕ್ಕೆ ಕಳಿಸಿದ್ದು– "ಕುಮಾರನಿಗೆ ನಿನ್ನೆ ಜ್ವರ ಬಂದಿದೆ. ತೀವ್ರವಾದ ಹೊಟ್ಟೆನೋವು ಸಿವಿಲ್ ಸರ್ಜನ್‌ರು ಆರೈಕೆ ಮಾಡುತ್ತಿದ್ದಾರೆ." 3ನೇಯ ತಾರು ಅದೇ ದಿನ ರಾತ್ರಿ 8-55ಕ್ಕೆ ಜಯದೇವಪುರಕ್ಕೆ ಕಳಿಸಿದ್ದು– "ಜ್ವರ ಮತ್ತು ಹೊಟ್ಟೆ ನೋವು ಎರಡು ತಾಸುಗಳವರೆಗೆ ಇದ್ದಿತು. ಈಗ ಇಲ್ಲ. ಕಾಳಜಿಗೆ ಕಾರಣವಿಲ್ಲ. ಮತ್ತೆ ನೋವು ಬರುವ ಹೆದರಿಕೆಯಿಲ್ಲ." ಈ ಮೂರು ತಾರುಗಳಲ್ಲಿ 1-3 ಇವುಗಳನ್ನು ಮುಕುಂದ ಕಳಿಸಿದ್ದು 2ನೆಯದನ್ನು ಕಬ್ರಾಲನೆಂಬುವನು ಕಳಿಸಿದ್ದು. ಈ ಮೂರು ತಾರುಗಳಲ್ಲಿ ಕಾಲಿಕ್ ನೋವಿನ ಬಗ್ಗೆ ಉಲ್ಲೇಖವಿಲ್ಲೆಂಬುದು ನೆನೆಯುತಕ್ಕದ್ದು. ಮೇ 7ನೆಯ ದಿನಾಂಕಕ್ಕೆ ಬೆಳಗಿನ 7-10ಕ್ಕೆ ಜಯದೇವ ಪುರಕ್ಕೆ ಮುಕುಂದನು ಕಳಿಸಿದ ತಾರಿನಲ್ಲಿ "ನಿನ್ನೆ ರಾತ್ರಿ ಕುಮಾರನಿಗೆ ಚೆನ್ನಾಗಿ ನಿದ್ದೆ ಹತ್ತಿತ್ತು. ಜ್ವರ ವಿಲ್ಲ, ನೋವಿಲ್ಲ." ಮೇ 8ಕ್ಕೆ ಜಯದೇವಪುರಕ್ಕೆ ಕಳಿಸಿದ ಮೊದಲನೆಯ ತಾರು ಬೆಳಗಿನ 8-20 ರಂದು. ಇದನ್ನು ಡಾ॥ ಅಶುತೋಷ ಕಳಿಸಿದ್ದರು. "ನಿನ್ನೆ ಜ್ವರ ಮತ್ತು ಸ್ವಲ್ಪ ನೋವು ಇದ್ದಿತು. ಈಗ ಜ್ವರವಿಲ್ಲ, ಕಾಳಜಿಗೆ ಕಾರಣವಿಲ್ಲ." ಅದೇ ದಿನ ಬೆಳಗಿನ 11-15ಕ್ಕೆ ಮುಕುಂದನ ತಾರು– "ಜ್ವರ ವಿಲ್ಲ. ಸ್ವಲ್ಪ ನೋವು, ಕಾರಿಕೊಳ್ಳುವ ಲಕ್ಷಣಗಳು. ಸಿವಿಲ್ ಸರ್ಜನರು ಆರೈಕೆ ಮಾಡುತ್ತಿದ್ದಾರೆ. ಬರುವವರಿದ್ದೇವೆ. ಅನ್ನ ಕೊಡಲಾಗುತ್ತಿದೆ. ದಾರೀ ವೆಚ್ಚಕ್ಕೆ 1000 ರೂ. ತಾರು ಮಾಡಿ ಕಳಿಸಿರಿ." ಅದೇ ದಿನ ಮಧ್ಯಾಹ್ನ 3-10ಕ್ಕೆ ಮುಕುಂದನಿಂದ ಮತ್ತೆ ತಾರು– "ಕುಮಾರನಿಗೆ ಜೋರಾಗಿದೆ. ನೀರಾಗಿ ರಕ್ತ ಸಹಿತ ಭೇದಿಯಾಗುತ್ತಿದೆ. ಬೇಗ ಹೊರಟು ಬನ್ನಿರಿ." ಇದಕ್ಕೆ ಮೊದಲನೆಯ

ಕುಮಾರನಿಂದ ಮಧ್ಯಾಹ್ನ 4-45ಕ್ಕೆ ತಾರು– "ಬಹಳ ಕಾಳಜಿಯಾಗಿದೆ. ಸ್ಥಿತಿ ಹೇಗಿದೆ ಎಂಬುದನ್ನು ಆಗಾಗ ತಿಳಿಸಿರಿ. ಉತ್ತಮ ವೈದ್ಯಕೀಯ ಚಿಕಿತ್ಸೆ ಮಾಡಿಸಿರಿ. ಸದ್ಯದ ಸ್ಥಿತಿ ಹೇಗಿದೆ ಎಂಬುದನ್ನೂ ತಾರು ಮಾಡಿ ತಿಳಿಸಿರಿ."

ಈ ತಾರುಗಳ ಒಕ್ಕಣಿಕೆಯು ವಿಸಂಗತಿಯನ್ನು ತೋರುವುದಲ್ಲದೆ ದಾರ್ಜಿಲಿಂಗದಿಂದ 3-10ರ ನಂತರ ತಾರುಗಳು ಇಲ್ಲ. ಮೊದಲನೆಯ ಕುಮಾರನು ಆಗಾಗ ಸ್ಥಿತಿಗತಿಯ ಬಗ್ಗೆ ತಾರು ಕಳಿಸಲು ಹೇಳಿದ್ದರೂ ಆ ಮುಂದೆ ತಾರುಗಳಿಲ್ಲ ಎಂಬುದು ಬಹು ಮಹತ್ವದ ಸಂಗತಿಯಾಗಿದೆ. ಏಳನೆಯ ತಾರಿನಲ್ಲಿ ಸಿವಿಲ್ ಸರ್ಜನ್‌ರು ಇದ್ದ ಬಗ್ಗೆ ಉಲ್ಲೇಖವಿಲ್ಲ. ವಿಭಾವತಿದೇವಿಯು ತನ್ನ ಸಾಕ್ಷಿಯಲ್ಲಿ "ಸಿವಿಲ್ ಸರ್ಜನ್‌ರು ಮಧ್ಯಾಹ್ನ ಸಿಕ್ಕಲಿಲ್ಲ. ತಡಮಾಡಿ ಬಂದರು. ಆಗ ಡಾ॥ ಸರಕಾರ ಎಂಬವರನ್ನು ಕರೆಸಲಾಗಿತ್ತು" ಎಂದಿದ್ದಳು. ಈ ಸಂಗತಿಗಳನ್ನು ಒಟ್ಟಾರೆ ಹೊಂದಿಸಿ ನೋಡಿದಾಗ ಎರಡನೆಯ ಕುಮಾರನು ಕಾಲಿಕ್ ಬೇನೆಯಿಂದ ಬಳಲಿಲ್ಲ. ಮತ್ತು ಮೇ 8ರ ರಾತ್ರಿ 11-45ರವರೆಗೆ ಬದುಕಿರಲಿಲ್ಲ ಎಂದು ಧ್ವನಿತವಾಗುವುದು. ಎರಡನೆಯ ಕುಮಾರನು ಸತ್ತನೆಂದು ತಿಳಿಸುವ ತಾರು ನ್ಯಾಯಾಲಯದೆದುರು ಹಾಜರಾಗಲಿಲ್ಲ. ಅದು ಹಾಜರಾಗಿದ್ದರೆ ಸಾವಿನ ವೇಳೆ ತಿಳಿದು ಪ್ರತಿವಾದಿಯರ ವಾದಕ್ಕೆ ವಿಸಂಗತವಾಗುತ್ತಿತ್ತು.

ಎರಡನೆಯ ಕುಮಾರನು ಯಾವ ಬೇನೆಯಿಂದ ಮೃತಪಟ್ಟನು ಎಂಬುದನ್ನು ತಿಳಿಯಲು ಅವನಿಗೆ ಕೊಟ್ಟ ಔಷಧಿ ಪತ್ರಿಕೆಗಳೇ ಒಳ್ಳೆಯ ದಾಖಲೆಗಳಾದುವು. ಔಷಧಿ ಪತ್ರಿಕೆಗಳಲ್ಲಿ ಕಾಣಿಸಿದ ಔಷಧಿಗಳಲ್ಲಿ ಯಾವೂ 'ಕಾಲಿಕ್' ಬೇನೆಗಾಗಿ ಇದ್ದಿಲ್ಲ. ಅವೆಲ್ಲವೂ ಅಗ್ನಿಮಾಂದ್ಯ, ಒರಟು ಬರುವಿಕೆ, ಹೊಟ್ಟೆನೋವು, ಭೇದಿ ತಡೆಯಲು ಇದ್ದವು. ಮೇ 8ರ ಮಧ್ಯಾಹ್ನ ಕೊಟ್ಟ ಔಷಧವು ರೋಗಿಯು ನಿಶ್ಶಕ್ತನಾಗಿ ಗತಪ್ರಾಣವಾಗುವುದನ್ನು ತಡೆಯಲು ಕೊಟ್ಟ ಔಷಧವಾಗಿದ್ದಿತು. ಇದು ಮೇ 8ರ ಮಧ್ಯಾಹ್ನಕ್ಕೆ ಕೊಟ್ಟ ಔಷಧಿಯಾದ್ದರಿಂದ ಆ ಸಮಯಕ್ಕೆ ಕುಮಾರನು ಅತ್ಯವಸ್ಥೆಯಲ್ಲಿದ್ದನೆಂದು ಸಿದ್ಧವಾಗುವುದು. 'ಕಾಲಿಕ್' ಬೇನೆಗೆ ಔಷಧಿಯೇ ಇಲ್ಲದೆ ಈ ಅತ್ಯವಸ್ಥೆಯಲ್ಲಿ ಎರಡನೆಯ ಕುಮಾರನು ಮೇ 8ರ ಮಧ್ಯಾಹ್ನದಲ್ಲಿ ಇರಬೇಕಾದರೆ ಅವನಿಗೆ ಆದ ಬೇನೆಯೇನು? ಕಾರಿಕೊಳ್ಳುವುದು, ನೀರಾಗಿ ಭೇದಿಯಾಗುವುದು. ಭೇದಿಯ ಸಂಗಡ ರಕ್ತ ಹೋಗುವುದು. ಈ ಲಕ್ಷಣಗಳಂತೂ ಒಪ್ಪಿಕೊಂಡ ಸಂಗತಿಗಳಾಗಿದ್ದವು. ತಾರುಗಳಲ್ಲಿ ಈ ವಿಷಯ ಬಂದಿದೆ. ಮೈಯಲ್ಲಿಯ ನೀರು ಹೊರಗೆ ಹೋಗಿ ನೀರಿನ ಅಂಶ ಕಡಿಮೆಯಾದಾಗ ಒರಟು ಬರುವುದು ಸ್ವಾಭಾವಿಕ. ಅಲ್ಲದೆ ರಕ್ತದ ಭೇದಿಯಾಗುವುದು ನಿಶ್ಶಕ್ತಕ್ಕೆ ಕಾರಣ. ಈ ಎರಡೂ ಲಕ್ಷಣಗಳು ಯಾತರಿಂದ ಆಯಿತು? ಇವು 7ನೆಯ ತಾರೀಖಿಗೆ ಡಾ॥ ಆಶುತೋಷ ಕೊಟ್ಟ 'ಅರ್ಸೆನಿಕ ಮಿಕ್ಸ್‌ಚರ್'ದಿಂದ ಆಯಿತೆಂಬುದು ಸ್ಪಷ್ಟವಿದೆ. ಯಾಕೆ ಆ ಆರ್ಸೆನಿಕ ಔಷಧಿ ಕೊಡಲಾಯಿತೆಂಬುದು ಸ್ಪಷ್ಟವಾಗಲಿಲ್ಲ. ಆದರೆ ಎರಡನೆಯ ಕುಮಾರನು ಮೇ 8ಕ್ಕೆ ತೋರ್ಪಡಿಸಿದ ಲಕ್ಷಣಗಳು ಈ 'ಆರ್ಸೆನಿಕ್' ವಿಷ ಪ್ರಯೋಗದಿಂದ ಎಂಬುದು ಮಾತ್ರ ಖಚಿತವಾಯಿತು.

ಇನ್ನು ಮೂರನೆಯ ಪ್ರಶ್ನೆ. ಎರಡನೆಯ ಕುಮಾರನು ಸತ್ತನೆಂದು ಹೇಳಲಾದ ಸಮಯ ವಾದಿಯ ಹೇಳಿಕೆಯ ಪ್ರಕಾರ ಮೇ 8ರ ಮುಚ್ಚಂಜೆ. ಪ್ರತಿವಾದಿಯ ಹೇಳಿಕೆಯ ಪ್ರಕಾರ ಮೇ 8ರ ರಾತ್ರಿ 11-45ಕ್ಕೆ ತಾರುಗಳ ಬಗ್ಗೆ ಹೇಳುವಾಗ ಸತ್ತ ನಂತರ ಕೊಟ್ಟ ತಾರು ಕೋರ್ಟಿನಲ್ಲಿ ಹಾಜರ ಆಗಿಲ್ಲವೆಂಬುದನ್ನು ಮರೆಯಲಾಗದು. ಪ್ರತಿವಾದಿಯ ವಾದವು ಎರಡನೆಯ ಕುಮಾರನು 1909ರ ಮೇ 8ಕ್ಕೆ ಸತ್ತನೆಂದೂ, ಅವನ ದೇಹವು ಬೂದಿಯಾಗುವಂತೆ ಸುಡಲಾಯಿತೆಂದೂ ಇದ್ದಿತಾದುದರಿಂದ ಅದನ್ನು ಸಿದ್ಧ ಮಾಡುವ ಭಾರ ಅವರ ಮೇಲೆ ಇದ್ದರೂ, ಸತ್ತ ಬಗ್ಗೆ ಕೊಟ್ಟ ತಾರು ಕೋರ್ಟಿನ ಎದುರು ಬರದಂತೆ ನೋಡಿಕೊಂಡರು. ಅದು ಬಂದಿದ್ದರೆ ಅವರು ಹೇಳುವ ಕತೆಯೆಲ್ಲ ಬಯಲಿಗೆ ಬಂದು ಸುಳ್ಳು ಎಂದು ಸ್ವಯಂಮೇವ ಸಿದ್ಧವಾಗುತ್ತಿತ್ತು. ತಾರುಗಳು ಮೇ 8ರ ಮಧ್ಯಾಹ್ನ 3-10ಕ್ಕೆ ಕೊನೆಗೊಂಡಿವೆ. ಮಧ್ಯಾಹ್ನ ಕೊಟ್ಟ ಔಷಧವು ಕುಮಾರನ ಅತ್ಯವಸ್ಥೆಯನ್ನು ಸೂಚಿಸುತ್ತಿದೆ. ಕರ್ನಲ್ ಕ್ಯಾಲ್‌ವರ್ಟರು ಸಿಕ್ಕದೇ ಇದ್ದಾಗ ಡಾ॥ ಸರಕಾರ ಬಂದರೆಂಬುದು ತಿಳಿದಿದೆ. ಡಾ॥ ಸರಕಾರರು ಬಂದುದು ಮುಚ್ಚಂಜೆಗೆ. ಅವರು ಬಂದು ಏನೂ ಮಾಡುವ ಸ್ಥಿತಿ

ಯಲ್ಲಿದ್ದಿಲ್ಲವೆಂಬುದರಿಂದ ಆಗಲೇ ಎರಡನೆಯ ಕುಮಾರನು 'ಮೃತ'ಪಟ್ಟಿರಬೇಕು.

ಇದನ್ನು ಖಚಿತ ಮಾಡಿದವರು ಈ ನಾಲ್ಕು ಸದ್ಗೃಹಸ್ಥರು: ಪ್ರೊಫೆಸರ ರಾಧಾ ಕುಮುದ ಮುಖರ್ಜಿ ಎಂ.ಎ.ಪಿ.ಬಿ.ಎಸ್., ಪಿ.ಎಚ್.ಡಿ., ಶ್ರೀ ಎಸ್.ಎಸ್. ಮಿತ್ರ ಎಂ.ಎ.ಎ. ಆರ್.ಸಿ.ಎಸ್. (ಲಂಡನ್), ಡಾ॥ ಹಿರಾಲಾಲ ರೆ.ಎ.ಬಿ. (ಹಾರ್ವರ್ಡ್), ಶ್ರೀ ನಾಗೇಂದ್ರ ರಕ್ಷಿತ ದೊಡ್ಡ ವ್ಯವಹಾರಸ್ಥ. ಇವರು ಅಂದು ದಾರ್ಜಿಲಿಂಗದಲ್ಲಿದ್ದರು. ಬೇಸಿಗೆಯ ಬಿಸಿಲಿನಲ್ಲಿ ತಂಪು ಸ್ಥಳವೆಂದು ಹವಾ ಬದಲಿಸಲು ಬಂದ ಸದ್ಗೃಹಸ್ಥರಿವರು. ಇವರು ಸಂಜೆಯಲ್ಲಿ ಲಿವಿಸ್ ಜುಬಿಲಿ ಸ್ಯಾನಿಟೋರಿಯಂದಲ್ಲಿರುವಾಗ ಅವರಿಗೆ ಸುಮಾರು 8 ಗಂಟೆಗೆ ಯಾರೋ ಬಂದು ಹೇಳಿದರು. ಭವಾಲದ ಎರಡನೆಯ ಕುಮಾರ ತೀರಿಕೊಂಡಿದ್ದಾನೆ, ಹೆಣ ಹೊರಲಿಕ್ಕೆ ಬಂದು ನೆರವಾಗಬೇಕು. ಈ ಪುರಾವೆಯಿಂದ ಎರಡನೆಯ ಕುಮಾರನು ಮೇ 8ರ ಸಂಜೆಗೆ 8ರಕ್ಕಿಂತ ಮೊದಲೇ ಮೃತಪಟ್ಟಿರಬೇಕು ಎಂಬುದು ಸಾಬೀತಾಗುವುದು. ಇದರಿಂದ ರಾತ್ರಿ 11-45ಕ್ಕೆ ತೀರಿಕೊಂಡನೆಂದು ಹೇಳುವ ಕರ್ನಲ್ ಕ್ಯಾಲ್ವರ್ಟರ ಮಾತು ಸತ್ಯವಲ್ಲವೆಂದೂ, ಅವರು ಮಾಡಿದ ಅಫಿಡವೇಟು ಕೂಡ ಹೇಳಿ ಮಾಡಿಸಿದ್ದೆಂದೂ ಸಿದ್ಧವಾಗುವುದು. ಇದರಿಂದ 9ನೆಯ ತಾರಿಖೀನ ಬೆಳಗು ನಡೆದ ಅಂತ್ಯಕ್ರಿಯೆಯ ವಿಷಯವು ಕುಮಾರನಿಗೆ ಸಂಬಂಧಿಸಿದ್ದಿಲ್ಲವೆಂದೂ ಸೂಚಿತವಾಗುವುದು. ಏಕೆಂದರೆ ಮೇ 8ರ ಸಂಜೆಗೆ ಹೆಣ ಹೊರಲಿಕ್ಕೆ ಬಂದು ಮೆರವಣಿಗೆಯಲ್ಲಿ ಭಾಗವಹಿಸಿದ ಬಾಬು ಪದ್ಮಿನಿ ಮೋಹನ ನಿಯೋಗಿಯುವರು ಹಳೆಯ ಸ್ಮಶಾನಕ್ಕೆ ಹೆಣವನ್ನು ಸಾಗಿಸಲಾಯಿತೆಂದೂ, ಸ್ಮಶಾನ ಮುಟ್ಟಿದ ಕೂಡಲೆ ಮಳೆಯ ಲಕ್ಷಣ ಕಂಡದ್ದರಿಂದ ತಾವು ಬೇಗನೇ ತಿರುಗಿ ಬಂದರೆಂದೂ ಹೇಳಿದ್ದರು. ನಿಯೋಗಿಯುವರು ಗೌರವ ಮ್ಯಾಜಿಸ್ಟ್ರೇಟರೆಂದು 20 ವರುಷ ಕೆಲಸ ಮಾಡಿದ ಮಹನೀಯರು. ಇವರಲ್ಲದೆ ಮೆರವಣಿಗೆಯಲ್ಲಿ ಭಾಗವಹಿಸಿದ ಅನೇಕರು ಸಾಕ್ಷಿ ನುಡಿದಿದ್ದರು. ಅಂತ್ಯ ಸಂಸ್ಕಾರದ ಸಾಮಾನುಗಳನ್ನು ಮಾರಿದ ಅಂಗಡಿಯುವನು ಕೂಡ ಅವುಗಳನ್ನು ಮೇ 8ರ ಸಂಜೆಗೆ ಒಯ್ದರೆಂದು ಸಾಕ್ಷಿ ನುಡಿದ್ದಾನೆ.

ಈ ನಾಲ್ಕು ಪ್ರಶ್ನೆಗಳ ಸಂಬಂಧವಾಗಿ ಬಂದ ವಿವರವಾದ ಪುರಾವೆಗಳಿಂದ ಪ್ರತಿವಾದಿಯ ವಾದವು ಸಾಬೀತಾಗದೆ ಉಳಿಯಿತು. ಮ್ಯಾಜಿಸ್ಟ್ರೇಟ ನಿಯೋಗಿಯುವರು, ಇನ್ನಿತರರು ಅಂದು ಸಂಜೆ ಮಳೆಯಾಯಿತೆಂದು ಹೇಳಿದರು. ಅದನ್ನು ಅಲ್ಲಗಳೆಯಲು ಪ್ರತಿವಾದಿಗಳು ಸೇಂಟ್ ಪಾಲ್ಸ್ ಹವಾಮಾನ ನಿರೀಕ್ಷಾಲಯದಲ್ಲಿಯ ವೃಷ್ಟಿ ಮಾಪನ ರಿಜಿಸ್ಟರ್ ಹಾಜರು ಮಾಡಿದರು. ಅದರಲ್ಲಿ ಮೇ 8-9ಕ್ಕೆ ಮಳೆ ಬಿರುಗಾಳಿ ಆದ ಉಲ್ಲೇಖವಿದ್ದಿಲ್ಲ. ಈ ರಿಜಿಸ್ಟರನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ ಮೇ ತಿಂಗಳ ಬಗ್ಗೆ ಬರೆಯಲಾದ ಅಂಕಿ ಸಂಖ್ಯೆಗಳು ಖೊಟ್ಟಿ ಎಂಬುದು ಕಂಡುಬಂದಿತು. ಆದ್ದರಿಂದ ಪ್ರತಿವಾದಿಗಳಿಗೆ ತಮ್ಮ ವಾದವನ್ನು ಸಿದ್ಧ ಮಾಡಲಾಗಲಿಲ್ಲ. ಅಂದರೆ, ಎರಡನೆಯ ಕುಮಾರನು 1909ರ ಮೇ 8ರ ರಾತ್ರಿ 11-45ಕ್ಕೆ ಸತ್ತಿರದೆ ಮೂರೂ ಸಂಜೆಗೆ ಸತ್ತನೆಂದೂ, ಸ್ಮಶಾನ ಯಾತ್ರೆಯು ಮೇ 9ರ ಬೆಳಗು ನಡೆಯದೆ ಮೇ 8ರ ಸಂಜೆಗೆ 9ರ ಸುಮಾರು ನಡೆಯಿತೆಂದೂ, ಆ ಸಮಯಕ್ಕೆ ಮಳೆಯಾಯಿತೆಂದೂ, ಮರಣದ ಕಾರಣ Beliary Colic ಅರ್ಸೆನಿಕ್ ವಿಷಪ್ರಯೋಗವೆಂದೂ ಸಿದ್ಧವಾಯಿತು.

ಹಾಗಾದರೆ ಕೊನೆಯ ಪ್ರಶ್ನೆಯು ಉಳಿಯಿತು. ಮೊದಲನೆಯ ಮುದ್ದೆಯಲ್ಲಿಯ ಮೊದಲನೆಯ ಭಾಗ. ಎರಡನೆಯ ಕುಮಾರನು ಜೀವಂತ ಇರುವನೆ? ಸತ್ತನೆಂದು ಸಿದ್ಧಮಾಡಲು ಪ್ರತಿವಾದಿಗಳಿಗೆ ಆಗಲಿಲ್ಲವೆಂಬ ಮಾತು ಒಂದು ಪಕ್ಷ ಎರಡನೆಯ ಕುಮಾರನು ಜೀವಂತವಾಗಿರುವನೆಂಬುದು ಇನ್ನೊಂದು ಸಂಗತಿ. ಇದರ ವಿವರವು ನಿರ್ಣಾಯಕ ನಿಕಾಲಿಗೆ ಅಗತ್ಯವಾಯಿತು.

ವಾದಿ ಸಂನ್ಯಾಸಿಯ ಪ್ರಕಾರ 1909 ಮೇ 8ರ ಮಧ್ಯಾಹ್ನಕ್ಕೆ ಅವನ ಸ್ಮೃತಿ ತಪ್ಪಿತು. ಅದಕ್ಕೆ ಕಾರಣ ಆರ್ಸೆನಿಕ್ ವಿಷಪ್ರಯೋಗ ಸ್ಮೃತಿ ತಪ್ಪಿದ್ದೇ 'ಸಾವು' ಎಂದು ನಿರ್ಣಯಿಸಿ ಸ್ಮಶಾನ ಯಾತ್ರೆ ಹೊರಟಿತು. ಹಳೆಯ ಸ್ಮಶಾನ ಮುಟ್ಟಿ ದಹನಕ್ರಿಯೆ ನಡೆವ ಮೊದಲು ಜೋರಾಗಿ ಮಳೆ-ಬಿರುಗಾಳಿ ಬಂದಿತು. ಸಮೀಪ ಎಲ್ಲಿಯೂ ನಿಲ್ಲಲು ಚಾಟು ಇಲ್ಲದರಿಂದ ಸ್ಮಶಾನಯಾತ್ರೆಗೆ ಬಂದವರು ಮಳೆ-ಬಿರುಗಾಳಿಗೆ ಹೆದರಿ ದೂರ ಚಾಟಿಗೆ ಹೋದರು. ಮಳೆಯ ಮೂಲಕವೋ, ಗಾಳಿಯ

ಮೂಲಕವೋ 'ಹೆಣ'ಕ್ಕೆ ಚೇತನ ಬಂದಿತು. ನರಳವುದಕ್ಕೆ ಪ್ರಾರಂಭವಾಯಿತು. ಸಮೀಪದ ಗವಿಯಲ್ಲಿ ನಾಲ್ವರು ಸಾಧುಗಳು ತಂಗಿದ್ದರು. ಅವರಲ್ಲಿ ಒಬ್ಬನು ನರಳುವ ಸಪ್ಪಳದ ಜಾಡು ಹಿಡಿದು ಬಂದು ನೋಡುತ್ತಾನೆ 'ಹೆಣ'ವಾಗಿದ್ದವನು ಚೇತರಿಸಿಕೊಳುತ್ತಿದ್ದಾನೆ. ಆ ಸಾಧುಗಳು ಆ 'ಹೆಣ'ವನ್ನು ತಮ್ಮ ಗವಿಗೆ ತೆಗೆದುಕೊಂಡು ಹೋಗಿ ಆರೈಕೆ ಮಾಡಿದರು. ಆಗ 'ಹೆಣ'ವು ಚಳಿಗೆ ನಡುಗುತ್ತಿತ್ತು. ಎರಡು ಮೂರು ದಿನಗಳ ನಂತರ ಎಚ್ಚರ ಬಂದಿತು. "ನಾನೆಲ್ಲಿದ್ದೇನೆ" ಎಂದನಂತೆ. ಎಚ್ಚರ ಬಂದರೂ ಸ್ಮರಣಶಕ್ತಿ ಹೋಗಿ ಬಿಟ್ಟಿದ್ದಿತು. ಈ ಎಲ್ಲ ಸಂಗತಗಳನ್ನೂ ಆ ಸಾಧುಗಳ ಪೈಕಿ ಒಬ್ಬನಾದ ದರ್ಶನದಾಸ ಎಂಬವನು ಕೋರ್ಟಿನಲ್ಲಿ ಸಾದ್ಯಂತವಾಗಿ ಹೇಳಿದನು.

ಮುಂದೆ ಎರಡನೆಯ ಕುಮಾರನು ಸಂನ್ಯಾಸಿಗಳ ಜತೆಗೆ ಅಲೆಯತೊಡಗಿದನು. ಅನೇಕ ವರುಷಗಳವರೆಗೆ ಸ್ಮರಣಶಕ್ತಿ ಬಂದಿರಲಿಲ್ಲ. ನರಮಂಡಲಗಳ ಆಘಾತ ಪಡೆವುದರಿಂದ ಇಂಥ ವಿಸ್ಮರಣ ಆಗುತ್ತದೆಯೆಂದು ಪರಿಣಿತರ ಅಭಿಪ್ರಾಯವು ನೆರವಿಗೆ ಬಂದಿತು. ವಾದಿ ಸಂನ್ಯಾಸಿಯು ತನ್ನ ಗುರುವಿನ ಹೆಸರು ಧರ್ಮ ದಾಸನೆಂದು ಹೇಳಿದನು. ತನ್ನ ವಿಸ್ಮರಣ ಹೋಗಿ ಮೊದಲಿನ ಜೀವನದ ಸಂಗತಿಗಳ ನೆನಪು ಬರುವವರೆಗೆ ಗುರುವಿನ ಆದೇಶದಂತೆ ಅಲೆದಾಡಿದನು. 11 ವರುಷಗಳ ನಂತರ ಸ್ಮೃತಿ ಸರಿಯಾಯಿತು. ಆಗ ಗುರುವು "ನೀನು ಮನೆಗೆ ಹೋಗುವ ಸಮಯ ಬಂದಿದೆ. ಮನೆಗೆ ಹೋಗು" ಎಂದು ಹೇಳಿದನು. ಅನಂತರ ತಾನು ಡಾಕಾಕ್ಕೆ ಬಂದು ಬಕ್ಲಂಡ ಬಂಡೆಯ ಮೇಲೆ ಕುಳಿತನು. ಅಲ್ಲಿ ಜನರು ತನ್ನ ಗುರುತು ಹಿಡಿದುದು ಮುಂದೆ ಮನೆಗೆ ಹೋದುದು, ಎಲ್ಲವನ್ನು ವಿವರವಾಗಿ ಚಾಚೂ ಬಿಡದೆ ಹೇಳಿದನು.

ಪ್ರತಿವಾದಿಯರು ಒಡ್ಡಿದ ಯಾವ ಅಡತಡೆಗಳೂ ನೆಲೆ ನಿಲ್ಲಲಿಲ್ಲ. ವಾದಿ ಸಂನ್ಯಾಸಿಯು ತನ್ನ ಅಸಲರ್ಜಿಯಲ್ಲಿ ಹೇಳಿದ ಎಲ್ಲ ಮಾತುಗಳೂ ಸಾಬೀತಾದವು. 1936ರ ಆಗಸ್ಟ 24ಕ್ಕೆ ದಾವೆಯ ಠರಾವು ಸಾರಲ್ಪಟ್ಟಿತು. ಠರಾವು 532 ಫುಲ್‌ಸ್ಕ್ಯಾಪ್ ಪುಟಗಳಷ್ಟು ದೊಡ್ಡದಾಗಿತ್ತು. ಅದರಲ್ಲಿ "ವಾದಿ ಸಂನ್ಯಾಸಿಯು ಭವಾಲ ರಾಜ್ಯದ ರಾಜಾ ರಾಜೇಂದ್ರ ನಾರಾಯಣರಾಯರ ಮಗ ಎರಡನೆಯ ಕುಮಾರ ರಾಮೇಂದ್ರ ನಾರಾಯಣರಾಯನು" ಎಂದು ಸ್ಪಷ್ಟವಾಗಿ ಸಾರಲಾಗಿದ್ದಿತು. ನ್ಯಾಯಾಲಯದಲ್ಲಿ ಕಿಕ್ಕಿರಿದು ತುಂಬಿದ ಜನಸ್ತೋಮವು ಜೈ ಜೈಕಾರ ಮಾಡಿತು.

ಏಳು ಊರು ಕೆರೆಯ ನೀರು ಕುಡಿಸಿ ಬಿಟ್ಟೇನು ಎಂದು ಮೀಸೆಯ ಮೇಲೆ ಕೈಹಾಕುವ ಜನ ನಮ್ಮಲ್ಲಿದ್ದಾರೆ. ಅದರಂತೆ ಮೂರು ಕೋರ್ಟಿನ ಕಟ್ಟೆ ಹತ್ತಿ ಸುತ್ತಸೆನ್ನುವರಿಗೇನೂ ಕಡಿಮೆಯಿಲ್ಲ. 1936 ಅಕ್ಟೋಬರ 5ಕ್ಕೆ ಕಲಕತ್ತಾ ಹಾಯಕೋರ್ಟಿನಲ್ಲಿ ಅಪೀಲು ದಾಖಲಾಯಿತು. 1940 ನವಂಬರ್ 25ಕ್ಕೆ ತೀರ್ಪು ಹೊರಬಿದ್ದಿತು. ಪ್ರತಿವಾದಿ ಅಪೆಲೆಂಟ್ ವಿಭಾವತಿದೇವಿಗೆ ಯಶ ಸಿಕ್ಕದೆ ವಾದಿ ಸಂನ್ಯಾಸಿ ರಾಮೇಂದ್ರ ನಾರಾಯಣನ ಮೂಲ ದಾವೆಯ ತೀರ್ಪು ಸ್ಥಿರಮಾಡಲ್ಪಟ್ಟಿತು. ಕಲಕತ್ತಾ ಹಾಯಕೋರ್ಟಿನಲ್ಲಿ ತೀರ್ಪುಗಳೇ ಡೆಮಿ 1-8ರ 874 ಪುಟಗಳಷ್ಟು ಅಚ್ಚಾಗಿದೆ.

ಇಲ್ಲಿಗೂ ದಾವೆಯ ಕತೆ ಮುಗಿಯದೆ ಸೋತವರು ಪ್ರಿವಿಕೌನ್ಸಿಲಿಗೆ ಅಪೀಲ ಮಾಡಿದರು. ಅಲ್ಲಿಯೂ ಯಶ ದೊರೆಯಲಿಲ್ಲ. 1946ರ ಜುಲೈ 30ಕ್ಕೆ ಕೊನೆಯ ನಿರ್ಣಯವು ಸಾರಲ್ಪಟ್ಟು, ವಾದಿ ಸಂನ್ಯಾಸಿಯು ಎರಡನೆಯ ಕುಮಾರ ರಾಮೇಂದ್ರ ನಾರಾಯಣನೆಂದು ಸಾಧಾರ ಸಾಬೀತಾಯಿತು. ದಾವೆಯು ಯಶಸ್ವಿಯಾಗಿ ಕೊನೆಗೊಂಡಿತು.

ಆದರೆ 26 ವರುಷಗಳವರೆಗೆ ಹೋರಾಟ ನಡೆಸಿದ ವಾದಿ ಸಂನ್ಯಾಸಿ ರಾಮೇಂದ್ರನು ಜರ್ಜರಿತನಾಗಿದ್ದನು. ತನ್ನ 1/3 ಪಾಲನ್ನು ಭವಾಲ ರಾಜ್ಯದ ಆಸ್ತಿಯಲ್ಲಿ ಪಡೆದರೂ, ಆರೋಗ್ಯ ಹಾಳಾಗಿ ಹೋಗಿದ್ದಿತು. ಮುಂದೆ ಒಂದೆರಡು ತಿಂಗಳಲ್ಲಿ ಎರಡನೆಯ ಕುಮಾರನು ತನ್ನ 63ನೆಯ ವಯಸ್ಸಿನಲ್ಲಿ ನಿಜವಾಗಿಯೇ ತೀರಿಕೊಂಡನು. ಯಾವನೋ ಸಂನ್ಯಾಸಿ ಹೊಂಚುಗಾರನು ಆಸ್ತಿಯ ಆಮಿಷಕ್ಕಾಗಿ ದಾವೆ ಹೂಡಿದ್ದನೆಂಬ ಅಪಕೀರ್ತಿಯಿಂದ ಮರಣ ಹೊಂದದೆ, ಭವಾಲ ರಾಜ್ಯದ ಎರಡನೆಯ ಕುಮಾರ ರಾಮೇಂದ್ರ ನಾರಾಯಣರಾಯನೆಂಬ ಹೆಸರಿನಲ್ಲಿ ರಾಜವೈಭವದಿಂದ, ಮನಸ್ಸಿನ ಸಮಾಧಾನದಿಂದ ಮರಣ ಹೊಂದಿದನೆಂಬುದೇ ಸಬಂಧಿಕರಿಗೆ, ಸಾರ್ವಜನಿಕರಿಗೆ ಆದ ಸಮಾಧಾನ. ●

# 'ಕಸ್ತೂರಿ'ಯ ಅರ್ಧವಾರ್ಷಿಕ ಪರಿವಿಡಿ

## ಮಾರ್ಚ್ 1988 ರಿಂದ ಅಗಸ್ಟ್ 1988ರವರೆಗೆ

ಕ್ರಮ: ಲೇಖನದ ಹೆಸರು, ತಿಂಗಳು, ಪುಟಸಂಖ್ಯೆ

ಮಾ.–ಮಾರ್ಚ್, ಏ.–ಏಪ್ರಿಲ್, ಮೆ.–ಮೇ, ಜೂ.–ಜೂನ್, ಜು.–ಜುಲೈ, ಅ.–ಅಗಸ್ಟ್.

### ಅನುಭವ



### ಆರೋಗ್ಯ-ವೈದ್ಯಕೀಯ



### ಇತಿಹಾಸ

### ಇದುವೆ ಜೀವ ಇದು ಜೀವನ



### ಕಥೆ



### ಕವನ-ಉವಾಚ



### ಚರ್ಚೆ-ಚಿಂತನ



ಶಾಲೆಗಳಿಂದ ಹೊರಬರುವ ಪ್ರತಿಯೊಬ್ಬ ಬಾಲಕ ಬಾಲಕಿಯೂ, ತಮಗೆಷ್ಟು ವಿಷಯಗಳ ಬಗ್ಗೆ ತಿಳಿದಿಲ್ಲ ಎಂದು ತಿಳಿದಿದ್ದಲ್ಲಿ, ಜೀವನದುದ್ದಕ್ಕೂ ಅವುಗಳನ್ನು ತಿಳಿಯುವ ಇಚ್ಛೆ ಅವರಲ್ಲಿ ಮೂಡುತ್ತಿದೆ. ಶಿಕ್ಷಣದ ಉದ್ದೇಶವೂ ಇದೇ ಆಗಿದ್ದಲ್ಲಿ, ಅದು ಇನ್ನು ಎಷ್ಟೋ ಹೆಚ್ಚು ಪರಿಣಾಮಕಾರಿಯಾಗಿರುತ್ತಿತ್ತು.

● ಸರ್ ವಿಲಿಯಮ್ ಹ್ಯಾಲೆ

ಸ್ವಲ್ಪ ಸಾಮಾನ್ಯ ಜ್ಞಾನ, ಸ್ವಲ್ಪ ಸಹನೆ ಹಾಗೂ ಸ್ವಲ್ಪ ಹಾಸ್ಯ ಪ್ರಜ್ಞೆ –ಇವುಗಳಿದ್ದಲ್ಲಿ ಈ ಗ್ರಹದ ಮೇಲಿನ ಬದುಕು ಎಷ್ಟು ಸುಖಕರವಾಗಿರುತ್ತದೆ ಎಂಬುದು ನಿಮಗೆ ಗೊತ್ತಿಲ್ಲ.

● ಸಾಮರ್ ಸೆಟ್ ಮಾಮ್

ನಿದ್ರೆ, ಶ್ರಿಮಂತಿಕೆ ಹಾಗೂ ಆರೋಗ್ಯ –ಈ ಮೂರನ್ನೂ ಸಂತೋಷದಿಂದ ಅನುಭವಿಸ ಬೇಕಿದ್ದಲ್ಲಿ, ಇವುಗಳಿಗೆ ಆಗಾಗ ತಡೆ ಇರಬೇಕು.

● ಜೀನ್ ಪಾಲ್ ಫ್ರೆಡರಿಕ್ ರಿಚ್ಟರ್

ಜನರು ತಪ್ಪು ಮಾಡದಂತೆ ನೋಡಿಕೊಳ್ಳುವುದು ಸರ್ಕಾರದ ಕೆಲಸವಲ್ಲ. ಆದರೆ ಸರ್ಕಾರ ತಪ್ಪು ಮಾಡದಂತೆ ನೋಡಿಕೊಳ್ಳುವುದು ಮಾತ್ರ ಜನರ ಕೆಲಸ.

● ಆರ್.ಹೆಚ್.ಜೆ.

Printed and published by **M.H. BELGAUMKAR** on behalf of Lokashikshana Trust at "SAMYUKTA KARNATAKA PRESS", No. 2, Residency Road, Bangalore-560 025. Managing Editor **K. SHAMA RAO.** Rep: Bombay: V. Satyamurthi. Phone: 5510502, Madras, S.K. Murti Phone: 414870. New Delhi: V.K. Chopra Phone: 7114785.

*Registered with the Registrar of Newspapers for India under No. 35/3957.*

# ಕೋಂಪ್ಲಾನ್ ಚಾಂಪಿಯನ್ಸ್!




"ಕೋಂಪ್ಲಾನ್ ಆರೋಗ್ಯಪೂರ್ಣ ಸರ್ವಾಂಗೀಣ ಬೆಳವಣಿಗೆಗಾಗಿ ಆದರ್ಶವಾಗಿದೆ."

— ಅನಿತಾ ಸೂದ್

Anita Sood

ರಾಷ್ಟ್ರೀಯ ಈಜುವ ಚಾಂಪಿಯನ್.

ಎಳೆಯರು ಈಜುವ ಪಂದ್ಯದಲ್ಲಿ ಪಳಗುವಂತೆ
ಅನಿತಾ ಸೂದ್ ಸಹಾಯ ಮಾಡುತ್ತಾಳೆ.
ಅವಳು ಕೋಂಪ್ಲಾನ್ ಶಿಫಾರಸು
ಮಾಡುತ್ತಾಳೆ. ಇದುವೆ ಆರೋಗ್ಯಪೂರ್ಣ
ಸರ್ವಾಂಗೀಣ ಬೆಳವಣಿಗೆಗಾಗಿ
ಸಂಪೂರ್ಣ ನಿಯೋಜಿತ ಆಹಾರ.
ನೆನಪಿನಲ್ಲಿರಲಿ, ಕೋಂಪ್ಲಾನ್ ಬೆಳೆಯುವ
ಮಕ್ಕಳಿಗೆ ಆದರ್ಶವಾದುದು.




**23**
ಪೋಷಕ ಆಹಾರಗಳು
ನಿಯೋಜಿತ
ಪ್ರಮಾಣದಲ್ಲಿ.
ಹಾಲು ಸೇರಿಸುವ ಅಗತ್ಯವಿಲ್ಲ

## ಕೋಂಪ್ಲಾನ್®

ಸಂಪೂರ್ಣ ನಿಯೋಜಿತ ಆಹಾರ.

GX/45/173KAN

VER PRINTED AT RAJHAN ENTERPRISES PHONE 3570

KASTURI PRICE: Rs. 300 Reg. no. KRNG 43
Licence No. L2120/wpp NO.33